# ಕುಂಚ ಲೋಕದ ಕೆ. ಎಸ್. ಸರೋದೆ



ಭಾವಚಿತ್ರ – ತೈಲವರ್ಣ



ಭೂದೃಶ್ಯ – ಜಲವರ್ಣ

ಗುಲ್ಬರ್ಗಾದಲ್ಲಿ ಕಿಶನರಾವ ಸದಾನಂದ ಸರೋದೆ (ಜನನ : ೧೯೩೫) ಸೈಯದ್ ಹುಸೇನರ ಮಾರ್ಗದರ್ಶನದಲ್ಲಿ ಹೈದರಾಬಾದ್ ಸರ್ಕಾರದ ಪರೀಕ್ಷೆಗೆ ವ್ಯಾಸಂಗ ಮಾಡಿ ನಂತರ ಮುಂಬಯಿಯ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ್‌ನಿಂದ ಪದವಿ ಪಡೆದರು.

ಭಾವಚಿತ್ರಣ, ನಕ್ಷಾಚಿತ್ರಣ, ಭೂದೃಶ್ಯ, ವರ್ಣಸಂಯೋಜನೆ ಇತ್ಯಾದಿಗಳಲ್ಲಿ ಇವರ ಆಸಕ್ತಿ ಅಪಾರ.

೨೦೦೪ನೇ ಸಾಲಿನ ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಗೌರವ ಪ್ರಶಸ್ತಿ ಪಡೆದಿದ್ದಾರೆ.

■ **ನಾರಾಯಣ ಎಂ. ಜೋಶಿ,** ಕಲಾವಿದ ಮತ್ತು ಛಾಯಾಗ್ರಾಹಕ, ಅಂಕಣಕಾರ
ಮನೆ ನಂ. ೨-೮೨೬, ಎಂ. ಆರ್. ಎಂ. ಸಿ. ಎದುರುಗಡೆ, ಸೇಡಂ ರಸ್ತೆ
ಗುಲ್ಬರ್ಗಾ - ೫೮೫ ೧೦೫



ಭಾವಚಿತ್ರ – ತೈಲವರ್ಣ



ಭೂದೃಶ್ಯ – ಜಲವರ್ಣ

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...



---


ಚಿತ್ರಗಳು : ವೇಲ್, ಜಿ. ಎಂ. ಬೊಮ್ನಳ್ಳಿ, ವಿವೇಕಾನಂದ, ರವೀಂದ್ರ ಸಭಾ, ಎನ್. ಆರ್. ಬೊಮ್ನಳ್ಳಿ , ರಾಂಚಂದ್ರ ಕೊಪ್ಪಲು

ಮುಖಪುಟ : ಎಚ್. ಎಸ್. ದೊರೆಸ್ವಾಮಿ, ವರ್ಣಚಿತ್ರ : ಕೆ. ಪಿ. ಸ್ವಾಮಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಕಾ**ನೂನಿನ ವ್ಯಾಪ್ತಿಯು ದೇಶದ ಎಲ್ಲ ಜನರಿಗೂ ಏಕಪ್ರಕಾರವಾಗಿದೆ ಎಂಬುದು ಇಂದು ಹೇಳಿಕೆ, ಸಂವಿಧಾನದಲ್ಲಿ ಸೇರಿರುವ ಒಂದು ಸೂಚನೆ. ಇದನ್ನು ನಂಬಿರುವ ಜನ ಯಾರಿದ್ದಾರೋ ತಿಳಿಯದು; ಅವರೇನಾದರೂ ಇದ್ದರೆ ಮಂಗಳಗ್ರಹದಲ್ಲಿ ಇರಲು ಯೋಗ್ಯರು! ತಮ್ಮನ್ನು ಹೊತ್ತುಕೊಳ್ಳಲು ಸಾಕಾಗುವಷ್ಟು ಹಣ ಉಳ್ಳವರಿಗೆ ಅನ್ವಯವಾಗುವ ಕಾನೂನೇ ಬೇರೆ. ಪ್ರಮೋದ ಮಹಾಜನ್ ಕುಟುಂಬದ ಇತ್ತೀಚಿನ ಘಟನೆಗಳು ಹಾಗೂ ಸೌಂದರ್ಯ ಪ್ರಜ್ಞೆಯ ಮಹಾಮಹಿಮ ಅಮಿತಾಭ ಬಚ್ಚನ್ ನಡೆವಳಿಕೆ ಇದಕ್ಕೆ ಒಂದು ಚಿಕ್ಕ ನಿದರ್ಶನ. ಆಮೋದ – ಪ್ರಮೋದಗಳಿಂದ ಉಲ್ಲಾಸಭರಿತ ಜೀವನವನ್ನು ನಡೆಸುತ್ತಿದ್ದ ಶ್ರೀ ಪ್ರಮೋದ ಮಹಾಜನ್ ಕೊಲ್ಲಲ್ಪಟ್ಟಾಗ ಅವರ ಬಳಿ ಎಷ್ಟು ಹಣವಿದ್ದಿತು, ಅಷ್ಟನ್ನೂ ಎಲ್ಲೆಲ್ಲಿ ಇಟ್ಟಿದ್ದರು, ಪಕ್ಷಕ್ಕೆ ಕೊಟ್ಟದ್ದೆಷ್ಟು, ಕೊಡದೆ ತಮ್ಮ ಬಳಿಯಲ್ಲೇ ಉಳಿಸಿಕೊಂಡಿದ್ದೆಷ್ಟು, ಇತ್ಯಾದಿ ಮುಖ್ಯ ಪ್ರಶ್ನೆಗಳಿಗೆ ಎಂದೆಂದೂ ಉತ್ತರ ದೊರೆಯುವುದಿಲ್ಲ. ಅವರ ಬಳಿ ಕನಿಷ್ಠ ಮೂರು ಸಾವಿರ ಕೋಟಿ ರೂಪಾಯಿಗಳಿದ್ದಿರಬೇಕೆಂದು ಒಂದು ಮೂಲದ ಮಾಹಿತಿ. ಪ್ರಮೋದರು ಆಸ್ಪತ್ರೆಯಲ್ಲಿ ಇನ್ನೂ ಜೀವನ್ಮರಣ ಯುದ್ಧ ನಡೆಸುತ್ತಿದ್ದಾಗ ಅವರ ಪಕ್ಷದ ನಾಯಕರಲ್ಲಿ ತಳಮಳ ಉಂಟಾಗಿದ್ದುದಕ್ಕೆ ಈ ಹಣದ ಭವಿಷ್ಯದ ಯೋಚನೆಯೂ ಒಂದು ಕಾರಣ. ಬಹುಶಃ ಪ್ರಮೋದರ ಸೋದರರ ಹೀನಕೃತ್ಯಕ್ಕೂ ಇಷ್ಟೊಂದು ಭಾರಿ ಮೊತ್ತದ ಹಣಕ್ಕೂ ಸಂಬಂಧವಿರಲಿಲ್ಲವೆಂದು ದೃಢವಾಗಿ ಹೇಳಲಾಗದು. ಪ್ರಮೋದರ ಸುಪುತ್ರನ ಜೀವನಶೈಲಿಯು ಸಾಮಾನ್ಯ ಹಣವಂತರಿಗೆ ಕೂಡಿಬರುವುದಿಲ್ಲ. ಅದು ದಿಢೀರ್ ಶ್ರೀಮಂತಿಕೆಯ ವಿಚಿತ್ರ ಲಕ್ಷಣ. ತಾನು ಅನೈತಿಕವಾದದ್ದೇನೂ ಮಾಡಿಲ್ಲ, ಕಾನೂನಿಗೆ ಭಂಗ ತರುವಂಥದನ್ನೇನೂ ಮಾಡಿಲ್ಲವೆಂದು ರಾಹುಲ್ ಹೇಳಿರುವುದನ್ನು ಕಾನೂನು ರೀತ್ಯಾ ಮುಂದಿನ ದಿನಗಳಲ್ಲಿ ಸಮರ್ಥಿಸುವ ವಿಕಟ ಪ್ರಸಂಗ ಜಾರಿಗೆ ಬರುತ್ತದೆ. ಆಸ್ಪತ್ರೆ, ರಾಜಕೀಯ ಒತ್ತಡ ಮತ್ತು ಪೊಲೀಸರ ದೌರ್ಬಲ್ಯ, ಇವೆಲ್ಲಾ ಅದರ ಹಿನ್ನೆಲೆಯಲ್ಲಿ ಕೆಲಸ ಮಾಡುತ್ತವೆ. ರಾಹುಲ್ ಮಾದಕ ವಸ್ತುವನ್ನು ಸೇವಿಸಲಿಲ್ಲ ಎಂಬುದು ಖಚಿತವಾದರೆ ಅವರಿಗೆ ಅಪೊಲೋ ಆಸ್ಪತ್ರೆಗೆ ರಾತ್ರಿ ಎರಡು ಗಂಟೆಗೆ ಹೋಗುವ ತುರ್ತು ಏಕೆ ಉಂಟಾಯಿತೆಂಬ ಪ್ರಶ್ನೆ ಉಳಿಯುತ್ತದೆ. ವಾಜಪೇಯಿ, ಸುಷ್ಮಾ ಸ್ವರಾಜ್, ಅದ್ವಾನಿ, ವೆಂಕಯ್ಯ, ಮುಂತಾದವರು ಒಬ್ಬಬ್ಬರೂ ಒಂದೊಂದು ರೀತಿಯ ಹೇಳಿಕೆಗಳನ್ನು ನೀಡಿರುವುದರ ಹಿಂದಿನ ನಿಗೂಢತೆಯನ್ನು ಭೇದಿಸಲು ಪುರುಷೋತ್ತಮ – ರಾಮನಾಥರಂತಹ ಘಾಟಿ ಪತ್ತೇದಾರರು ಬೇಕಾಗುತ್ತಾರೆ. ಪೊಲೀಸ್ ಮತ್ತು ಸಿ.ಬಿ.ಐ.ನಲ್ಲಿ ಅಂಥವರಿಲ್ಲವಾದ್ದರಿಂದ ಅಪೋಲೋನ ಡಾ॥ ರೆಡ್ಡಿ ಹೇಳುವುದೇ ಕಡೆಗೆ ಪರಮ ಸತ್ಯವಾಗಿಬಿಡುವ ಸಾಧ್ಯತೆಯೇ ಹೆಚ್ಚು. ಹಣದ ಶಕ್ತಿಯು ಕಾನೂನನ್ನು ತನ್ನ ಪರ ಮಾಡಿಕೊಳ್ಳಲು ಅಸಮರ್ಥವಾದರೆ ಇನ್ನು ಹಣವಿದ್ದು ಪ್ರಯೋಜನವೇನು ? ಯುವಕ ರಾಹುಲ್‌ಗೆ ಇದು ಗೊತ್ತಾಗುವಷ್ಟು ಪ್ರೌಢಿಮೆ ಅವರಲ್ಲಿದೆಯೆಂದು ಭಾವಿಸುವುದು ತಪ್ಪಲ್ಲ. ಅಮಿತಾಭ್ ಎಂದರೆ ಲೆಕ್ಕವಿಲ್ಲದಷ್ಟು ಬೆಳಕು ಅಥವಾ ಪ್ರಕಾಶ ಎಂದರ್ಥ. ಬೆಂಗಳೂರಿನಲ್ಲಿ ಅವರು ಸೌಂದರ್ಯ ಸ್ಪರ್ಧೆ ನಡೆಸಿ ಬೇಕಾದಷ್ಟು ಜನರಿಗೆ ಮತ್ತು ಸಂಸ್ಥೆಗಳಿಗೆ ಪಂಗನಾಮ ಬಳಿದು ತಮ್ಮ ಎಲ್ಲ ಜೇಬುಗಳನ್ನೂ ತುಂಬಿಕೊಂಡರು. ಆ ಸಂಬಂಧದಲ್ಲಿ ಪ್ರತಿಭಟಿಸಿದ್ದವರ ಎಲ್ಲ ಮೊಕದ್ದಮೆಗಳೂ ಇನ್ನೂ ವಜಾ ಆಗಿಲ್ಲ. ನಮ್ಮ ಕಾನೂನು ವ್ಯವಸ್ಥೆ ಅಷ್ಟು ಬಿಗಿಯಾದುದು. ಬಚ್ಚಾ ಎಂಬ ಹೆಸರಿದ್ದರೂ ನಿಧಾನವಾಗಿ ಬುಡ್ಡಾ ಆಗುತ್ತಿರುವ ಅಮಿತಾಭರಿಗೆ ಕಾನೂನಿನ ನಿರ್ಬಂಧ ಇರುವಂತಿಲ್ಲ. ವೆಂಕಯ್ಯ ನಾಯ್ಡು ಸಹ ಅವರಿಗೆ ರಕ್ಷಕರಾಗಲು ಗುರಾಣಿ ಹಿಡಿದು ನಿಂತಿದ್ದಾರೆ. ಅವರ ಘೋಷಿತ ಸಂಪತ್ತು ಮುನ್ನೂರು – ನಾಲ್ಕುನೂರು ಕೋಟಿ ಇರಬೇಕು. ಗಾಂಧೀಜಿ ಕನ್ನಡಕಕ್ಕೆ ಎರಡು ರೂಪಾಯಿ ಇತ್ತು; ಅಮಿತಾಭರದು ಎರಡು ಲಕ್ಷಕ್ಕೂ ಹೆಚ್ಚಿನದು ಎನ್ನಲಾಗಿದೆ. ಆದಾಯ ತೆರಿಗೆ ಪಾವತಿ ಮಾಡಿರೆಂದು ಸರ್ಕಾರಿ ಇಲಾಖೆಯು ಅವರಿಗೆ ತಿಳಿಸಿದರೆ ಅವರ ಅಭಿಮಾನಿ ದೇವರುಗಳು ಸಿಟ್ಟಿಗೇಳುತ್ತಾರೆ, ಅಮರ್ ಸಿಂಗ್ ರೇಗಾಡುತ್ತಾರೆ. ದೇಹಾರೋಗ್ಯ ಹೇಗಿದೆ ಎಂಬುದನ್ನು ಸಂಶೋಧಿಸಿ ತಿಳಿದುಕೊಂಡು ಆಮೇಲೆ ಮಾತ್ರವೇ ತೆರಿಗೆಯ ತಗಾದೆ ಪತ್ರವನ್ನು ಅಮಿತಾಭರಂತಹ ಶ್ರೇಷ್ಠರಿಗೆ ಆದಾಯ ತೆರಿಗೆ ಇಲಾಖೆ ಕಳಿಸಬೇಕೆಂದು ವೆಂಕಯ್ಯ ಆಗ್ರಹಿಸಿದ್ದಾರೆ. ವೆಂಕಯ್ಯನವರಿಗೇ ಅಂಥದನ್ನು ರವಾನಿಸುವ ಸನ್ನಿವೇಶ ಬಂದರೆ ಅವರ ಮಾನಸಿಕ ಆರೋಗ್ಯವನ್ನೂ ತನಿಖೆ ಮಾಡಿ ಆಮೇಲೆ ತೆರಿಗೆಗಾಗಿ ಬೇಡಿಕೆ ಸಲ್ಲಿಸಬೇಕೆಂದು ತೋರುತ್ತದೆ.

ನಮ್ಮ ದೇಶಕ್ಕೆ ಏನಾಗುತ್ತಿದೆ ? ತೆರಿಗೆ ವಂಚಕರಿಗೆ ಬೆಂಬಲ ನೀಡಲು ಪ್ರತಿಭಟನೆ ಸಲ್ಲಿಸುವವರು ನಾಳೆ ಯಾವನೋ ಕೊಲೆಗಾರನಿಗೆ ಶಿಕ್ಷೆ ವಿಧಿಸಕೂಡದೆಂದು ಮೆರವಣಿಗೆ ಹೊರಡುತ್ತಾರೆ. ವನ್ಯಮೃಗಗಳನ್ನು ಕೊಂದರೂ ಸರಿ, ನಗರ ಜೀವಿಯನ್ನು ಕೊಂದರೂ

೭ನೇ ಪುಟಕ್ಕೆ



ತಿಂಗಳ ಪತ್ರಿಕೆ
ಹೊಸತು
ನಿಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೭ ಸಂಚಿಕೆ-೧೨ ಜುಲೈ ೨೦೦೬

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೮೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@vsnl.com
website : www.navakarnatakabooks.com

**ಸಂಪಾದಕೀಯ**

# ಅಮ್ಮಾ, ನೀ ಗುಮ್ಮನ ಕರೆಯದಿರೆ...

ಸರಿಯಾಗಿ ಮೂವತ್ತು ವರ್ಷಗಳ ಹಿಂದೆ ಜೂನ್ ತಿಂಗಳಲ್ಲಿ ಸೊವೆಟೋ ಪ್ರತಿಭಟನೆಗಳು ಪ್ರಚಂಡವಾಗಿ ಬೆಳೆದು ಅಂದಿನ ಬಿಳಿಯರ ಸರ್ಕಾರವು ನಡುಗಿಹೋಯಿತು. ದಕ್ಷಿಣ ಆಫ್ರಿಕಾದ ವಿಮೋಚನಾ ಹೋರಾಟದಲ್ಲಿ ಅದೊಂದು ಪ್ರಮುಖ ತಿರುವನ್ನು ತಂದುಕೊಟ್ಟ ಘಟನೆ. ಅದಕ್ಕೆ ಎಷ್ಟೋ ವರ್ಷಗಳ ಮುಂಚೆ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್‌ನ ನೇತೃತ್ವದಲ್ಲಿ ಜರುಗಿದ ಒಂದು ಬೃಹತ್ ಸಮಾವೇಶದಲ್ಲಿ ದಕ್ಷಿಣ ಆಫ್ರಿಕಾದ ಜನತೆಯು ''ಸ್ವಾತಂತ್ರ್ಯದ ಶಾಸನಪತ್ರ''ವನ್ನು ಅಂಗೀಕರಿಸಿತ್ತು. ಅದರಲ್ಲಿ ನಮೂದಿಸಲಾಗಿದ್ದ ಆಶಯಗಳ ಪೂರೈಕೆಗಾಗಿ ವಿಮೋಚನಾ ಹೋರಾಟವು ಪ್ರಥಮ ಆದ್ಯತೆ ನೀಡುವುದಾಗಿ ಭಾವಿಸಲಾಗಿತ್ತು. ದೇಶದ ಎಲ್ಲ ಜನರಿಗೆ ಅಗತ್ಯವಾಗಿ ದೊರಕಬೇಕಾದ ಕನಿಷ್ಠ ಸೌಲಭ್ಯಗಳನ್ನು ಆ ''ಚಾರ್ಟರ್'' ಗುರುತಿಸಿತ್ತು ಮತ್ತು ಅದಕ್ಕಾಗಿ ಯಾವ ಆರ್ಥಿಕ-ಸಾಮಾಜಿಕ ಸೂತ್ರಗಳನ್ನು ತಪ್ಪದೆ ಅಳವಡಿಸಿಕೊಳ್ಳಬೇಕೆಂಬುದನ್ನು ಸೂಚಿಸಿತ್ತು. ''ರಿವೋನಿಯ ಮೊಕದ್ದಮೆ'' ನಡೆದದ್ದು ಇದರ ತರುವಾಯದಲ್ಲಿ. ನೆಲ್ಸನ್ ಮಂಡೇಲ, ವಾಲ್ಟರ್ ಸಿಸುಲು, ಗೊವಾನ್ ಅಂಬೇಕಿ ಮುಂತಾದ ಮೊದಲ ಸಾಲಿನ ನಾಯಕರು ರಾಬೆನ್ ದ್ವೀಪದಲ್ಲಿ ಬಂಧನದಲ್ಲಿರಿಸಲಾಗಿದ್ದು ಈ ಮೊಕದ್ದಮೆಯ ತೀರ್ಪಿನ ಫಲವಾಗಿ. ಅಂದಿನ ಅಂಬೇಕಿಯ ಮಗ ಈಗ ದಕ್ಷಿಣ ಆಫ್ರಿಕಾದ ಅಧ್ಯಕ್ಷ. ಮಂಡೇಲರು ಅಧ್ಯಕ್ಷರಾಗಿದ್ದಾಗಲೇ ''ಸ್ವಾತಂತ್ರ್ಯದ ಶಾಸನಪತ್ರ'' ನಿಧಾನವಾಗಿ ಅಪ್ರಸ್ತುತವಾಗತೊಡಗಿತ್ತು; ಅವರ ಸರ್ಕಾರ ಅನುಸರಿಸಿದ್ದು ಅಂತಹ ಆರ್ಥಿಕ ನೀತಿಯನ್ನು. ನಮ್ಮ ದೇಶದಲ್ಲಿ ೧೯೯೦ರ ದಶಕದಲ್ಲಿ ಆರಂಭವಾದ ಮುಕ್ತ ಮಾರುಕಟ್ಟೆಯ ಪ್ರಕ್ರಿಯೆಯನ್ನು ''ರಾಜನಿಕ ಹೊಂದಾಣಿಕೆ''ಯೆಂದು ಕರೆಯಲಾಯಿತು. ಆಮೇಲೆ ಜಾಗತೀಕರಣದ ಹೆಸರಿನಲ್ಲಿ ಅತ್ಯಂತ ಕ್ರೂರವಾದ ಜನವಿರೋಧಿ ಆರ್ಥಿಕ ನೀತಿಗಳನ್ನು ಕೇಂದ್ರದಲ್ಲಿ ಬಂದ ಎಲ್ಲ ಸರ್ಕಾರಗಳೂ ಅನುಸರಿಸುತ್ತಾ ಬಂದಿವೆ. ಅದರಲ್ಲಿ ಮನಮೋಹನ ಸಿಂಗ್ ಮತ್ತು ವಾಜಪೇಯಿ ಸರ್ಕಾರಗಳಲ್ಲಿ ಗಮನಾರ್ಹವಾದ ವ್ಯತ್ಯಾಸಗಳೇನೂ ಇಲ್ಲ. ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್‌ನಂತಹ ಗಟ್ಟಿಯಾದ ರಾಜಕೀಯ ಪಕ್ಷವು ತನ್ನ ಮೂಲಭೂತ ಪ್ರಣಾಲಿಕೆಯನ್ನು ಕೈಬಿಟ್ಟಿರುವಾಗ ಬೇರೆ ಬೇರೆ ರಾಜಕೀಯ ಪಕ್ಷಗಳ ಮಿಶ್ರಣದಿಂದ ಅಸ್ತಿತ್ವಕ್ಕೆ ಬಂದ ಭಾರತದ ಕೇಂದ್ರ ಸರ್ಕಾರಗಳು ತಾವು ಘೋಷಿಸಿದ್ದ ಸೂತ್ರಗಳನ್ನು ಕಸದಬುಟ್ಟಿಗೆ ತುರುಕಿದ್ದರೆ ಆಶ್ಚರ್ಯವೆಲ್ಲಿಯದು! ಬಾಧೆ, ಸಿಟ್ಟು ಮತ್ತು ಆತಂಕ ಇರಬಹುದು, ಆದರೆ ಆಶ್ಚರ್ಯವೇನೂ ಇಲ್ಲ. ವಾಜಪೇಯಿ - ಅದ್ವಾನಿ - ಜಸವಂತ ಸಿಂಗ್‌ರ ತ್ರಿಕೂಟಕ್ಕೂ ಮನಮೋಹನ ಸಿಂಗ್ - ಚಿದಂಬರಂ - ಅಹ್ಲುವಾಲಿಯಾ ಷಡ್ಯಂತ್ರಕೂಟಕ್ಕೂ ಅಷ್ಟೇನೂ ವ್ಯತ್ಯಾಸವಿಲ್ಲ. ಸಮಕಾಲೀನ ಇತಿಹಾಸದ ವ್ಯಂಗ್ಯಗಳಲ್ಲಿ ಇದೂ ಒಂದು. ಇನ್ನೂ ಎಷ್ಟು ಪಾತಕಗಳು ಈ ವ್ಯಂಗ್ಯವನ್ನು ವಿಕಾಸಗೊಳಿಸುತ್ತವೋ ಕಾದುನೋಡಬೇಕು.

ಸ್ವಾತಂತ್ರ್ಯಾನಂತರದಲ್ಲಿ ಸೊವೆಟೋ ಹೋರಾಟಕ್ಕೆ ಸಮನಾದ ಹೋರಾಟ ಯಾವುದೂ ನಮ್ಮಲ್ಲಿ ನಡೆದಿಲ್ಲವೆಂದರೆ ನಮ್ಮ ಯಾವ ಚಳುವಳಿಕಾರರೂ ಕ್ರುದ್ಧರಾಗುವುದಿಲ್ಲವೆಂದು ಭಾವಿಸಬಹುದು. ಆದರೆ ''ಸ್ವಾತಂತ್ರ್ಯ ಶಾಸನಪತ್ರ''ಕ್ಕೆ ಸಮನಾದ ಘೋಷಣಾ ಪತ್ರಗಳು ನಮ್ಮಲ್ಲಿ ಹತ್ತಾರು ಬಂದುಹೋಗಿವೆ. ನೆಹರು ಯುಗದ ''ಭವಿಷ್ಯದೊಡನೆ ಸಮಾಗಮ''ದ ಸಂಕಲ್ಪದಿಂದ ಹಿಡಿದು ಸಂವಿಧಾನದಲ್ಲಿ ಉಲ್ಲೇಖಿಸಿರುವ ಪೀಠಿಕಾವಾಕ್ಯಗಳು, ಸಮಾಜವಾದಿ ವ್ಯವಸ್ಥೆಯ ನಿರ್ಮಾಣದ ಧ್ಯೇಯ, ಬಡತನವನ್ನು ಓಡಿಸಿ ಎಂಬ ಘೋಷಣೆ, ಇಪ್ಪತ್ತು ಅಂಶಗಳ ಕಾರ್ಯಕ್ರಮ, ಎರಡನೇ ಸ್ವಾತಂತ್ರ್ಯ, ಮುಕ್ತತೆಯಿಂದ ಸರ್ವಾಂಗೀಣ ಬೆಳವಣಿಗೆ, ಭಾರತ ಪ್ರಕಾಶಿಸುತ್ತಿದೆ, ಎಲ್ಲವೂ ಆಗಿಹೋಗಿವೆ. ಆದರೆ ನಿರುತ್ಸಾಹದ ಜೀವನ ಸವೆಸುತ್ತಿರುವ ಕೋಟಿಗಟ್ಟಲೆ ಜನ ಮಾತ್ರ ಇನ್ನೂ ''ಅಲ್ಲೇ ಕುಂತವರೆ''. ಹಾಗೆ ಕುಂತಿರುವವರನ್ನು ಎಬ್ಬಿಸಿ ಚೈತನ್ಯದ ಚಿಲುಮೆಯಲ್ಲಿ ಅವರನ್ನು ಮೀಯಿಸುವ ಭರವಸೆಯನ್ನು ಮನಮೋಹನ ಸಿಂಗ್ ಸಮ್ಮಿಶ್ರ ಸರ್ಕಾರವು ತನ್ನ ''ಸಾಮಾನ್ಯ ಕನಿಷ್ಠ ಕಾರ್ಯಕ್ರಮ''ದಲ್ಲಿ ನೀಡಿದೆ. ಆದರೆ ಅದು ಅಸ್ತಿತ್ವಕ್ಕೆ ಬಂದಾಗಿನಿಂದ ಅದರಲ್ಲಿರುವ ಯಾವ ಆಶಯವನ್ನೂ ಗಂಭೀರವಾಗಿ ಪರಿಗಣಿಸಿ ಅದರ ಪೂರೈಕೆಯ ಹಾದಿಯಲ್ಲಿ ನಡೆದದ್ದಿಲ್ಲ; ಬದಲಾಗಿ, ಅವುಗಳನ್ನು ಕಡೆಗಣಿಸಿ ವ್ಯತಿರಿಕ್ತ ದಿಕ್ಕಿನಲ್ಲಿ ದಾಪುಗಾಲು ಹಾಕುತ್ತಾ ದೇಶವನ್ನು ಬಿಕ್ಕಟ್ಟಿಗೆ ಸಿಲುಕಿಸಿದೆ. ಇತ್ತೀಚೆಗಿನ ಪೆಟ್ರೋಲ್ ಬೆಲೆ ಏರಿಕೆಯು ಅಂತಹ ಮಹತ್ವದ್ದಲ್ಲವೆಂಬ ಭಾವನೆ ಬರುವಷ್ಟರಮಟ್ಟಿಗೆ ಕೇಂದ್ರ ಸರ್ಕಾರವು ದೇಶದ ಆರ್ಥಿಕ ಸ್ಥಿತಿ ಮತ್ತು ವ್ಯವಸ್ಥೆಯ ಬಗ್ಗೆ ಚೆಲ್ಲಾಟವಾಡಿದೆ. ಕೆಲವು ಅಂತಹ ಸಂಗತಿಗಳನ್ನು ಗಮನಿಸಬಹುದು : ಗುರ್‌ಗಾಂವ್‌ನಲ್ಲಿ ನಡೆದಂತೆ ದುಡಿಯುವವರನ್ನು ಬಡಿಯುವುದು, ನರ್ಮದಾ - ಕುದುರೆಮುಖ ಮುಂತಾದೆಡೆ ನಿರ್ವಸಿತರನ್ನು ನಿರ್ಗತಿಕರನ್ನಾಗಿಸುವುದು, ರಾಷ್ಟ್ರೀಕೃತ ಬ್ಯಾಂಕುಗಳನ್ನು ಖಾಸಗಿಯಾಗಿಸಿ ಗ್ರಾಮಾಂತರ ಪ್ರದೇಶದ ರೈತರಿಗೆ ಚಿಕ್ಕಾಸೂ ಸಾಲ ಸಿಗದಂತೆ ಮಾಡುವುದು, ಬ್ಯಾಂಕುಗಳಿಂದ ಕೋಟಿಗಟ್ಟಲೆ ಸಾಲ ಪಡೆದಿರುವ ದೊಡ್ಡ ಕುಳಗಳ ಸಾಲವನ್ನು ವಜಾ ಮಾಡುವುದು, ಒರಿಸ್ಸಾದಲ್ಲಿದ್ದಂತೆ ಖನಿಜವನ್ನು ಬೇಕಾಬಿಟ್ಟಿಯಾಗಿ ವಿದೇಶಕ್ಕೆ ಬಿಟ್ಟುಕೊಟ್ಟು ಅಲ್ಲಿಯ ಸ್ಥಳೀಯರನ್ನು ಪ್ರತಿಭಟಿಸಿದ್ದಕ್ಕೆ ಗುಂಡಿಕ್ಕಿ ಕೊಲ್ಲುವುದು, ಸಣ್ಣ ಉಳಿತಾಯ ಮಾಡಿದ್ದವರ ಹಣವನ್ನು ಸ್ಟಾಕ್ ಎಕ್ಸ್‌ಚೇಂಜ್‌ನ ತಿಮಿಂಗಿಲಗಳಿಗೆ ಕೊಟ್ಟು ಇವರಿಗೆ ಬಗ್ಗುಡದ ನೀರು ಕುಡಿಸುವುದು, ಕೃಷಿ ಉತ್ಪನ್ನಗಳ ಬೆಲೆಯನ್ನು ನಿಗದಿಗೊಳಿಸಿ ರೈತರ ಶ್ರಮಕ್ಕೆ ಸೂಕ್ತ ಮನ್ನಣೆ ನೀಡುವುದರ ಬದಲು ವಿದೇಶಿ ಉತ್ಪನ್ನಗಳನ್ನು ಮಾರುಕಟ್ಟೆಗೆ ತಂದು ರೈತರನ್ನು ಆತ್ಮಹತ್ಯೆಯತ್ತ ದೂಡುವುದು, ಉದ್ಯೋಗ ಭರವಸೆಯ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳದಿರುವುದು, ಮಾಹಿತಿ ತಂತ್ರಜ್ಞಾನವೊಂದೇ ದೇಶದ ಬೆನ್ನೆಲುಬು ಎನ್ನುವಂತೆ ಉಳಿದ ಬೇರೆ ಕ್ಷೇತ್ರಗಳನ್ನು ನಿರ್ಲಕ್ಷಿಸುವುದು, ವಿಮಾನ ನಿಲ್ದಾಣಗಳ ಕಾಮಗಾರಿ ಮುಂತಾದುವನ್ನು ಖಾಸಗಿಯವರಿಗೆ ಕನಿಷ್ಠ ಮೊತ್ತಕ್ಕೆ ಕೊಟ್ಟುಬಿಡುವುದು, ಶಿಕ್ಷಣ ಕ್ಷೇತ್ರದ ನಿರಂತರ ಅವ್ಯವಹಾರಗಳಿಗೆ ಕಡಿವಾಣ ಹಾಕದಿರುವುದು, ವಿದ್ಯುಚ್ಛಕ್ತಿ ಉತ್ಪಾದಿಸುವ ಪರಮಾಣು ಸ್ಥಾವರಗಳಿಗೆ ಇಂಧನ ಪೂರೈಸುವ ಹೆಸರಿನಲ್ಲಿ ದೇಶದ ಇಡೀ ಶಕ್ತಿಮೂಲಗಳನ್ನು ಅಮೆರಿಕಾದ ಹತೋಟಿಗೆ ಬಿಟ್ಟುಕೊಡುವುದು, ಅಮೆರಿಕಾದ ಗುಲಾಮಗಿರಿಗೆ ಹಾತೊರೆಯುವ ಮನೋಭಾವದಿಂದ ಇರಾನಿನ ವಿರುದ್ಧ ಮತ ಚಲಾಯಿಸಿ ದೇಶದ ಸಾರ್ವಭೌಮತ್ವವನ್ನು ಮಣ್ಣುಪಾಲು ಮಾಡುವುದು, ನಿವೃತ್ತಿ ವೇತನದ ವಹಿವಾಟನ್ನು ಖಾಸಗೀಕರಣಕ್ಕೆ ಗುರಿ ಮಾಡುವುದು, ಮಹಿಳೆಯರಿಗೆ ಶಾಸನಸಭೆಗಳಲ್ಲಿ ನೀಡಬೇಕಾದ ಪಾಲನ್ನು ನೀಡಲು ಸೂಕ್ತ ಮಸೂದೆಯನ್ನು ಈವರೆವಿಗೂ ಮಂಡಿಸದಿರುವುದು, ಕೋಮುವಾದದ ದಳ್ಳುರಿಯನ್ನು ನೀಗಿಸಲು ಬೇಕಾದ ಕ್ರಮಗಳನ್ನು ಕೈಗೊಳ್ಳದಿರುವುದು, ಬುಷ್ ಮತ್ತು ಅವನ ನಾಯಿಗಳನ್ನು ಗಾಂಧೀಜಿ ಸಮಾಧಿಯ ಬಳಿ ಬಿಟ್ಟು ಅಂತರರಾಷ್ಟ್ರೀಯ ಭಯೋತ್ಪಾದಕನಿಗೆ ಮಣೆ ಹಾಕುವುದು, ಇತ್ಯಾದಿ. ಈ ಪಟ್ಟಿಯನ್ನು ಇನ್ನೂ ಬೆಳೆಸುತ್ತಲೇ ಹೋಗಬಹುದು. ವಾಜಪೇಯಿ ಸರ್ಕಾರ ಮಾಡಬಹುದಾಗಿದ್ದ ಎಲ್ಲ ಅನೀತಿಯುತ ಕ್ರಮಗಳೂ

ಮನಮೋಹನ ಸಿಂಗ್ ಸರ್ಕಾರದಡಿಯಲ್ಲಿ ಕಾಣಸಿಗುತ್ತವೆ. ಕೋಮುವಾದಿತ್ವವನ್ನು ಸೋಲಿಸಲು ಸಹ ಈ ಸರ್ಕಾರಕ್ಕೆ ಸಾಮರ್ಥ್ಯವಿಲ್ಲ, ಆಕಾಂಕ್ಷೆಯಿಲ್ಲ ಇಂತಹ ಅಸಹ್ಯಕರವಾದ ಜನವಿರೋಧಿ ಸರ್ಕಾರ ಇರಬೇಕೇಕೆ ಎಂಬ ಪ್ರಶ್ನೆ ಪದೇಪದೇ ಜನರನ್ನು ಕಾಡುವಂತಾಗಿದೆ.

ತನಗೆ ಸ್ವಂತದ ಬಹುಮತವಿಲ್ಲದ ಕಾಂಗ್ರೆಸ್ ಪಕ್ಷವು ಬೇರೆ ಕೆಲವು ಪಕ್ಷಗಳ ಬೆಂಬಲದಿಂದ ಸರ್ಕಾರ ನಡೆಸುತ್ತಿರುವಾಗಲೂ ಸ್ವೇಚ್ಛೆಯಿಂದ ದೇಶದ ಆರ್ಥಿಕ ಮತ್ತು ವಿದೇಶಾಂಗ ವ್ಯವಹಾರಗಳನ್ನು ರೂಪಿಸ ಹೊರಟಿದೆ. ಇನ್ನು ಬಹುಮತವಿದ್ದು ಬೇರೆಯವರ ಬೆಂಬಲ ಅನಗತ್ಯವಾಗುವಂತಿದ್ದರೆ ಇನ್ನೆಷ್ಟು ಅಟಾಟೋಪವಿರುತ್ತಿತ್ತೆಂದು ಊಹಿಸಬಹುದು. ಬೇರೆ ಪಕ್ಷಗಳು ಈ ಸರ್ಕಾರಕ್ಕೆ ಸಮರ್ಥನೆ ನೀಡುತ್ತಿರುವುದು ವಾಜಪೇಯಿ - ಅದ್ವಾನಿ - ಸುದರ್ಶನ್ ಕೂಟವನ್ನು ದೂರವಿಡುವುದಕ್ಕಾಗಿ ಮಾತ್ರವೆಂಬುದು ಕಾಂಗ್ರೆಸ್‌ಗೆ ತಿಳಿದಿದೆ. ಹೀಗೆ ಸಮರ್ಥನೆ ನೀಡುವ ಸಲುವಾಗಿಯೇ ಸಾಮಾನ್ಯ ಕನಿಷ್ಠ ಕಾರ್ಯಕ್ರಮವೊಂದನ್ನು ರೂಪಿಸಿದ್ದು. ಆದರೆ ಕಾಂಗ್ರೆಸ್‌ಗೆ ಅದು ಅನಿಷ್ಟವೆನ್ನುವಷ್ಟು ಅಸಡ್ಡೆ. ಗ್ರಾಮಾಂತರ ಪ್ರದೇಶಗಳಲ್ಲಿ ಉದ್ಯೋಗ ಖಾತರಿ ಕಾರ್ಯಕ್ರಮವನ್ನು ಕೂಡ ಯಾವುದೋ ನಿರ್ಬಂಧಕ್ಕೆ ಸಿಲುಕಿ ಕಾಂಗ್ರೆಸ್ ಒಪ್ಪಿಕೊಂಡಿತು. ಇಲ್ಲದಿದ್ದರೆ ಎಡಪಕ್ಷಗಳನ್ನು ತಣಿಸಲು ಆಗದೆಂದು ಅದಕ್ಕೆ ತಿಳಿದಿತ್ತು. ಬಿಜೆಪಿಯನ್ನು ಅಧಿಕಾರದಿಂದ ದೂರವಿಡಲು ಹೇಗೂ ಎಡಪಕ್ಷಗಳು ಬದ್ಧವಾಗಿವೆಯಾದ್ದರಿಂದ ತಾನು ಮನಬಂದಂತೆ ವರ್ತಿಸಬಹುದೆಂದು ಕಾಂಗ್ರೆಸ್ ಭಾವಿಸಿದೆ. ಸಮರ್ಥನೆ ನೀಡುತ್ತಿರುವ ಇನ್ನಿತರ ಪಕ್ಷಗಳಿಗೆ ಆರ್ಥಿಕ ನೀತಿಗಳ ಬಗ್ಗೆ ಆಸಕ್ತಿ ಇಲ್ಲ, ಅವು ಚಕಾರವನ್ನೆತ್ತುವುದೂ ಇಲ್ಲ. ಕರುಣಾನಿಧಿಯವರಿಗೆ ತಮಿಳುನಾಡಿನ ಶಾಗಿರ್ದನ್ನು ಸ್ವತಂತ್ರವಾಗಿ ಅನುಭವಿಸಲು ಅವಕಾಶ ನೀಡಿದರೆ ಸಾಕು, ಅವರು ಕೇಳಿದಷ್ಟು ಮಂತ್ರಿಪದವಿಗಳನ್ನು ನೀಡಿದರೆ ಸಾಕು, ತಮಿಳಿಗೆ ಪ್ರಶಸ್ತವಾದ ಸ್ಥಾನ ನೀಡಿ ಒಂದಷ್ಟು ಕೋಟಿಗಳನ್ನು ಸುರಿದರೆ ಸಾಕು, ಅವರ ಪಕ್ಷವು ಮನಮೋಹನ ಸಿಂಗ್ ದುಷ್ಟನೀತಿಗಳನ್ನು ಪ್ರಶ್ನಿಸುವುದಿಲ್ಲ. ಬಿಹಾರದ ರಾಷ್ಟ್ರೀಯ ಜನತಾದಳದ ಬಾಯಿಗೆ ಅಷ್ಟೊಂದು ತುತ್ತು ಹಾಕಬೇಕಾಗಿಲ್ಲ; ಏಕೆಂದರೆ ಅದರ ಪ್ರಭಾವ ಕುಗ್ಗಿ ಕೂತಿದೆ. ಹೀಗಾಗಿ ಜನಪರ ನೀತಿಗಳನ್ನು ಅನುಸರಿಸುವಂತೆ ಒತ್ತಾಯ ತರುವುದು ಎಡಪಕ್ಷಗಳ ಜವಾಬ್ದಾರಿಯಾಗಿ ಪರಿಣಮಿಸಿದೆ. ಈ ಪಕ್ಷಗಳಲ್ಲೂ ದ್ವಂದ್ವವು ವಿಚಿತ್ರವಾಗಿ ಮನೆಮಾಡಿಕೊಂಡಿದೆ. ದೆಹಲಿಯಲ್ಲಿ ಬೆಂಬಲ ಘೋಷಿಸಿರುವ ವೇಳೆಯಲ್ಲಿ ತಿರುವನಂತಪುರ, ಕೊಲ್ಕಾತಾಗಳಲ್ಲಿ ಘರ್ಷಣೆ ಅನಿವಾರ್ಯ. ಜೊತೆಗೆ, ತಮ್ಮ ವರ್ಚಸ್ಸನ್ನು ಹಿಗ್ಗಿಸಿಕೊಳ್ಳಲು ಎಡಪಕ್ಷಗಳ ವಿಭಾಗದಲ್ಲಿ ನೀತಿಯುತ ಅಂಶಗಳನ್ನು ಪಾಲಿಸಲೇಬೇಕೆಂಬ ಶಿಸ್ತು ಕ್ರಮೇಣ ಕಡಿಮೆಯಾಗುತ್ತಿದೆ. ಅಲ್ಲಿಯೂ ದೊಡ್ಡಣ್ಣ ಉಂಟು, ಅಂತೆಯೇ ಹಳ್ಳಿಯ ನೆಂಟನೆಂಬ ತಿರಸ್ಕಾರದ ಧೋರಣೆಯೂ ಉಂಟು. ವಾಜಪೇಯಿ ಕೂಟಕ್ಕೆ ಸೇರಿರುವ ತೆಲುಗು ದೇಶಂ ಪಕ್ಷದೊಡನೆ ಒಡಂಬಡಿಕೆ ಮಾಡಿಕೊಳ್ಳುವ ಎಡಪಕ್ಷವೂ ಇರಲು ಸಾಧ್ಯ. ಅಲ್ಲದೆ, ಅಭಿವೃದ್ಧಿ ಮೀಮಾಂಸೆಯನ್ನು ಪಶ್ಚಿಮ ಬಂಗಾಳ ಮತ್ತು ಕೇರಳ ಸರ್ಕಾರಗಳು ಕೇಂದ್ರ ಸರ್ಕಾರದ ಮೀಮಾಂಸೆಗೆ ತೀರಾ ಭಿನ್ನವಾಗಿ ಮಾಡದಿದ್ದರೆ ದೆಹಲಿಯ ವಿಶ್ವನೋಟವನ್ನು ಸಾರಾಸಗಟಾಗಿ ನಿರಾಕರಿಸುವುದೂ ಕಷ್ಟ. ಎಡಪಕ್ಷಗಳಿಗೂ ಐ.ಟಿ. ವ್ಯಾಮೋಹ, ವಾಲ್‌ಮಾರ್ಟ್ ಶೋಭೆ, ವಿದೇಶಿ ಬಂಡವಾಳದ ಹೂಡಿಕೆಯ ಆಮಿಷ, ಎಲ್ಲಾ ಆವರಿಸಿದರೆ ಚಿದಂಬರಂ ನೀತಿಗಳನ್ನು ವಿಮರ್ಶಿಸುವುದು ಸೈದ್ಧಾಂತಿಕ ಮಟ್ಟದಲ್ಲಿ ಉಳಿಯಬಹುದೇ ವಿನಾ ಪ್ರಾಯೋಗಿಕವಾಗಿ ಪರಿವರ್ತನೆಗೊಳ್ಳುವುದಿಲ್ಲ. ಈಗಂತೂ ಉದ್ಯಮಿಗಳು ನೇರವಾಗಿ ರಾಜಕೀಯ ಪ್ರವೇಶಿಸಿ ಲೋಕಸಭೆ-ರಾಜ್ಯಸಭೆಗಳಲ್ಲಿ ಸದಸ್ಯತ್ವ ಪಡೆದಿದ್ದಾರೆ, ಕೆಲವರು ಸಚಿವರೂ ಆಗಿದ್ದಾರೆ. ಪ್ರಮೋದ್ ಮಹಾಜನ್ ಇನ್ನಿಲ್ಲದಿದ್ದರೂ ಅವರು ಸಲಹಿದ ಉದ್ಯಮ ವರ್ಗವು ರಾಜಕಾರಣಿಗಳನ್ನಾಶ್ರಯಿಸಿ ತನಗೆ ಬೇಕಾದ ಆರ್ಥಿಕ ನೀತಿಗಳಿಗಾಗಿ ಪ್ರಭಾವ ಬೀರುವ ಅಗತ್ಯವಿಲ್ಲ. ಅಂಬಾನಿ-ಟಾಟಾ-ಬಜಾಜ್‌ಗಳು ಚಿದಂಬರಂ ಜೊತೆಗೂಡಿ ಕೊಂಡಲಿಸ್ಸಾ ರೈಸಳ ಆಣತಿಯನ್ನು ಪಾಲಿಸುವ ಮಟ್ಟಕ್ಕೆ ಬಂದಿವೆಯೆಂದರೆ ನಮ್ಮ ದೇಶದ ಇಕ್ಕಟ್ಟಿನ ಸನ್ನಿವೇಶದ ಪರಿಚಯವಾಗುತ್ತದೆ.

ಎಡಪಕ್ಷಗಳು ಇಂತಹ ಜಟಿಲವಾದ ಸಂದರ್ಭದಲ್ಲಿ ತಮ್ಮ ಸಿದ್ಧಾಂತವನ್ನು ಆಚರಣೆಗೆ ತರಬೇಕಾಗಿದೆ, ಚುನಾವಣಾ ರಾಜಕೀಯವನ್ನು ರೂಪಿಸಬೇಕಾಗಿದೆ, ಜನಪರ ಧೋರಣೆಗಳನ್ನು ಕಾರ್ಯಗತಗೊಳಿಸಬೇಕಾಗಿದೆ ಮತ್ತು ಮತೀಯ ವಿಧ್ವಂಸಕ ಶಕ್ತಿಗಳನ್ನು ಎದುರಿಸಬೇಕಾಗಿದೆ. ಕೇಂದ್ರ ಸರ್ಕಾರಕ್ಕೆ ಸಮರ್ಥನೆ ನೀಡುತ್ತಿರುವ ಎಡಪಕ್ಷಗಳಲ್ಲದೆ ನಮ್ಮಲ್ಲಿ ಬೇರೆ ಎಡಪಕ್ಷಗಳೂ ಇವೆ. ಅವುಗಳ ಸೈದ್ಧಾಂತಿಕ ಪಟುತ್ವ ಮತ್ತು ಕಾರ್ಯವೈಖರಿಗಳು ಕೇಂದ್ರ ಸರ್ಕಾರಕ್ಕೆ ಒಗ್ಗಟ್ಟಾಗಿ ವಿರೋಧ ವ್ಯಕ್ತಪಡಿಸಲು ಕೆಲವೊಮ್ಮೆ ಅಡ್ಡಿಬರುವುದುಂಟು. ಭಾರತ ಕಮ್ಯುನಿಸ್ಟ್ ಪಕ್ಷ ಅದು ಮಾಡಲಿಲ್ಲ, ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷ ಇದು ಮಾಡಲಿಲ್ಲ, ಇತ್ಯಾದಿಯಾಗಿ ಹೇಳುವುದಷ್ಟೇ ಕೆಲವು ತೀವ್ರವಾದಿ ಎಡಪಕ್ಷಗಳ ಕೆಲಸವಾಗಿಹೋಗುವ ಅಪಾಯವೂ ಇದೆ. ಇದೆಲ್ಲಾ ಮನಮೋಹನ ಸಿಂಗ್ ಮತ್ತು ಜಾರ್ಜ್ ಬುಷ್‌ಗೆ ಆಪ್ಯಾಯಮಾನವಾಗಿ ಕಂಡರೆ ಅದರಲ್ಲಿ ಅಸಹಜವಾದದ್ದೇನೂ ಇಲ್ಲ. ಒಂದಂತೂ ನಿಜ: ಎಷ್ಟೇ ಬುದ್ಧಿವಂತಿಕೆಯ ವಿವರಣೆಗಳನ್ನು ತರ್ಕಬದ್ಧವಾಗಿ ನೀಡುವ ಸಾಮರ್ಥ್ಯವಿದ್ದರೂ ಕೇಂದ್ರ ಸರ್ಕಾರದ ಜನವಿರೋಧಿ ಮತ್ತು ದೇಶವಿರೋಧಿ ನೀತಿಗಳಿಗೆ ನೇರವಾಗಿಯೇ ಅಲ್ಲದಿದ್ದರೂ ಎಡಪಕ್ಷಗಳ ಸಮರ್ಥನೆ ಉಂಟೆಂದು ಜನಮಾನಸದಲ್ಲಿ ನೆಲೆಸುವುದು ಅಶಕ್ಯವಲ್ಲ. ಕೋಮುವಾದಿಗಳನ್ನು ದೂರವಿಡುವಾಗ ಅವರು ಮಾನ್ಯಮಾಡುವ ಮತ್ತು ಅವರನ್ನು ಬೆಳೆಸುವ ಆರ್ಥಿಕ ಮತ್ತು ವಿದೇಶಾಂಗ ನೀತಿಗಳಿಗೆ ಎಡಪಕ್ಷಗಳು ಎಷ್ಟು ಕಾಲ ಸಮರ್ಥನೆ ನೀಡುವುದು ಯೋಗ್ಯವಾಗಿರುತ್ತದೆ ? ಎಡಪಕ್ಷಗಳ ಸಿದ್ಧಾಂತವೇ ಹೇಳುವಂತೆ ಈ ಆರ್ಥಿಕ ನೀತಿಗಳನ್ನು ಜನರು ಒಪ್ಪುವಂತೆ ಮಾಡಲು, ಇಲ್ಲವೇ ಅವನ್ನು ಮರೆತು ಬೇರೆಲ್ಲೋ ದೃಷ್ಟಿ ಹಾಯಿಸಲು, ಕೋಮುವಾದವನ್ನು ಹುಟ್ಟಿಹಾಕಲಾಗುತ್ತದೆ, ಬೆಳೆಸಲಾಗುತ್ತದೆ. ಇದು ರಾಜಕೀಯ ಆರ್ಥಿಕತೆಯ ಒಂದು ಸಾಮಾನ್ಯ ಸೂತ್ರ. ಅಂದರೆ, ಕೇಂದ್ರ ಸರ್ಕಾರದ ಇಂದಿನ ಆರ್ಥಿಕ ಮತ್ತು ವಿದೇಶಾಂಗ ನೀತಿಗಳನ್ನು ಸಮರ್ಥಿಸಿಕೊಳ್ಳುತ್ತಾ ಕೋಮುವಾದವನ್ನು ಸೋಲಿಸಲು ಸಾಧ್ಯವಾಗುವುದಿಲ್ಲ. ಇದನ್ನು ಲಾಲಕೃಷ್ಣ ಅದ್ವಾನಿಯವರು ಚೆನ್ನಾಗಿ ಅರಿತಿದ್ದಾರೆ. ಆದ್ದರಿಂದಲೇ ಅವರು ಪದೇ ಪದೇ ಹೇಳುತ್ತಾರೆ, ತಾವು ಕೇಂದ್ರದ ಆರ್ಥಿಕ ನೀತಿಗಳನ್ನು ಬೆಂಬಲಿಸುವುದಾಗಿ ಮತ್ತು ಕೇಂದ್ರ ಸರ್ಕಾರವು ಆ ಮಟ್ಟಿಗೆ ಎಡಪಕ್ಷಗಳ ಬೆಂಬಲವನ್ನು ಆಶ್ರಯಿಸಬೇಕಿಲ್ಲವೆಂದು. ಅನತಿಕಾಲದಲ್ಲಿ ಎಡಪಕ್ಷಗಳು ಎದುರಿಸಬೇಕಾಗಿ ಬರುವ ಪ್ರಶ್ನೆ ಇದೇ : ಮನಮೋಹನ ಸಿಂಗ್ - ಚಿದಂಬರಂ - ಅಹ್ಲುವಾಲಿಯಾ ಆರ್ಥಿಕ ನೀತಿಗಳಿಗೆ ನೀವೇಕೆ ಸಮರ್ಥನೆ ನೀಡುತ್ತೀರಿ, ಎಂದು.

ಇನ್ನು ಮುಂದೆ ಕಡ್ಡಿ ಮುರಿದಂತೆ ಹೇಳದಿರಲು ಸಾಧ್ಯವಿಲ್ಲ; ಸಹನೆಯ ಕಟ್ಟೆ ಒಡೆಯುವುದಷ್ಟೇ ಬಾಕಿ. ಎಡಪಕ್ಷಗಳ ಸಮರ್ಥನೆಯನ್ನು ಕಾಂಗ್ರೆಸ್ ಪಕ್ಷವು ಅವಿಚಲವೆಂದು ತಿಳಿಯಬಾರದು. ಬೆಂಬಲವು ಒಂದು ನಿರ್ದಿಷ್ಟ ಕಾರಣಕ್ಕಾಗಿ ಮತ್ತು ಕಾರ್ಯಕ್ರಮಕ್ಕಾಗಿ. ಅವನ್ನು ನಿರ್ಲಕ್ಷಿಸಿ ವಿಶ್ವ ಬ್ಯಾಂಕ್ - ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ - ಜಾರ್ಜ್ ಬುಷ್ ಆಜ್ಞೆಗಳನ್ನು

೭ನೇ ಪುಟಕ್ಕೆ..

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೪೪೩೦೨




**ಜೂನ್ ಸಂಚಿಕೆ**

ಶ್ರೀಮತಿ ಗಂಗೂಬಾಯಿ ಹಾನಗಲ್ ಅವರ ಮುಖಚಿತ್ರದೊಂದಿಗೆ ಜೂನ್ ತಿಂಗಳ ಸಂಚಿಕೆ ಎಲ್ಲ ವಿಧವಾಗಿ ಮುದನೀಡಿತು. ಸಮಗ್ರ ಎನಿಸಿತು. ಪಾರ್ವತಿ ಜಿ. ಐತಾಳ್‌ರ ಕಥೆ 'ಹೃದಯಹೀನರು' ಚಿಕ್ಕದಾದರೂ ಕುಡಿತದ ದುಷ್ಪರಿಣಾಮ, ಹೆಣ್ಣಿನ ಶೋಷಣೆ, ಬಡತನದ ಬೇಗುದಿ ಎಲ್ಲವನ್ನೂ ಹೇಳಿದೆ. ಅರಬ್ಬೀ ಕಥೆ 'ಪಿಶಾಚಿ' (ಅನುವಾದ: ಬಿ. ಎ. ಸನದಿ) ಅದ್ಭುತ! ಅನುವಾದ ಸರಳವಾಗಿದ್ದು ನೇರ ಕಥೆ ಓದಿದ ಅನುಭವ ಉಂಟಾಯಿತು. ಎಂ. ಡಿ. ಒಕ್ಕುಂದ ಅವರ ಕವನ 'ಮಾಡಿದರೆ ಮಾಡಬೇಕು ಅಂಥ ಯುದ್ಧ' ಹೃದ್ಯವಾಗಿದ್ದು ಆಲೋಚನೆಗಳನ್ನುಂಟುಮಾಡಿತು.

ನವದೆಹಲಿ **ಕೃಷ್ಣಮೂರ್ತಿ ಕಲುಮರಿಗಿ**

'ಹೊಸತು'ವಿನಲ್ಲಿ ಸಾಮಾಜಿಕ, ಸಾಹಿತ್ಯಿಕ, ರಾಜಕೀಯ ಕುರಿತಾದ ಲೇಖನದಷ್ಟೇ ಮಹತ್ವವನ್ನು ನೀಡಿ ಸಂಗೀತ, ಚಲನಚಿತ್ರ, ಚಿತ್ರಕಲೆ ಮುಂತಾದ ಸಾಂಸ್ಕೃತಿಕ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಲೇಖನಗಳನ್ನು ಪ್ರಕಟಿಸುತ್ತಿರುವುದು ಸ್ವಾಗತಾರ್ಹ. ಮೇ ೨೦೦೬ರ ಸಂಚಿಕೆಯಲ್ಲಿ ವರನಟ ರಾಜಕುಮಾರ್‌ರವರನ್ನು ಕುರಿತಾದ ಲೇಖನ, ಮುಖಪುಟದಲ್ಲಿ ಅವರದೆ ಆಕರ್ಷಕ ಚಿತ್ರ, ಜೂನ್ ೨೦೦೬ರ ಸಂಚಿಕೆಯಲ್ಲಿ ವಿದುಷಿ ಗಂಗೂಬಾಯಿ ಹಾನಗಲ್ ಕುರಿತಾದ ಡಾ|| ನಾಗರಾಜರಾವ್ ಹವಾಲ್ದಾರ್‌ರವರ ಲೇಖನ ಹಾಗೂ ವಿ|| ಹಾನಗಲ್‌ರವರ ಚಿತ್ರ, ಮತ್ತು ಚಿತ್ರಸಂಗೀತದ ನಿರ್ದೇಶಕ ನೌಷಾದ್ ಅಲಿ ಅವರನ್ನು ಕುರಿತಾದ ನಾ. ದಿವಾಕರರವರ ಲೇಖನಗಳು, ಇನ್ನಷ್ಟು ಓದುಗರನ್ನು 'ಹೊಸತು' ತನ್ನತ್ತ ಸೆಳೆಯುವಲ್ಲಿ ಸಫಲವಾಗಿದೆ. ಸಂಚಿಕೆಗಳನ್ನು ಕಾಯ್ದಿಟ್ಟುಕೊಳ್ಳುವಷ್ಟು 'ಹೊಸತು'ವಿನ ವಸ್ತು, ಭಾಷೆ, ವಿನ್ಯಾಸಗಳು ಮೋಹಕವಾಗಿವೆ. ಅಭಿನಂದನೆಗಳು.

ಅಳಗಂಚಿ, ನಂಜನಗೂಡು **ಎ. ಡಿ. ನಂಜುಂಡಸ್ವಾಮಿ**

ಜೂನ್ ತಿಂಗಳ ಅಗ್ರಲೇಖನಕ್ಕೆ ಸಂಬಂಧಿಸಿ: ಕ್ರಿಕೆಟ್ ಕ್ರೀಡಾಪಟು ಸಚಿನ್ ಟೆಂಡುಲ್ಕರನು ಈಗ ಎರಡು ದೋಣಿಗಳಲ್ಲಿ ಕಾಲನ್ನಿರಿಸಿ ತನ್ನ ನಿಯಂತ್ರಣವನ್ನು ಕಳೆದುಕೊಂಡವನಂತೆ ಕಾಣುತ್ತಿದ್ದಾನೆ. ಒಂದು ಕಾಲು ಆಟದ ಬಯಲು ಎಂಬ ದೋಣಿಯಲ್ಲಿ, ಇನ್ನೊಂದನ್ನು ತನ್ನ ವಾಣಿಜ್ಯ ಉದ್ಯಮದಲ್ಲಿ ಇರಿಸಿದ್ದಾನೆ. ಆಟದಲ್ಲಿ ತೋರಿಸಬೇಕಾಗಿದ್ದ ಮಾನಸಿಕ ಏಕಾಗ್ರತೆಯನ್ನು ಕಳೆದುಕೊಂಡು ಆತನ ಆಟ ಕಳಪೆಯಾಗುತ್ತಿದೆ; ಅಭಿಮಾನಿಗಳ ನಿರೀಕ್ಷೆ ಹುಸಿಯಾಗುತ್ತಿದೆ. ಇದನ್ನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳಲು ತಯಾರಿಲ್ಲದ ಆತ ನಾಗದೋಷದ ಮೇಲೆ ಗೂಬೆ ಹೊರಿಸಿ, ತನ್ನ ಅಭಿಮಾನಿಗಳೊಡನೆ ಕಣ್ಣುಮುಚ್ಚಾಲೆ ಆಟ ನಡೆಯಿಸುತ್ತಿದ್ದಾನೆ.

ಗಾಳಿಪಟ ಹಾರಿಸುವ ಆಟ ಎಳೆಯರಲ್ಲಿ ಎಂತಹ ಮಾಯಾಲೋಕವನ್ನು ಸೃಷ್ಟಿಸಬಲ್ಲದು ಎಂಬ ರೋಚಕ ಚಿತ್ರಣ ಬಿಳುಮನೆ ರಾಮದಾಸರ "ಬಣ್ಣಕ್ಕೆ ಮರುಳಾದವರು" ಎಂಬ ಕತೆಯಲ್ಲಿ ಅಡಗಿದೆ. ಆದರೆ ನಾಲ್ಕಾರು ಕಿಲೋಮೀಟರ್ ಎಂದರೆ ಎಷ್ಟು ಎತ್ತರವೆಂಬ ಸರಿಯಾದ ಕಲ್ಪನೆ ಕಥಾನಾಯಕನಾದ ಆ ಪುಟ್ಟ ಬಾಲಕನಿಗೆ ಇದ್ದಂತೆ ಭಾಸವಾಗುತ್ತಿಲ್ಲ.

ಸುರತ್ಕಲ್ **ಟಿ. ಸಿ. ಶ್ರೀಯಾನ್**

ಗಾಯನಗಂಗೆ ಗಂಗೂಬಾಯಿಯವರ ಮುಖಪುಟ ಹೊತ್ತ ಜೂನ್ ಸಂಚಿಕೆ ತುಂಬಾ ಆಕರ್ಷಕವಾಗಿತ್ತು. ಸಂಪಾದಕೀಯ ತುಂಬಾ ಅರ್ಥಪೂರ್ಣ. ಸಂಪಾದಕೀಯಗಳೆಲ್ಲವನ್ನು ಸೇರಿಸಿ ಒಂದು ಪ್ರತಿ ಮಾಡಿದರೆ ಉತ್ತಮ ವಿಷಯಗಳೆಲ್ಲ ಒಂದೆಡೆ ಸೇರುತ್ತವೆ. ಈ ಪ್ರಯತ್ನ ಹೊಸತು ಮಾಡಲಿ. [ಈಗಾಗಲೆ ಇದನ್ನು ಮಾಡಲಾಗಿದೆ. – ಸಂ.] ಮಾನಸಿಕ ಒತ್ತಡವನ್ನು ತಡೆಗಟ್ಟುವುದು ಹೇಗೆ? ತುಂಬಾ ಉಪಯುಕ್ತ ಮಾಹಿತಿ. ಇದನ್ನು ಓದಿಯಾದರೂ ನಮ್ಮ ಜನ ಒತ್ತಡದಿಂದ ಮುಕ್ತಿಗೊಳ್ಳಲಿ.

ವಿಠಲಾಪುರ **ಪಾಂಡವಪುರ ಮೃತ್ಯುಂಜಯ**




ಅಮೂಲ್ಯ ರೆಡ್ಡಿಯವರ ಬಗೆಗೆ ಬೇರೆ ಪತ್ರಿಕೆಗಳಲ್ಲೂ ಓದಿದ್ದೆ. ಆದರೆ ಡಾ|| ಕೆ. ಶ್ರೀನಿವಾಸನ್‌ರ ಲೇಖನ ಹೆಚ್ಚು ಆತ್ಮೀಯ – ಆದರೂ ವಸ್ತುನಿಷ್ಠ ಆಗಿದೆ. ಬೈಜಿಕ ಎಂಬ ಪದ ನಿಘಂಟುವಿನಲ್ಲಿ ಇರಬಹುದು. ಆದರೆ ಬಳಕೆಯಲ್ಲಿರುವುದು 'ಅಣು, ನ್ಯೂಕ್ಲಿಯರ್'.

ಬೆಂಗಳೂರು **ಎಚ್. ಎಸ್. ಮಂಜುನಾಥ**

**ಅನುವಾದವಲ್ಲ – ಸ್ವತಂತ್ರ ಗಜ಼ಲ್‌ಗಳು**

ಜೂನ್ ೨೦೦೬ರ 'ಹೊಸತು' ಸಂಚಿಕೆಯ 'ಹೊಸ ಓದು' ಅಂಕಣದಲ್ಲಿ ಶ್ರೀ ಎನ್. ಸಿ. ಮಹೇಶ್ ಅವರು ಜಂಬಣ್ಣ ಅಮರಚಿಂತರ "ಮುಳ್ಳಿನ ಬಾಯಲ್ಲಿ ಹೂ ನಾಲಿಗೆ" (ನೂರಾರು ಗಜಲುಗಳ ಸಂಕಲನ) ಪುಸ್ತಕವನ್ನು ಪರಿಚಯಿಸಿದ್ದಾರೆ. ಅದರಲ್ಲಿ "ಶಾಂತರಸ ಮತ್ತು ಮುಕ್ತಾಯಕ್ಕ ಸಮರ್ಥವಾಗಿ ಗಜಲುಗಳನ್ನು ಕನ್ನಡಕ್ಕೆ ಅನುವಾದಿಸಿಕೊಟ್ಟು ಒಂದು ಬುನಾದಿ ಹಾಕಿಕೊಟ್ಟರು" ಎಂದು ಬರೆದಿದ್ದಾರೆ. ಇದು ಶುದ್ಧ ತಪ್ಪು. ಉರ್ದು ಗಜ಼ಲ್‌ಗಳ ಅನುವಾದ ನಾವು ಮಾಡಿಲ್ಲ. ನಮ್ಮ ಗಜಲ್‌ಗಳು ಸ್ವತಂತ್ರ-ಸ್ವರಚಿತ ಗಜ಼ಲ್‌ಗಳು.

ಉರ್ದು ಗಜ಼ಲ್ ಕಾವ್ಯಪ್ರಕಾರವನ್ನು ಎಲ್ಲ ವೈಶಿಷ್ಟ್ಯಗಳೊಂದಿಗೆ ಕನ್ನಡಕ್ಕೆ ಮೊಟ್ಟಮೊದಲಿಗೆ ತಂದವರು ನಾವು: ನಾನು ಮತ್ತು ನನ್ನ ಮಗಳು ಮುಕ್ತಾಯಕ್ಕ. ಇದನ್ನು ಕನ್ನಡ ಓದುಗರು ಬಲ್ಲರು. 'ಮುಳ್ಳಿನ ಬಾಯಲ್ಲಿ ಹೂ ನಾಲಿಗೆ' ಗಜ಼ಲ್ ಸಂಗ್ರಹವನ್ನು ನನಗೆ ಅರ್ಪಣೆ ಮಾಡುತ್ತ ಜಂಬಣ್ಣ ಅಮರಚಿಂತರು ಹೀಗೆ ಬರೆದಿದ್ದಾರೆ: "ಕನ್ನಡದಲ್ಲಿ ಮೊದಲು ಗಜ಼ಲ್‌ಗಳನ್ನು ಬರೆದ ಹಿರಿಯಕವಿ ಶಾಂತರಸರಿಗೆ". ಇದನ್ನು ಲೇಖಕರು ಏಕೆ ಗಮನಿಸಿಲ್ಲ? ಫೆಬ್ರುವರಿ ೨೦೦೬ರ 'ಹೊಸತು' ಸಂಚಿಕೆಯ "ನಾನು ಓದಿದ ಪುಸ್ತಕ" ಅಂಕಣದಲ್ಲಿ ಡಾ|| ಮೀನಾಕ್ಷಿ ಬಾಳಿಯವರು 'ಮುಕ್ತಾಯಕ್ಕ-ಗಜ಼ಲ್ ಗಮಲು' ಎಂಬ ಲೇಖನ ಬರೆದಿದ್ದಾರೆ. ಇದನ್ನೂ ಮಹೇಶರು ಗಮನಿಸಿದಂತೆ ಕಾಣುವುದಿಲ್ಲ.

ಓದುಗರಲ್ಲಿ ತಪ್ಪುಕಲ್ಪನೆಯುಂಟುಮಾಡುವ ಮಾತನ್ನು ಅಲ್ಲಗಳೆವ ಪ್ರಸಂಗ ಬಂದುದಕ್ಕೆ ತುಂಬ ಬೇಸರವೆನಿಸುತ್ತದೆ.

ಗುಲಬರ್ಗಾ **ಡಾ|| ಶಾಂತರಸ**

'ಹೊಸತು' ಜೂನ್ ೨೦೦೬ರ ಸಂಚಿಕೆಯಲ್ಲಿ ಎಚ್. ಕೆ. ವೆಂಕಟೇಶ್ ಅವರು 'ಕುವೆಂಪು ಅವರ ಕವನಗಳಲ್ಲಿ ಬಡತನದ ಪರಿಕಲ್ಪನೆ'ಯನ್ನು ವಿವರವಾಗಿ ಪರಿಚಯ ಮಾಡಿಕೊಟ್ಟಿರುವುದಕ್ಕೆ ಅಭಿನಂದನೆಗಳು. ಸದರಿ ಲೇಖನದಲ್ಲಿ ಅವರು 'ಕುವೆಂಪು ಅವರ ಕವಿತೆಗಳಲ್ಲಿ ರೈತರ, ಬಡವರ, ಶೋಷಿತರ ಪರವಾದ ಧ್ವನಿ ಅಭಿವ್ಯಕ್ತಿಗೊಂಡಿದೆಯೆಂದೂ, ಕುವೆಂಪು ರೈತರ ಪರವಾಗಿ, ಬಡವರ ಬೆಂಬಲಿಗರಾಗಿ ನಿಂತಿದ್ದಾರೆ' ಎಂದೂ ಹೇಳುವುದರ ಜೊತೆಗೆ 'ರೈತನನ್ನು ನೇಗಿಲಯೋಗಿ' ಎಂದಿರುವುದು 'ಬಹಳ ಔಚಿತ್ಯಪೂರ್ಣವಾಗಿದೆ' ಎಂದಿದ್ದಾರಷ್ಟೆ.

ಈ ಸಂದರ್ಭದಲ್ಲಿ, ಕುವೆಂಪು ಅವರು 'ನೇಗಿಲಯೋಗಿ' ಕವಿತೆಯಲ್ಲಿ ಭಾರತದ ರೈತನನ್ನು

'ನೇಗಿಲ ಹಿಡಿದಾ ಹೊಲದೊಳು ಹಾಡುತಲುಳುವಾ
ಯೋಗಿಯ ನೋಡಲ್ಲಿ
....................
ಫಲವನು ಬಯಸದೆ ಅತಿಸುಖಕೆಳಸದೆ ದುಡಿವನು
ಗೌರವಕಾಶಿಸದೆ'

ಎಂದು ವರ್ಣಿಸುವುದನ್ನು ದ. ರಾ. ಬೇಂದ್ರೆಯವರು,
ಭೂಮಿತಾಯಿಯಾ / ಚೊಚ್ಚಲ ಮಗನನು

**ತಿದ್ದುಪಡಿ**

'ಬೇಕಿತ್ತೇ ಭಯೋತ್ಪಾದನೆ ತಡೆಗೆ ಈ ಕಾನೂನು - ಪ್ರಿವೆನ್ಷನ್ ಆಫ್ ಮನಿ ಲಾಂಡರಿಂಗ್ ಆ್ಯಕ್ಟ್-೨೦೦೨' ಈ ಲೇಖನದ ೫ನೇ ಪ್ಯಾರಾದಲ್ಲಿ ಈ 'ಕಾಯಿದೆ ೨೦೦೨ ಜುಲೈ ೧ರಿಂದ ಜಾರಿಗೆ ಬಂದಿದೆ' ಎಂದಿದೆ. ಇದನ್ನು '೨೦೦೫ ಜುಲೈ ೧ರಿಂದ ಜಾರಿಗೆ ಬಂದಿದೆ' ಎಂದು ಓದಿಕೊಳ್ಳಬೇಕಾಗಿ ವಿನಂತಿ.

ಹಿಂದಿನ ಪುಟದಿಂದ.. (ಪತ್ರಗಳು)

ಕಣ್ತೆರೆದೊಮ್ಮೆ। ನೋಡಿದಿರೇನು ?
...........
ಮುಗಿಲೆಂಬುವದು। ಕಿಸಿದಿತು ಹಲ್ಲು!
ಬಂದಾ ಬೆಳೆಯು। ಮಿಡಿಚಿಯ ಮೇವು;
.............
ಮೋರೆಯ ಸಾವನು। ಅಣಕಿಸುತಿಹುದು!
ಕೊರಳಿಗೆ ಹತ್ತಿದೆ। ಸಾಲದ ಶೂಲ!

ಇತ್ಯಾದಿಯಾಗಿ ವರ್ಣಿಸುವುದರೊಂದಿಗೆ ಹೋಲಿಸಿ ನೋಡಿದರೆ, ಈ ಇಬ್ಬರು ಕವಿಗಳ ಜೀವನದೃಷ್ಟಿ ಹಾಗೂ ಕಾವ್ಯಾಭಿವ್ಯಕ್ತಿಗಳ ಬಗೆಗೆ ಸಾಕಷ್ಟು ತಿಳಿಯಲು ಸಾಧ್ಯವಾದೀತು, ಎನಿಸುತ್ತದೆ.

ಬೆಂಗಳೂರು — ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ

ವಚನಕಾರರಲ್ಲಿ ದೇವರ ಬಗ್ಗೆ ಇದ್ದ ಪರಿಕಲ್ಪನೆಯನ್ನು ಕೆ. ಡಿ. ಮುತ್ತೂರ ಅವರು ತಮ್ಮ ಲೇಖನದಲ್ಲಿ ಚೆನ್ನಾಗಿ ಹಿಡಿದಿಟ್ಟಿದ್ದಾರೆ. ಕಲ್ಲುದೇವರು, ಮಣ್ಣುದೇವರನ್ನು ನಂಬಿಕೊಂಡು ಸಮಯವನ್ನು ಪೋಲು ಮಾಡಿಕೊಳ್ಳುತ್ತಿರುವ ಜನರಿಗೆ ಈ ವಚನಗಳು ಹೊಸ ಅನುಭವವನ್ನು ನೀಡುತ್ತವೆ. ಡೋಂಗಿತನದ ಸಮಾಜದಲ್ಲಿ ಇಂಥ ಎಚ್ಚರಿಕೆಯ ಲೇಖನಗಳು ಅವಶ್ಯಕವಾಗಿದ್ದು, ಇನ್ನೂ ಪ್ರಕಟವಾಗಲಿ. ನಿರುದ್ಯೋಗದ ಬಗ್ಗೆ 'ಅಗಸ್ತ್ಯಭ್ರಾತಾ' ಅವರು ಬರೆದಿರುವ ಲೇಖನ ಬಹು ಮಾರ್ಮಿಕವಾಗಿದೆ. ದೇಶದ ಸ್ಥಿತಿ-ಗತಿಯನ್ನು ಪರಿಚಯಿಸುತ್ತ ನಿರುದ್ಯೋಗ ಸಮಸ್ಯೆ ಎಂತಹುದು ಎಂಬುದನ್ನು ಮನವರಿಕೆ ಮಾಡಿಕೊಟ್ಟಿದ್ದಾರೆ.

ಗಿರಗಾಂವ, ಚಿಕ್ಕೋಡಿ ತಾಲೂಕು — ಎಚ್. ವಿ. ಭೋಗಲೆ

## ಗಮನಿಸಿ

ಧಾರವಾಡದ ಪರ್ಯಾಯ ಕೃಷಿಮಾಧ್ಯಮ ಕೇಂದ್ರ ೨೦೦೬-೦೭ನೇ ಸಾಲಿನ ಕೃಷಿ-ಗ್ರಾಮೀಣ ಪತ್ರಿಕೋದ್ಯಮ ತರಬೇತಿಗೆ ಪ್ರವೇಶಗಳನ್ನು ಆಹ್ವಾನಿಸಿದೆ. ನವೆಂಬರ್‌ನಲ್ಲಿ ಶುರುವಾಗಲಿರುವ ಅಂಚೆ ತೆರಪಿನ (ಕರೆಸ್ಪಾಂಡೆನ್ಸ್) ಈ ಕೋರ್ಸ್ ಒಂದು ವರ್ಷ ಅವಧಿಯದ್ದಾಗಿರುತ್ತದೆ. ಕೃಷಿ-ಗ್ರಾಮೀಣ ಪತ್ರಿಕೋದ್ಯಮದ ಮಹತ್ವ ಮತ್ತು ಸ್ವರೂಪ, ಬರಹದ ಪ್ರಕಾರಗಳು, ಬರವಣಿಗೆ ತಂತ್ರಗಾರಿಕೆ, ಛಾಯಾ ಪತ್ರಿಕೋದ್ಯಮ ಇವೇ ಮುಂತಾದ ವಿಷಯಗಳ ಕುರಿತು ಅನುಭವಿ ಬರಹಗಾರರಿಂದ ತರಬೇತಿ ನೀಡಲಾಗುವುದು. ಪ್ರಾಯೋಗಿಕ ಕಲಿಕೆಗೆ ಅವಕಾಶವಿದೆ. ತರಬೇತಿ ಕುರಿತ ಮಾಹಿತಿ ಪತ್ರ, ಅರ್ಜಿ ಮತ್ತಿತರ ವಿವರಕ್ಕಾಗಿ ೨೦ ರೂ. ಅಂಚೆಚೀಟಿಯೊಂದಿಗೆ ಪತ್ರ ಬರೆಯಿರಿ: **ಗೌರವ ನಿರ್ದೇಶಕ, ಪರ್ಯಾಯ ಕೃಷಿ ಮಾಧ್ಯಮ ಕೇಂದ್ರ, ಕೃಷ್ಣಾಲಯ, 1ನೇ ಮುಖ್ಯರಸ್ತೆ, 4ನೇ ಅಡ್ಡರಸ್ತೆ, ನಾರಾಯಣಪುರ, ಧಾರವಾಡ - 580 008.**

ಇದೇ ಕೇಂದ್ರವು ೬ನೇ ವರ್ಷದ ರಾಜ್ಯಮಟ್ಟದ ಕೃಷಿ ಪತ್ರಿಕೋದ್ಯಮ ಪ್ರಶಸ್ತಿಗೆ ಪ್ರವೇಶಗಳನ್ನು ಆಹ್ವಾನಿಸಿದೆ. ಎರಡು ವಿಭಾಗಗಳಲ್ಲಿ ಪ್ರಶಸ್ತಿ ನೀಡಲಾಗುತ್ತಿದೆ. ಮೊದಲನೆಯದ್ದು ಕೃಷಿಕರೇ ಬರೆದ ಲೇಖನಗಳು ಹಾಗೂ ಎರಡನೆಯದ್ದು ಮುಕ್ತ ವಿಭಾಗವಾಗಿದ್ದು ಇದರಲ್ಲಿ ಕೃಷಿಕರೇತರ ಎಲ್ಲರೂ ಭಾಗವಹಿಸಬಹುದಾಗಿದೆ. ಕನ್ನಡದಲ್ಲಿ ಅರ್ಥಪೂರ್ಣ ಕೃಷಿ ಪತ್ರಿಕೋದ್ಯಮಕ್ಕೆ ಉತ್ತೇಜನ ನೀಡುವುದಕ್ಕಾಗಿ ಕೇಂದ್ರ ಈ ಪ್ರಶಸ್ತಿ ಸ್ಥಾಪಿಸಿದೆ. ಆಸಕ್ತರು ಸೆಪ್ಟೆಂಬರ್ ೨೦೦೫ರಿಂದ ಆಗಸ್ಟ್ ೨೦೦೬ರ ನಡುವೆ ಯಾವುದೇ ಪತ್ರಿಕೆ ಅಥವಾ ನಿಯತಕಾಲಿಕದಲ್ಲಿ ಪ್ರಕಟಗೊಂಡ ಕೃಷಿಕ ಪರ ಬರಹವನ್ನು ಕಳುಹಿಸಿಕೊಡಲು ಕೋರಲಾಗಿದೆ. ಒಬ್ಬರು ಗರಿಷ್ಠ ಎರಡು ಲೇಖನಗಳನ್ನು ಕಳುಹಿಸಬಹುದು. ಪೂರ್ಣ ವಿಳಾಸ ಹಾಗೂ ಉದ್ಯೋಗದ ವಿವರ ಬರೆಯುವುದು ಅಗತ್ಯ. ಪ್ರವೇಶದೊಂದಿಗೆ ಹತ್ತು ರೂಪಾಯಿ ಮೌಲ್ಯದ ಅಂಚೆಚೀಟಿ ಕಳುಹಿಸಲು ಕೋರಿಕೆ. ಕೊನೆಯ ದಿನಾಂಕ : ಸೆಪ್ಟೆಂಬರ್ ೫, ೨೦೦೬.

೫ನೇ ಪುಟದಿಂದ (ಸಂಪಾದಕೀಯ)

ಶಿರಸಾವಹಿಸಿ ಪಾಲಿಸುವ ಕೇಂದ್ರ ಸರ್ಕಾರಕ್ಕೆ ಎಡಪಕ್ಷಗಳು ಸಮರ್ಥನೆ ನೀಡುವುದು ಅನೈತಿಕವಾಗುತ್ತದೆ, ಜನಹಿತಕ್ಕೆ ಮಾರಕವಾಗುತ್ತದೆ, ದೇಶದ ಸಾರ್ವಭೌಮತ್ವಕ್ಕೆ ಧಕ್ಕೆ ತರುತ್ತದೆ. ಕಟ್ಟುನಿಟ್ಟಾಗಿ ಮನಮೋಹನ ಸಿಂಗರಿಗೆ ಹೇಳಬೇಕು, ಇದು ಒಂಟೆಯ ಮೇಲೆ ನೀವು ಹೇರುವ ಕಟ್ಟಕಡೆಯ ಹುಲ್ಲುಕಡ್ಡಿ, ಎಂದು. ಹಾಗೂ ಮತ್ತೂ ಹೇರಲು ಉಪಕ್ರಮಿಸಿದರೆ ಕೇಂದ್ರ ಸರ್ಕಾರವು ದುರ್ಭರವಾಗಿ ಒಂಟೆಯಂತೆ ಕುಸಿದುಬಿದ್ದರೆ ಕಣ್ಣೀರು ಸುರಿಸುವ ಪ್ರಮೇಯವಿಲ್ಲ. ಅಂತಹ ಪರ್ವಕಾಲದಲ್ಲಿ ರಾಜಕೀಯ ಕೋಲಾಹಲ ಉಂಟಾದರೆ ಆಗುವ ಅನಾಹುತಕ್ಕಿಂತಲೂ ಹೆಚ್ಚಿನ ಅನಾಹುತವು ಇಂದಿನ ಕೇಂದ್ರ ಸರ್ಕಾರದ ಜನದ್ರೋಹಿ ನೀತಿಗಳಿಂದ ಉಂಟಾಗುವ ಸಾಧ್ಯತೆ ಇದೆ. ಮನಮೋಹನ ಸಿಂಗರ ಸರ್ಕಾರವು ಬೇಕಾದರೆ ರಾಜನಾಥ ಸಿಂಗರ ಪಕ್ಷದ ಬೆಂಬಲ ಪಡೆದು ಉಳಿಯಲಿ, ತನ್ನ ಪ್ರಜಾಪ್ರಭುತ್ವ ವಿರೋಧಿ ನೀತಿಗಳನ್ನು ಅನುಸರಿಸಲಿ, ದೇಶವನ್ನು ಅಮೆರಿಕಾಕ್ಕೆ ಒತ್ತೆಯಿಡಲಿ; ಆದರೆ ಎಡಪಕ್ಷಗಳ ಸಮರ್ಥನೆಯಿಂದ ಇದಾವುದನ್ನೂ ಆಗಗೊಡಬಾರದು. ಬೇರೊಂದು ಪರ್ಯಾಯ ಹೊಂದಾಣಿಕೆಯಿಂದ ಎಡಪಕ್ಷಗಳು ಜನಬೆಂಬಲ ಪಡೆಯಲು ಸಜ್ಜಾಗಬೇಕು, ದೇಶದ ಸ್ವಾತಂತ್ರ್ಯವನ್ನು ಉಳಿಸಿ ವರ್ಧಿಸಬೇಕು, ನಮ್ಮ ಪ್ರಜಾಪ್ರಭುತ್ವ ಮತ್ತು ಸಾರ್ವಭೌಮತ್ವಗಳನ್ನು ರಕ್ಷಿಸಬೇಕು. ಅದಕ್ಕಾಗಿ ವ್ಯಾಪಕ ಸಂಘಟನೆ ಮತ್ತು ಹೋರಾಟಗಳನ್ನು ಎಡಪಕ್ಷಗಳು ಹಮ್ಮಿಕೊಳ್ಳುತ್ತವೆ. ಆ ಮೂಲಕ ಸಾಮಾನ್ಯ ಕನಿಷ್ಠ ಕಾರ್ಯಕ್ರಮವನ್ನು ಅನುಷ್ಠಾನಕ್ಕೆ ತರುವುದು ಮತ್ತು ವಿಸ್ತರಿಸುವುದು ಎಡಪಕ್ಷಗಳ ಪ್ರಣಾಳಿಕೆ. ಕಾಲ ಮಿಂಚಿಹೋದ ನಂತರ ಹಿಂದಿನ ಅಚಾತುರ್ಯಗಳಿಗೆ ಮತ್ತು ತಪ್ಪುಗಳಿಗೆ ಪರಿತಪಿಸುವುದು ಅಪ್ರಾಸಂಗಿಕ. ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷವು ತೆಲುಗು ದೇಶಂ ಜೊತೆ ಮಾಡಿಕೊಳ್ಳುತ್ತಿರುವ ಹೊಂದಾಣಿಕೆಗೆ ಈ ಹಿನ್ನೆಲೆಯಲ್ಲಿ ಮಾತ್ರ ಅರ್ಥವಿದ್ದೀತು. ಕಾಂಗ್ರೆಸ್ಸಿಗೆ ಅದೊಂದು ಸೂಚನೆ ಎನ್ನಬಹುದೇ? ಒಂದು ಕಮ್ಯುನಿಸ್ಟ್ ಬಣದ ಪ್ರೇರಣೆಯಿಂದ ತೆಲುಗು ದೇಶಂ ಪಕ್ಷ ತನ್ನ ಬಿಜೆಪಿ ಜೊತೆಗಿನ ಹಲವು ವರ್ಷಗಳ ಸಂಬಂಧವನ್ನು ಏಕಾಏಕಿ ಕಳೆದುಕೊಳ್ಳಲು ಸಿದ್ಧವಿದೆಯೇ ಎಂಬುದನ್ನು ಕಾದುನೋಡಬೇಕು.

ತಂಟೆಕೋರ ಬಾಲ ಕೃಷ್ಣನಿಗೆ ಗೊತ್ತು, ಗುಮ್ಮನಿಲ್ಲ ಎಂದು. ಆದರೂ ಯಶೋದೆ ಅವನನ್ನು ಗುಮ್ಮನ ಹೆಸರು ಹೇಳಿ ಬೆದರಿಸುತ್ತಾಳೆ. ಅದು ನಿಜವೇನೋ ಎಂಬಂತೆ ಕೃಷ್ಣನು ಬೇಡಿಕೊಳ್ಳುತ್ತಾನೆ; ಗುಮ್ಮನ ಕರೆಯದಿರು, ಎಂದು. ಆ ಗುಮ್ಮನ ನಾಟಕ ಇನ್ನು ಸಾಕೆಂದು ಎಡಪಕ್ಷಗಳು ನಿರ್ಧರಿಸುವ ಕಾಲ ಇದು.

[signature]

೬ನೇ ಪುಟದಿಂದ (ಈ ತಿಂಗಳು)

ಸರಿ; ಅವನು ಅಥವಾ ಅವಳು ಚಲನಚಿತ್ರರಂಗದ ಧಿಮಾಕಿನ ತಾರೆಯಾಗಿದ್ದರೆ ಆಯಿತು! ಕಾನೂನು ಅವರಿಗಾಗಿ ಹೊಸದಾಗಿ ಬರೆಯಲ್ಪಡುತ್ತದೆ. ಇದನ್ನು ಸಹ ಗಂಭೀರವಾಗಿ ಚರ್ಚಿಸದ ಮಾಧ್ಯಮಗಳು ನಮ್ಮ ಪ್ರಜಾಪ್ರಭುತ್ವದ ರಕ್ಷಕರು! ಇವೇ ಮಾಧ್ಯಮಗಳ ಧುರೀಣರು ಒಬ್ಬರ ಮೇಲೊಬ್ಬರು ಬಿದ್ದು ಮೀಸಲಾತಿ ವಿರೋಧದ ಸಂದರ್ಭವನ್ನು ಒಂದು ಅಮೋಘ ಕ್ರಾಂತಿಯ ಮುನ್ಸೂಚನೆಯೆಂಬಂತೆ ಚಿತ್ರಿಸಿದರು. ದೇಶದಲ್ಲಿ ಉಕ್ಕಿ ಹರಿಯುತ್ತಿರುವ ಅರ್ಹತೆಗೆ ಏನೋ ಕುತ್ತುಂಟಾಗುತ್ತದೆಯೆಂಬ ಇಲ್ಲದ ಭೀತಿಯನ್ನು ದೊಡ್ಡದು ಮಾಡಿ ನಮ್ಮಲ್ಲಿ ವರ್ಗಭೇದ ಮತ್ತು ವರ್ಣಭೇದ ಅಳಿಸಿಹಾಕಬಾರದಾದ ಸಂಪತ್ತೆಂಬಂತೆ ಎರಡು ವಾರಗಳ ಕಾಲ ಹರಿಹಾಯ್ದವರು ಈ ಮಾಧ್ಯಮಗಳ ಯುವಜ್ಞಾನಿಗಳು. ಜ್ಞಾನಪೋಷಿತ ಸಮಾಜದ ರಚನೆಗೆ ಹೊರಟಿರುವ ನಾವು ಅಜ್ಞಾನಿಗಳನ್ನು ಸಹಿಸಲು ಹೇಗೆ ತಾನೆ ಸಾಧ್ಯ ಎಂಬ ಭಾವನೆಗೆ ಪುಷ್ಟಿ ದೊರಕಿಸಿಕೊಟ್ಟ ಮಾಧ್ಯಮಗಳು ಖಂಡಿತ ಸಾಮಾಜಿಕ ನ್ಯಾಯದ ಬಗ್ಗೆ ಕಾಳಜಿ ತೋರುವುದಿಲ್ಲ, ಆ ದಿಕ್ಕಿನಲ್ಲಿ ಹೇಗೆ ಸಾಗಬೇಕೆಂಬ ಅರಿವನ್ನು ಹೊಂದುವುದಿಲ್ಲ. ಏಕೆಂದರೆ, ಅವರ ಗ್ರಹಿಕೆಯಂತೆ ಕೆಳಮಟ್ಟದವರು ಹುಟ್ಟಿನಿಂದಲೇ ಹಾಗಿರುತ್ತಾರೆ, ಅವರಿಗೆ ಮೇಲೇರುವ ಶಕ್ತಿ ನೀಡುವಂತಹ ಮಿದುಳಿಲ್ಲ, ಮೇಲೆತ್ತುವ ಸಾಹಸವೆಲ್ಲ ಅನರ್ಥ. ಅಂತೆಯೇ ಮೇಲ್ಮಟ್ಟದವರೂ ಹುಟ್ಟಿನಿಂದಲೇ ತಮ್ಮೆಲ್ಲ ವರ್ಚಸ್ಸನ್ನೂ ಹೊಂದಿರುತ್ತಾರೆ. ಮೂರು ಸಾವಿರ ವರ್ಷಗಳಷ್ಟು ಹಳೆಯದಾದ ಈ ಬೂಷ್ಟುಕಟ್ಟಿದ ಹೂರಣವನ್ನು ಆಧುನಿಕ ಅಂತರ್ದೃಷ್ಟಿಯೆಂಬ ರೀತಿಯಲ್ಲಿ ಚಿತ್ರಿಸುವುದು ಬುದ್ಧಿಮತ್ತೆಗೆ ಕಳಂಕವೆಂದು ಗೋಚರವಾಗದಿರುವುದು ಒಂದು ದುರಂತ. ಪುಷ್ಟಿದಾಯಕ ಆಹಾರ ಸೇವಿಸುವುದರಿಂದ ಬುದ್ಧಿಮತ್ತೆ ಚುರುಕಾಗುತ್ತದೆಂದು ಆದ್ಯ ವಿಜ್ಞಾನಿ ಉದ್ದಾಲಕ ಆರುಣಿ ಛಾಂದೋಗ್ಯೋಪನಿಷತ್ತಿನಲ್ಲಿ ಮೂವತ್ತು ಶತಮಾನಗಳ ಹಿಂದೆ ಪ್ರಾಯೋಗಿಕವಾಗಿ ಸಿದ್ಧಪಡಿಸಿದ. ಅದರ ಸಾರವನ್ನು ಇಂದಿಗೂ ಅರ್ಥಮಾಡಿಕೊಳ್ಳದ ಮೌಢ್ಯ ನಮ್ಮ ಅನೇಕ ಶಿಕ್ಷಣ ತಜ್ಞರನ್ನು ಹಾಗೂ ಮಾಧ್ಯಮದ ವೀರರನ್ನು ಆವರಿಸಿದೆ. ಆದ್ದರಿಂದಲೇ ತಮ್ಮ ಅರ್ಹತೆಗೆ ಖಿಲ್ಲತ್ತು ದೊರೆಯುವುದಿಲ್ಲವೆಂಬ ಆತಂಕ ಮೂಡಿದಾಗ ದೆಹಲಿಯ ಅಖಿಲ ಭಾರತ ವೈದ್ಯವಿಜ್ಞಾನ ಸಂಸ್ಥೆಯ ಮೇಧಾವಿ ಯುವವೈದ್ಯರು ಬೀದಿಗಿಳಿದು ಕಸ ಗುಡಿಸುತ್ತಾರೆ, ಚಪ್ಪಲಿ ಹೊಲೆಯುತ್ತಾರೆ, ಪಾದರಕ್ಷೆಗಳಿಗೆ ಪಾಲಿಷ್ ಹಾಕುತ್ತಾರೆ. ''ನೀವಿದನ್ನು ಮಾಡಿಕೊಂಡಿರಲು ಮಾತ್ರ ಯೋಗ್ಯರು'' ಎಂಬ ಅವರ ಸಂದೇಶವು ಹಿಂದುಳಿದ

೮ನೇ ಪುಟಕ್ಕೆ..

೭ನೇ ಪುಟದಿಂದ (ಈ ತಿಂಗಳು)

ಜನಾಂಗಗಳವರಿಗೆ. ಅದು ಪ್ರತಿಭಟನೆಯ ಸಂಕೇತವಲ್ಲ, ಹಳಿಯುವ ಅಹಂಕಾರ. ಆ ಸಂಸ್ಥೆಯ ನಿರ್ದೇಶಕರು ಈಗ ರಾಜಿನಾಮೆ ಕೊಡಲು ಹೊರಟಿದ್ದಾರೆ. ಏಕೆಂದರೆ, ಯುವ ವೈದ್ಯರ ಮುಷ್ಕರಕ್ಕೆ ಕುಮ್ಮಕ್ಕು ನೀಡಿದವರು ಅವರೆಂಬ ಆಪಾದನೆಯನ್ನವರು ಎದುರಿಸಬೇಕಾಗಿದೆ. ಕಸ ಗುಡಿಸುವವರು ಮತ್ತು ಚಪ್ಪಲಿ ಹೊಲೆಯುವವರು ಇನ್ನು ಮುಂದೆ ಏತಕ್ಕಾದರೂ ಪ್ರತಿಭಟಿಸಬೇಕಾದರೆ ಅವರು ಯುವವೈದ್ಯರಂತೆ ಹೊಸ ಸಂಕೇತಗಳನ್ನು ಹುಡುಕಿಕೊಳ್ಳಬೇಕು; ವೈದ್ಯರ ಪೋಷಾಕು ಧರಿಸಿ ಸಿರಿಂಜುಗಳನ್ನೂ ಔಷಯನ್ನೂ ಕದಿಯುವವರಂತೆ, ಇಲ್ಲವೆ ಪುರೋಹಿತರ ವೇಷ ಧರಿಸಿ ದರ್ಭೆ ಹಿಡಿದು ತಿಥಿ ಮಾಡಿಸುವವರಂತೆ ನಟಿಸಬಹುದು!

ಮೀಸಲಾತಿಯ ಸೌಲಭ್ಯದಿಂದ ಮುಂದೆ ಬಂದವರು ಮೀಸಲಾತಿ ಕಲ್ಪನೆಯನ್ನು ಸಮರ್ಥಿಸಿ ಸಾರ್ವಜನಿಕರಿಗೆ ತಿಳಿಯಹೇಳಲು ಮುಂದೆ ಬರದಿರುವುದು ಸರ್ವಥಾ ಸಮರ್ಥನೀಯವಲ್ಲ. ಸರ್ಕಾರ ಮತ್ತು ಸಾಮಾಜಿಕ ಕಾರ್ಯಕರ್ತರ ಜವಾಬ್ದಾರಿ ಅದು ಎಂಬಂತೆ ನಡೆದುಕೊಳ್ಳುವುದು ಇವರಿಗೆ ತಕ್ಕುದಲ್ಲ. ದೇಶದಿಂದ ಪಲಾಯನಗೈಯ್ಯುವ ಪ್ರತಿಭಾವಂತರಿಗೆ ರಾಜ್ಯದ ಕೋಶದಿಂದ ಹಣವನ್ನು ವ್ಯಯಿಸಿ ಶಿಕ್ಷಣ ಮತ್ತು ಅರ್ಹತೆ ತುಂಬಿಕೊಡುವುದು ಸಮಾಜದ ಕರ್ತವ್ಯವೆನಿಸುವುದಿಲ್ಲ. ಕಡಿಮೆಯ ಮಟ್ಟದ ಪ್ರತಿಭೆಯು ಕ್ರಮೇಣ ವಿಕಾಸಗೊಳ್ಳಲು ಮತ್ತು ಸಮಾನ ಅವಕಾಶಗಳತ್ತ ಮುನ್ನಡೆಯಲು ಮೀಸಲಾತಿಯು ಒಂದು ಸಾಧನ. ಆದರೆ ನೂರುಕಾಲ ಬಾಳಬೇಕಾದ ವ್ಯವಸ್ಥೆ ಅದಲ್ಲ. ಮೀಸಲಾತಿಯ ಪ್ರಶ್ನೆ ಬಂದಾಗಲೆಲ್ಲ ಹೇಳಲಾಗುವ ಮಾತಿದು : ಪ್ರಾಥಮಿಕ ಮಟ್ಟದಲ್ಲಿ ಮೂಲಸೌಲಭ್ಯಗಳನ್ನು ಉತ್ತಮಗೊಳಿಸಿದರೆ ಮೀಸಲಾತಿಯು ಮೇಲ್ಮಟ್ಟದಲ್ಲಿ ಬೇಕಾಗುವುದಿಲ್ಲ, ಎಂದು. ಇದನ್ನು ಕಾರ್ಯರೂಪಕ್ಕೆ ತರಲು ನಮ್ಮ ಸರ್ಕಾರಗಳು ಸಿದ್ಧವಿಲ್ಲ; ಏಕೆಂದರೆ ಅವರ ಪ್ರಕಾರ ಇದು ಅಸಾಧ್ಯವಾದ ಕೆಲಸ. ಜೊತೆಗೆ ಆರ್ಥಿಕ-ಸಾಂಸ್ಕೃತಿಕ ರಚನೆಯನ್ನೂ ಬದಲಾಯಿಸಬೇಕಾಗುತ್ತದೆ. ಶ್ರೀಮಂತರ ಮಕ್ಕಳು ಗುಡಿಸಲುಗಳ ಮಕ್ಕಳೊಡನೆ ಕುಳಿತು ಕಲಿಯಬೇಕೆ, ಎಂಬುದು ಮೀಸಲಾತಿ ವಿರೋಧಿಗಳ ಅಪ್ರಕಟಿತ ಸೂತ್ರ. ''ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಪ್ರವೇಶಾವಕಾಶವನ್ನು ಹೆಚ್ಚಿಸಿ ಮತ್ತು ಹೆಚ್ಚಳವಾದ ಸ್ಥಾನಗಳನ್ನು ನಮಗೇ ಕೊಡಿ'', ಎನ್ನುವುದು ತಥಾಕಥಿತ 'ಮೆರಿಟ್' ವಲಯದ ಆಗ್ರಹ. ''ನನ್ನದೂ ನನಗೆ, ನಿನ್ನದೂ ನನಗೆ'' ಎನ್ನುವ ತತ್ತ್ವವು ಇದರ ಹಿಂದೆ ಕೆಲಸ ಮಾಡುತ್ತದೆ. ತಕ್ಷಣದಲ್ಲಿ ನಾರಾಯಣಮೂರ್ತಿ, ಸ್ಯಾಮ್ ಪಿಟ್ರೋಡ, ಮುಂತಾದವರ ಅಭಿಪ್ರಾಯಗಳನ್ನು ಖಂಡಿಸಿ ಕುಳಿತರೆ ಸಾಲದು; ವ್ಯಾವಹಾರಿಕವಾಗಿ ತಪ್ಪದೆ ಕೈಗೊಳ್ಳಬೇಕಾದ ಕ್ರಮಗಳಿಗೆ ಆದ್ಯತೆ ನೀಡಬೇಕು. ಭಾರತೀಯ ಜನತಾ ಪಕ್ಷದ ಕಾರ್ಯಕಾರಿ ಸಮಿತಿಯು ಉದಾರವಾಗಿ ಎಲ್ಲರಿಗೂ ಎಲ್ಲಾ ಸಿಗಬೇಕು ಎಂಬ ನಿರ್ಣಯ ಕೈಗೊಂಡು ತನ್ನ ಸಾಮಾಜಿಕ ನಿಷ್ಠೆಯನ್ನು ಪ್ರಕಟಿಸಿದೆ. ಅದು ಚುನಾವಣಾ ತಂತ್ರದಲ್ಲಿ ಪ್ರಯೋಜನ ತಂದುಕೊಡಬಹುದು, ಆದರೆ ಪ್ರಾಯೋಗಿಕ ಮಾರ್ಗದ ಸೂಚನೆ ಅದರಲ್ಲಿಲ್ಲ. ನಿಜಕ್ಕೂ ಇಂದು ಮಿಸಲಾತಿಯು ಉಪಯುಕ್ತವಾಗಿ ಒಂದೆರಡು ದಶಕಗಳಲ್ಲಿ ಅದು ಅನವಶ್ಯಕ ಎನಿಸುವಂತಾಗಬೇಕಾದರೆ ಮೊದಲಿಗೆ ನಮ್ಮ ಆರ್ಥಿಕ ಸನ್ನಿವೇಶವು ಹಿಂದುಳಿದವರ ಪರವಾಗಿ ಬದಲಾಗಬೇಕು. ಅದಕ್ಕೆ ಅಗತ್ಯವಾದ ಚಳುವಳಿಯನ್ನು ಹಮ್ಮಿಕೊಂಡು, ಕೆಲವು ಸೂತ್ರಗಳಿಗೆ ಆದ್ಯತೆ ನೀಡಿ, ಇಡೀ ಮೀಸಲಾತಿ ವ್ಯವಸ್ಥೆಯ ಪುನರ್ವಿಮರ್ಶೆ ಮಾಡಿಕೊಳ್ಳುವುದು ನಮ್ಮ ಮಾರ್ಗವಾಗಬೇಕು. ಅಂತಿಮವಾಗಿ ಅಂತಹ ಸೂತ್ರಗಳನ್ನು ಪೂರ್ಣ ಪ್ರಮಾಣದಲ್ಲಿ ನಿರೂಪಿಸಲಾಗುವುದಿಲ್ಲ; ವರ್ಷಂಪ್ರತಿ ಅವನ್ನು ತಿದ್ದಿಕೊಳ್ಳುತ್ತಾ ಮುನ್ನಡೆಯಬೇಕು. ಆ ಸೂತ್ರಗಳಲ್ಲಿ ಕೆಲವು ಹೀಗಿರಬಹುದು : (ಅ) ಪರಿಶಿಷ್ಟ ಜಾತಿ - ಬುಡಕಟ್ಟುಗಳವರಿಗೆ, ಸಾಮಾಜಿಕವಾಗಿ ಹಿಂದುಳಿದವರಿಗೆ ಮತ್ತು ಆರ್ಥಿಕವಾಗಿ ದುರ್ಬಲರಾಗಿರುವವರಿಗೆ ಪ್ರಾಥಮಿಕ ಹಂತದ ವಿದ್ಯಾಭ್ಯಾಸಕ್ಕೆ ಶುಲ್ಕರಹಿತ ವಸತಿ ವಿದ್ಯಾಲಯಗಳಿರಬೇಕು. ಆಗ ಮಾತ್ರ ಮೇಲ್ಮಟ್ಟದ ಮೀಸಲಾತಿಯು ವ್ಯಾಪಕಾರ್ಥವನ್ನು ಪಡೆದುಕೊಳ್ಳುತ್ತದೆ. ಅದಿಲ್ಲದಿದ್ದಾಗ ಅವಕಾಶ ವಂಚಿತರು ಎಂದಿಗೂ ಮೀಸಲಾತಿಯ ಸೌಕರ್ಯವನ್ನು ಪಡೆಯಲಾರರು. (ಆ) ವಿದ್ಯಾರ್ಜನೆಯು ಮೊದಲಿಗಿಂತಲೂ ಹೆಚ್ಚಿನ ಮಟ್ಟದಲ್ಲಿ ನಡೆಯುತ್ತಿರುವುದನ್ನು ಸ್ವಾಗತಿಸಿ, ಮೇಲ್ಮಟ್ಟದ ವಿದ್ಯಾಸಂಸ್ಥೆಗಳಲ್ಲಿ ಕಲಿಯುವವರ ಸ್ಥಾನಗಳನ್ನು ಹೆಚ್ಚಿಸಬೇಕು. ಈಗಿನ ಪ್ರಮಾಣವು ಹೊಸ ಸನ್ನಿವೇಶದಲ್ಲಿ ಅಲ್ಪವೆಂದು ಸಾಬೀತಾಗಿದೆ. ಕಲಿಯಲು ಸೌಲಭ್ಯ ಹೆಚ್ಚಿಸದೆ ಕಲಿಯುವವರ ಸಂಖ್ಯೆಯನ್ನು ಹೆಚ್ಚಿಸಲಾಗುವುದಿಲ್ಲವೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಉನ್ನತ ಶಿಕ್ಷಣ ಸಂಸ್ಥೆಗಳಿಗೆಲ್ಲಾ ಅನ್ವಯವಾಗುವಂತೆ ಈ ಸೂತ್ರವನ್ನು ಅಳವಡಿಸಿಕೊಳ್ಳಬೇಕು. ಇಂಜಿನಿಯರಿಂಗ್ ಕಾಲೇಜುಗಳ ಸಂಖ್ಯೆ ಜಾಸ್ತಿಯಾದರೆ ಪರವಾಗಿಲ್ಲ, ಐಐಟಿಗಳ ಸಂಖ್ಯೆ ಹೆಚ್ಚಕೂಡದೆಂಬ ಮೂರ್ಖತನ ಏಕೆ? ದೇಶದಲ್ಲಿ ''ಪ್ರತಿಭಾವಂತರ'' ಸಂಖ್ಯೆ ಇಂತಿಷ್ಟನ್ನು ದಾಟಕೂಡದೆಂಬ ಹಟಕ್ಕೆ ಅರ್ಥವಿಲ್ಲ. ಅಲ್ಲಿ ಸಮಾಜದ ಬೇರೆ ವರ್ಗಗಳವರು ಬಂದಾಗ ಯಾರಿಗಾದರೂ ಮುಜುಗರ ಉಂಟಾಗುವಂತಿದ್ದರೆ ಅಂತಹವರಿಗಾಗಿ ಖಾಸಗಿ ಪ್ರತಿಭಾವಂತರು ತಮ್ಮದೇ ವಿದ್ಯಾಸಂಸ್ಥೆಗಳನ್ನು ಕಟ್ಟಿಕೊಳ್ಳಬೇಕು; ಸಾರ್ವಜನಿಕವಾದ ಹಣ ಅದಕ್ಕೆ ಖಂಡಿತ ವ್ಯಯವಾಗಕೂಡದು. (ಇ) ಆರ್ಥಿಕವಾಗಿ ದುರ್ಬಲರಾಗಿರುವವರು ಯಾವ ಮೀಸಲಾತಿಯಡಿಯಲ್ಲೂ ಬಂದಿರದಿದ್ದರೆ ಅವರಿಗಾಗಿಯೂ ಕೆಲವು ಸ್ಥಾನಗಳನ್ನು ತೆಗೆದಿಡಬೇಕು. ಯಾವುದೇ ಮೀಸಲಾತಿಯಿಂದಲೂ ಈಗ ಲಭ್ಯವಿರುವ ಸ್ಥಾನಗಳು ಯಾವ ವರ್ಗಕ್ಕೂ ಕಡಿಮೆಯಾಗದಂತೆ ಸ್ಥಾನಗಳ ಹೆಚ್ಚಳವಾಗಬೇಕು. (ಈ) ಎರಡನೆಯ ಪೀಳಿಗೆಯ ವಿದ್ಯಾವಂತರ ಕುಟುಂಬಗಳ ಒಟ್ಟು ವಾರ್ಷಿಕ ಆದಾಯ ಆರು ಲಕ್ಷ ರೂಪಾಯಿಗಳಿಗಿಂತ ಹೆಚ್ಚಾಗಿದ್ದರೆ ಅಂತಹ ಕುಟುಂಬಗಳವರಿಗೆ ಮೀಸಲಾತಿ ಸೌಲಭ್ಯವನ್ನು ಉನ್ನತ ಹಂತದಲ್ಲಿ ಕ್ರಮೇಣ ಕಡಿಮೆಗೊಳಿಸಬಹುದು. ಏಕೆಂದರೆ ಅವರ ಆರ್ಥಿಕ ಮತ್ತು ಸಾಮಾಜಿಕ ಸ್ಥಾನಮಾನಗಳು ಸ್ವಲ್ಪಮಟ್ಟಿಗೆ ಉತ್ತಮವಾಗಿರುತ್ತವೆ, ಸ್ಪರ್ಧೆಯಲ್ಲಿ ಅನುಭವವಿರುತ್ತದೆ, ಬೌದ್ಧಿಕ ಸಾಮರ್ಥ್ಯವಿರುತ್ತದೆ. ಮುಂದಿನ ತಲೆಮಾರಿನ ಕುಟುಂಬಗಳಿಗೆ ಈ ವಾರ್ಷಿಕ ಆದಾಯದ ಗರಿಷ್ಠ ಮಿತಿಯನ್ನು ಕಡಿಮೆಗೊಳಿಸುತ್ತಾ ಹೋಗಬಹುದು. ಅಸ್ಪೃಶ್ಯತೆ ಮುಂತಾದ ಸಾಮಾಜಿಕ ಪಿಡುಗುಗಳು ಆ ಕುಟುಂಬಗಳವರಿಗೆ ತಟ್ಟುವ ಸಾಧ್ಯತೆ ಕಡಿಮೆಯಾಗಿರುತ್ತದೆ. ನೇರಸ್ಪರ್ಧೆಯಲ್ಲಿ ಭಾಗಿಗಳಾಗಿ ಅವರು ಗಳಿಸುವ ಸ್ಥಾನಗಳ ಜಾಗದಲ್ಲಿ ಕಡಿಮೆ ಶ್ರೇಯಾಂಕದವರು ಮೀಸಲಾತಿಯ ಸೌಲಭ್ಯ ಪಡೆಯುವಂತಾಗಿ ಹಿಂದುಳಿದ ಕುಟುಂಬಗಳಿಂದ ಬರುವ ಅಭ್ಯರ್ಥಿಗಳ ಆಯ್ಕೆಯಲ್ಲಿ ಹೆಚ್ಚಳವಾಗುತ್ತದೆ. ಬದಲಾಗುತ್ತಿರುವ ಸಾಮಾಜಿಕ ಆಯಾಮಗಳ ಸಂದರ್ಭದಲ್ಲಿ ಆರ್ಥಿಕವಾಗಿ ಹಿಂದುಳಿದಿರುವಿಕೆಯು ಹೆಚ್ಚಿನ ಗಮನಕ್ಕೆ ಅರ್ಹವಾಗಿರುತ್ತದೆ.

ಇದೇ ಮೇ ತಿಂಗಳಲ್ಲಿ ಲಕ್ನೋ ನಗರದ ಸ್ವಚ್ಛತೆಯ ವಿಭಾಗಕ್ಕೆ ನೌಕರರ ಆಯ್ಕೆ ನಡೆಯುವುದಿತ್ತು. ಭಂಗಿಗಳ ಕೆಲಸಕ್ಕೆ ಕೆಲವು ಬ್ರಾಹ್ಮಣ ಅಭ್ಯರ್ಥಿಗಳಿದ್ದರು. ಇದು ಸ್ವಾಗತಾರ್ಹವಾದ ಬೆಳವಣಿಗೆ ಎನಿಸುತ್ತದೆ; ಆದರೆ ಈವರೆಗೆ ಆ ಕೆಲಸಗಳನ್ನು ಮಾಡುತ್ತಿದ್ದ ಜನ ವಿಭಾಗಗಳಿಂದ ಈ ಹೊಸ ಅಭ್ಯರ್ಥಿಗಳ ವಿರುದ್ಧ ಆಕ್ಷೇಪವನ್ನೆತ್ತಲಾಯಿತು. ಭಂಗಿಗಳ ಕೆಲಸ ಇಂಥವರಿಗೇ ಮೀಸಲೆಂಬ ಪದ್ಧತಿಯನ್ನು ವಿರೋಧಿಸುವವರ ಆತಂಕವು ಉದ್ಯೋಗದ ಅವಕಾಶಕ್ಕೆ ಸಂಬಂಧಿಸಿದ್ದು. ಅದು ಬೇರೆ ಕ್ಷೇತ್ರಗಳಿಗೂ ಅನ್ವಯಿಸುತ್ತದೆ. ಒಟ್ಟು ಸ್ಥಾನಗಳ, ಉದ್ಯೋಗಗಳ, ಹೆಚ್ಚಳವೊಂದೇ ಇದಕ್ಕೆ ಪರಿಹಾರ. ಅದಕ್ಕಾಗಿ ನಮ್ಮ ಆರ್ಥಿಕ ಮತ್ತು ಉತ್ಪಾದನಾ ವ್ಯವಸ್ಥೆ ಮತ್ತು ಸಂಬಂಧಗಳ ಸರ್ವಾಂಗೀಣ ಬದಲಾವಣೆ ಬೇಕಾಗುತ್ತದೆ. ಆ ದಿಕ್ಕಿನಲ್ಲಿ ಮೀಸಲಾತಿಯು ಇಂದಿನ ಚಾರಿತ್ರಿಕ ಸಂದರ್ಭದಲ್ಲಿ ಅವಶ್ಯಕ. ''ಮೆರಿಟ್'' ದೊರೆಗಳಿಗೆ ಅಷ್ಟೂ ತಿಳಿಯುವುದಿಲ್ಲವೇ ?

ಜಾಗತಿಕ ಫುಟ್‌ಬಾಲ್ ಕ್ರೀಡೆಗಳಲ್ಲಿ ಆಫ್ರಿಕಾದ ದೇಶಗಳು ಅಧಿಕ ಸಂಖ್ಯೆಯಲ್ಲಿ ಪಾಲ್ಗೊಂಡದ್ದು, ಜಾರ್ಜ್ ಬುಷ್ ರಾತ್ರೋರಾತ್ರಿ ಕಳ್ಳನಂತೆ ಐದು ಗಂಟೆಗಳ ಕಾಲ ಇರಾಕಿಗೆ ಬಂದಿದ್ದು, ಶ್ರೀಮತಿ ಕೆ. ಎಸ್. ಲಕ್ಷ್ಮಿಯವರು ಬೆಂಗಳೂರಿನ ಪದವೀಧರ ಕ್ಷೇತ್ರದಿಂದ ವಿಧಾನ ಪರಿಷತ್ತಿಗೆ ಸ್ಪರ್ಧಿಸಿದ್ದು, ಇವು ಈ ತಿಂಗಳ ಬೇರೆ ಕೆಲವು ಪ್ರಮುಖ ಸಂಗತಿಗಳು. ಅವುಗಳನ್ನು ಕುರಿತು ಓದುಗರು ವಿಶ್ಲೇಷಣೆ, ವ್ಯಾಖ್ಯಾನ ಮಾಡಿಕೊಳ್ಳುತ್ತಾರೆಂದು ನಿರೀಕ್ಷಿಸಲಾಗಿದೆ. ನೈಸ್ ಕಂಪನಿಯ ಅಕ್ರಮ ಏಳಿಗೆ, ಕೆಲವು ರಾಜಕೀಯ ನಾಯಕರ ಭೂಮಿ ಆಸ್ತಿ ಮತ್ತು ಇನ್ನು ಕೆಲವರ ನೈಸ್ ಕಂಪನಿ ಬಗೆಗಿನ ಪಕ್ಷಪಾತ, ಇವೆರಡರ ನಡುವೆ ರೈತರು ಭೂಮಿ ಕಳೆದುಕೊಂಡು ವಲಸೆಹೋಗಬೇಕಾಗಿ ಬಂದಿರುವುದು, ಇವೆಲ್ಲಾ ಕೇವಲ ಚರ್ಚೆಗೆ ಗ್ರಾಸವಲ್ಲ. ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಪಿನಲ್ಲಿ 'ಅಭಿವೃದ್ಧಿ' ಎನ್ನುವುದನ್ನು ವಿವರಿಸಲಾಗಿದೆ. ಸುಮಾರು ನೂರಿಪ್ಪತ್ತು ಕಿಲೋಮೀಟರ್ ಉದ್ದದ ಕಾರಿಡಾರ್ ರಸ್ತೆಯಲ್ಲಿ ಐದು ಟೌನ್‌ಶಿಪ್‌ಗಳ ನಿರ್ಮಾಣವು ಅಭಿವೃದ್ಧಿಯೆನಿಸಿಕೊಳ್ಳುತ್ತದೆಂಬ ಇಂಗಿತ ಆ ತೀರ್ಪಿನಲ್ಲಿದೆ. ಆ ರಸ್ತೆಯನ್ನು ಬಳಸುವವರು ಟೌನ್‌ಶಿಪ್‌ಗಳಿಗಾಗಿ ಬಳಸುತ್ತಾರೆ; ಇಲ್ಲದಿದ್ದರೆ ಬೇರೆ ರಸ್ತೆಯಲ್ಲಿ ಹಣವನ್ನು ಪಾವತಿಸದೆ ಪ್ರಯಾಣ ಮಾಡುತ್ತಾರೆ. ಟೌನ್‌ಶಿಪ್‌ಗಳಲ್ಲಿ ಏನಿರುತ್ತದೆ? ಅದನ್ನು ನ್ಯಾಯಾಲಯವು ಗಮನಿಸಿಲ್ಲ. ಅಲ್ಲಿ ಜೂಜಾಟ, ಮದ್ಯಪಾನ ಮುಂತಾದ ವ್ಯಸನಗಳಿಗೆ ಸೊಗಸಾದ ತಾಣಗಳಿರುತ್ತವೆ. ಬೆಂಗಳೂರಿನ ಕಾರ್ಪೊರೇಟ್ ಸುಸಂಸ್ಕೃತರಿಗೆ ಅಷ್ಟೂ ಸೌಲಭ್ಯ ಕಲ್ಪಿಸದಿದ್ದರೆ ಅವರು ಇಲ್ಲೇ ಉಳಿದು ವಿದೇಶಿ ಬಂಡವಾಳದ ಹೂಡಿಕೆಯನ್ನು ಊರ್ಜಿತಗೊಳಿಸಲು ಸಾಧ್ಯವೇ! ನಮ್ಮ ಐ.ಟಿ., ಬಿ.ಟಿ. ಮೇಧಾವಿಗಳಿಗೆ 'ಔಟಿಂಗ್' ಬೇಡವೆ !! ರೈತರ ಮನೆ ಹಾಳಾಗಲಿ, ಇವರ ಸೊಕ್ಕನ್ನು ತಣಿಸುವುದು ''ಅಭಿವೃದ್ಧಿ'': ಇದು ನವ ನಾಗರಿಕತೆ. ಅದನ್ನು ಮೆಚ್ಚಬೇಕೆ ಅಥವಾ ಮೆಟ್ಟಿನಿಲ್ಲಬೇಕೆ ?

ನಾಡಿನ ಬಹುಸಂಖ್ಯಾತ ಜನರ ಮನಸ್ಸಿನಲ್ಲಿ ಪ್ರೀತಿ ಆದರಗಳ ಸ್ಥಾನ ಪಡೆದಿದ್ದ ರಾಜಕುಮಾರ್ ಅವರು ಇದಕ್ಕಿದ್ದಂತೆ ತೀರಿಕೊಂಡಿದ್ದು ಜನರ ದುಃಖಸ್ಫೋಟಕ್ಕೆ ಕಾರಣವಾಯಿತು. ತಮ್ಮ ನಾಯಕನ ಮುಖದರ್ಶನಕ್ಕೆ ಸರಿಯಾದ ವ್ಯವಸ್ಥೆಯನ್ನು ಮಾಡದಿದ್ದುದು ಅವರ ಆಕ್ರೋಶವನ್ನು ಮತ್ತಷ್ಟು ಹೆಚ್ಚಿಸಿತು. ಗಲಭೆಗಳಾಗಿ ೮ ಜನ ಪ್ರಾಣಬಿಡಬೇಕಾಯಿತು. ಪೊಲೀಸ್ ಗೋಲಿಬಾರಿನಲ್ಲಿ ೭ ಜನ ತೀರಿದರೆ, ಜನಜಂಗುಳಿಯ ಹೊಡೆತದಿಂದ ಒಬ್ಬರು ತೀರಿಕೊಂಡರು. ಈ ಸಾವುಗಳು ಸಂಭವಿಸುವ ಹೊತ್ತಿನಲ್ಲೆ ರಾಜಕುಮಾರರ ದೇಹದಿಂದ ತೆಗೆದ ಎರಡು ಕಣ್ಣುಗಳನ್ನು ಇಬ್ಬರು ಕುರುಡರಿಗೆ ವೈದ್ಯರು ಕಸಿ ಮಾಡುತ್ತಿದ್ದರು. ರಾಜ್ ತಮಗೆ ಯಾವ ಸಂಬಂಧವೂ ಇಲ್ಲದ ಎಂಟು ಜನರ ಜೀವಕ್ಕೆ ಎರವಾಗಿದ್ದರು; ಹಾಗೆಯೇ ಯಾವ ಸಂಬಂಧವೂ ಇಲ್ಲದ ಇಬ್ಬರಿಗೆ ಕಣ್ಣು ಕೊಟ್ಟು ಹೊಸ ಬದುಕಿಗೆ ಕಾರಣರಾಗಿದ್ದರು. ಈ ಸಾವು ಮತ್ತು ಹೊಸಜೀವದ, ಕತ್ತಲು ಕವಿಸುವ ಮತ್ತು ಕತ್ತಲು ಕಳೆಯುವ ಎರಡು ಕ್ರಿಯೆಗಳು ಒಟ್ಟಿಗೆ ನಡೆದವು. ಇದು ಸಾಂಕೇತಿಕವಾಗಿದ್ದು, ಕಳೆದ ಮುಕ್ಕಾಲು ಶತಮಾನದ ಕಾಲ ಕರ್ನಾಟಕದ ಸಿನಿಮಾ ಸಂಸ್ಕೃತಿಯ ಇಬ್ಬಗೆಯ ಪರಿಣಾಮಗಳನ್ನು ಸೂಚಿಸುತ್ತಿದೆ.

ರಾಜ್ ಅಂತ್ಯಸಂಸ್ಕಾರದ ಹೊತ್ತಲ್ಲಿ ಸತ್ತವರ ಹೆಸರು ಮತ್ತು ಕುಟುಂಬದ ಹಿನ್ನೆಲೆಗಳು – ಪತ್ರಿಕೆಯೊಂದು ವರದಿ ಮಾಡಿದಂತೆ ಹೀಗಿವೆ. ಗೋಪಾಲ್ (ವಯಸ್ಸು ೨೭), ಮೆಕ್ಯಾನಿಕ್ ಕೆಲಸ. ಮದುವೆ ನಿಶ್ಚಯವಾಗಿತ್ತು. ಮನೆಯಲ್ಲಿ ಕಣ್ಣುಕಾಣದ ತಂದೆ ಇದ್ದಾರೆ; ಜನಾರ್ದನ್ (೨೫), ಗಾರ್ಮೆಂಟ್ ಫ್ಯಾಕ್ಟರಿಯಲ್ಲಿ ಕೆಲಸ. ಸಾಲಮಾಡಿ ತಂಗಿಗೆ ಮದುವೆ ಮಾಡಿದ್ದರು; ಶೈಲೇಶ್‌ಕುಮಾರ್ (೨೮), ತಂದೆ ಸೆಕ್ಯುರಿಟಿ ಗಾರ್ಡ್. ಒಬ್ಬನೇ ಮಗ. ಮನೆಯಲ್ಲಿ ಎರಡೂ ಕಾಲಿಲ್ಲದ ತಂಗಿಯಿದ್ದಾಳೆ; ಯಶವಂತಶೆಟ್ಟಿ (೧೯), ಗಾರ್ಮೆಂಟ್ಸ್‌ನಲ್ಲಿ ಕೆಲಸ. ಸುರೇಶ್ ಶೆಟ್ಟಿಯವರ ಒಬ್ಬನೇ ಮಗ; ಅಮ್ಜದ್ ಕಟ್ಟಿಮನಿ (೨೫). ಉತ್ತರ ಕರ್ನಾಟಕದ ಹಳ್ಳಿಯಿಂದ ಬಂದು, ಯಾವುದೋ ಸಣ್ಣ ಫ್ಯಾಕ್ಟರಿಯಲ್ಲಿ ಕೆಲಸ ಮಾಡುತ್ತಿದ್ದರು. ಹೆಂಡತಿ ತುಂಬು ಗರ್ಭಿಣಿಯಾಗಿದ್ದರು; ಮುನಿರಾಜು (೪೦). ಕೆಂಗೇರಿಯಲ್ಲಿ ಕೂಲಿ ಕೆಲಸ. ಇಬ್ಬರು ಹೆಣ್ಣು ಮಕ್ಕಳ ತಂದೆ. ಹೆಂಡತಿ ರಾಧಮ್ಮ ಇದ್ದಾರೆ; ಕುಮಾರ್ (೨೨), ಕಾರ್ಪೆಂಟರ್ ಕೆಲಸ; ಮಂಜುನಾಥ್ ಮಲ್ಲಾಡಿ (೨೫) ಕೆಎಸ್‌ಆರ್‌ಪಿ ತರಬೇತಿಯಲ್ಲಿದ್ದ ಪೇದೆ. ಸವದತ್ತಿಯವರು. ಕುಟುಂಬಕ್ಕೆ ಅವರೊಬ್ಬರೆ ಆಸರೆಯಾಗಿದ್ದರು.

ಈ ವಿವರಗಳಿಂದ ಗೊತ್ತಾಗುವ ಸಂಗತಿ ಇವು: ಸತ್ತವರೆಲ್ಲ ಗಂಡಸರು; ಮುನಿರಾಜು ಬಿಟ್ಟರೆ ಉಳಿದವರೆಲ್ಲ ತರುಣರು; ಬಹುಮಟ್ಟಿಗೆ ಬಡ ಮತ್ತು ಹಿಂದುಳಿದ ಜಾತಿಗಳಿಂದ ಬಂದವರು; ಉನ್ನತ ಶಿಕ್ಷಣ ಪಡೆದವರಲ್ಲ, ಹೊಟ್ಟೆಪಾಡಿಗಾಗಿ ಸಣ್ಣ ಫ್ಯಾಕ್ಟರಿಗಳಲ್ಲಿ ಕೆಲಸ ಮಾಡುತ್ತಿದ್ದವರು; ಅವರಲ್ಲಿ ಇಬ್ಬರು ಉತ್ತರ ಕರ್ನಾಟಕದವರು. ಬಹುಶಃ ಊರುಗಳಲ್ಲಿ ಹೊಲವಿಲ್ಲದೆ, ಹೊಲವಿದ್ದರೂ ಅದರಲ್ಲಿ ಬದುಕಲು ಸಾಧ್ಯವಾಗದೆ, ನಗರಕ್ಕೆ ಹೊಸ ಬಾಳನ್ನು ಹುಡುಕಿಕೊಂಡು ಬಂದವರು; ಅಧಿಕೃತ ಕರ್ತವ್ಯ ನಿರ್ವಹಣೆಗೆ ಬಂದಿದ್ದ ಮಂಜುನಾಥ್ ಬಿಟ್ಟರೆ, ಹೆಚ್ಚಿನವರೆಲ್ಲ ಬದುಕಿನಲ್ಲಿ ಭದ್ರತೆಯಿಲ್ಲದ ಉದ್ಯೋಗದಲ್ಲಿ ಇದ್ದವರು. ದಿನನಿತ್ಯ ಜೀವನಕ್ಕೆ ಹೋರಾಡುತ್ತಿದ್ದವರು. ರಾಜ್ ಅಂತ್ಯಸಂಸ್ಕಾರದಲ್ಲಿ ಬೆಂಗಳೂರಿನ ಬೀದಿಗಳಲ್ಲಿದ್ದ ಹೆಚ್ಚಿನ ಜನ ಇಂತಹ ಹಿನ್ನೆಲೆಯವರೆ.



ಪ್ರಶ್ನೆಯೆಂದರೆ ನಟರೊಬ್ಬರ ಸಾವಿಗೆ ಶೋಕ ವ್ಯಕ್ತಪಡಿಸಲು ಯಾಕೆ ಈ ವರ್ಗದ ಜನರೇ ಬೀದಿಗಿಳಿದು ಭಾವಾವೇಶ ಪ್ರಕಟಿಸುತ್ತಾರೆ ? ಯಾಕೆ ಪೊಲೀಸರನ್ನು ಕಾರುಗಳನ್ನು ದೊಡ್ಡ ಕಟ್ಟಡಗಳನ್ನು ಕಂಡರೆ ಅದಕ್ಕೆ ಕಲ್ಲು ಹೊಡೆಯಬೇಕು ಬೆಂಕಿ ಹಚ್ಚಬೇಕು ಅನಿಸುತ್ತದೆ ? ಈ ಬೃಹತ್ ಜಂಗುಳಿಯಲ್ಲಿ ರಾಜಕುಮಾರ್ ಮೇಲೆ ಅಭಿಮಾನವಿಲ್ಲದ ಪುಂಡರು ಸೇರಿದ್ದಿರಬಹುದು; ಪೊಲೀಸರು ಹೇಳಿದಂತೆ ಅರೆಸ್ಟಾದವರಲ್ಲಿ ಬಹಳಷ್ಟು ಜನ ಕ್ರಿಮಿನಲ್ ಹಿನ್ನೆಲೆಯವರು ಇರಬಹುದು; ಆದರೂ ಅಲ್ಲಿಗೆ ಬಂದಿದ್ದವರನ್ನೆಲ್ಲ ದುಷ್ಕರ್ಮಿಗಳು, ಸಮಾಜಘಾತುಕ ಶಕ್ತಿಗಳು ಎನ್ನಲಾಗದು. ಅವರಲ್ಲಿ ಹೆಚ್ಚಿನವರು ನಮ್ಮ ಆರ್ಥಿಕ ರಾಜಕೀಯ ವ್ಯವಸ್ಥೆ ಹಿಡಿದಿರುವ ಅಭಿವೃದ್ಧಿ ಮಾದರಿ ಹಾಗೂ ನಮ್ಮ ಮಹಾನಗರಗಳು ಹುಟ್ಟುಹಾಕಿರುವ ಒಂದು ತಿರಸ್ಕೃತ ಸಮುದಾಯಕ್ಕೆ ಸೇರಿದವರು. ಇವರು ತೋರಿದ ಭಾವೋದ್ರೇಕ, ಮಾಡಿದ ಗಲಭೆ ಕೆಟ್ಟದಾಗಿತ್ತು. ಖಂಡನಾರ್ಹವಾಗಿತ್ತು. ಆದರೆ ಅದಕ್ಕೆ ಪ್ರತಿಷ್ಠಿತವಾಗಿರುವ ವ್ಯವಸ್ಥೆಯ ಬಗ್ಗೆ ತನ್ನ ಸುಪ್ತ ಹತಾಶೆ ಆಕ್ರೋಶಗಳ ಪ್ರತಿಕ್ರಿಯೆಯ ಆಯಾಮ ಕೂಡ ಇತ್ತು ಅನಿಸುತ್ತದೆ.

ಶವಸಂಸ್ಕಾರದ ಹೊತ್ತಿನ ರಕ್ತಸಿಕ್ತವಾದ ಅರಾಜಕವಾದ ದೃಶ್ಯಗಳ ಒಳಗೂ ಒಂದು ಸಂಗತಿಯನ್ನು ಮರೆಯುವಂತಿಲ್ಲ. ಅದು ರಾಜಕುಮಾರ್ ಅವರನ್ನು ಅವರ ಜಾತಿ ಯಾವುದೆಂದು ಮರೆತು ಪ್ರೀತಿಸಿದ ಬೆಳೆಸಿದ ಕರ್ನಾಟಕದ ತಳಸ್ತರದ ಜನರ ಜಾತ್ಯತೀತ ಗುಣ. ಈ ನಟನಿಗೆ ಕರ್ನಾಟಕದ ಮೂರು ತಲೆಮಾರುಗಳ ಜನ ತೋರಿದ ಪ್ರೀತಿ ಅಪೂರ್ವ. ಇದು ಅವರು ಜೀವಂತ ಇದ್ದಾಗಲೂ ಇತ್ತು. ನಿಧನರಾದಾಗಲೂ ಪ್ರಕಟವಾಯಿತು. ಇದು ರಾಜಕುಮಾರ್ ಅವರ ವೈಯಕ್ತಿಕ ಸಾಧನೆಯ ಜತೆಗೆ ಅವರಿದ್ದ ಸಿನಿಮಾ ಮಾಧ್ಯಮಕ್ಕಿರುವ ಅಪಾರ ಶಕ್ತಿ ಆಕರ್ಷಣೆಗಳಿಂದಲೂ ಬಂದುದಾಗಿತ್ತು. ಅವತ್ತು ಅಂತಿಮ ಯಾತ್ರೆಗೆ ಬೆಂಗಳೂರಿನ ಗಲ್ಲಿಗಳ ಜನರು ಮಾತ್ರವಲ್ಲ, ದೂರದಿಂದ ಬಸ್‌ಚಾರ್ಜು ಹಾಕಿಕೊಂಡು ಸಮಾಜದ ಕೆಳಸ್ತರಕ್ಕೆ ಸೇರಿದ ಜನ ಬಂದಿದ್ದರು. ಸತ್ತ ಎಂಟು ಜನರ ಜಾತಿಧರ್ಮ,



# ಈ ಸಾವುಗಳು ನ್ಯಾಯವೇ ?

■

**ಡಾ|| ರಹಮತ್ ತರೀಕೆರೆ**

ಆರ್ಥಿಕ ಹಿನ್ನೆಲೆಗಳನ್ನು ನೋಡಿದರೆ ಇದು ಸ್ಪಷ್ಟವಾಗುತ್ತದೆ. ಅವರು ಜಾತ್ಯತೀತ ಎಂದಾಗ ನಿತ್ಯ ಬದುಕಿನಲ್ಲಿ ತಮ್ಮ ಜಾತಿಯನ್ನು ಬಿಟ್ಟವರಲ್ಲ, ಆದರೆ ಕಲಾವಿದರ ಜಾತಿಯನ್ನು ಮಾತ್ರ ನೋಡುವುದಿಲ್ಲ, ಸತ್ತವರ ಮನೆಗೆ ಹೋಗುವುದು, ಶವದ ಮುಖ ನೋಡುವುದು, ಮನೆಯವರ ದುಃಖದಲ್ಲಿ ಪಾಲುಗೊಳ್ಳುವುದು, ಮಣ್ಣುಕೊಡುವುದು, ಅದಾಗದಿದ್ದರೆ ಸಮಾಧಿಗಾದರೂ ಹೋಗಿ ಕೈಮುಗಿಯುವುದು ಇವೆಲ್ಲ ಈ ಸ್ತರದ ಸಮುದಾಯಗಳು ಜಾತಿ ಚೌಕಟ್ಟಿನಲ್ಲೆ ರೂಪಿಸಿಕೊಂಡಿರುವ ಮಾನವೀಯತೆ. ಸೋಜಿಗ ಎಂದರೆ ಮಣ್ಣುಮಾಡುವ ಸಂಪ್ರದಾಯವುಳ್ಳ ರಾಜ್ ಸಂಸ್ಕಾರಕ್ಕೆ, ಕಾರ್ಯಕ್ರಮಕ್ಕೆ ಅಗ್ನಿಸಂಸ್ಕಾರ ಮಾಡುವ ಶಿಖೆ ಬಿಟ್ಟ ಆರು ಜನ ವೈದಿಕರೂ ಬಂದಿದ್ದರು. ಅವರ್ಯಾಕೆ ಬಂದಿದ್ದರೊ ತಿಳಿಯದು. ಆದರೆ ಜನ ಗಣ್ಯರಿಗೆ ಪೋಸುಕೊಡಲು ಅವಕಾಶ ಕೊಡದಂತೆ, ಪುರೋಹಿತರಿಗೆ ಕೆಲಸ ಕೊಡದಂತೆ ನುಗ್ಗಾಡಿ ತಾವೆ ಮಣ್ಣುಕೊಟ್ಟರು. ಸಿನಿಮಾ ಸಂಸ್ಕೃತಿ ಹುಟ್ಟುಹಾಕಿದ ನಾಯಕಾರಾಧನೆಯ ಶಿಷ್ಟ ಜಾತ್ಯತೀತ ಆಚರಣೆಯಂತೆ ಇದು ಕಂಡಿತು.

ಆದರೆ ಯಾವ ಜನಜಂಗುಳಿ ಸಿನಿಮಾ ನಟರ ಜತೆಗೆ ಈ ಜಾತ್ಯತೀತ ಮಾನವೀಯ ಸಂಬಂಧವನ್ನು ಹುಟ್ಟುಹಾಕಿತ್ತೊ, ಅದುವೆ ಈ ಸಂದರ್ಭದಲ್ಲಿ ಸತ್ತು ಬಲಿಪಶು ಕೂಡ ಆಗಬೇಕಾಯಿತು. ಇದೊಂದು ವ್ಯಂಗ್ಯ. ರಾಜ್ ಅವರಲ್ಲಿ ಹಿಂದಿನ ಚೈತನ್ಯ ಉಳಿದಿರಲಿಲ್ಲ, ವಯಸ್ಸಾಗಿತ್ತು, ಕಾಯಿಲೆಯಿಂದ ಬಳಲುತ್ತಿದ್ದರು. ಕಾಡಿನಲ್ಲಿ ೧೦೦ ದಿನ ಕಳೆದು ಬಂದ ಬಳಿಕ ವಿಚಿತ್ರ ಖಿನ್ನತೆಗೆ ಅಂತರ್ಮುಖತೆಗೆ ಈಡಾಗಿದ್ದರು. ದುಷ್ಟರನ್ನು ಸದೆಬಡಿದು ಜನರನ್ನು ಕಷ್ಟದಿಂದ ಪಾರುಮಾಡಿದ ನಾಯಕ ಪಾತ್ರಗಳನ್ನು ಜೀವಮಾನವಿಡಿ ಮಾಡಿದ ಅವರು, ವಾಸ್ತವಿಕ ಬದುಕಿನಲ್ಲಿ ಒಬ್ಬ ಕಾಡುಗಳ್ಳನ ಕೈಗೆ ಸಿಕ್ಕು, 'ನನ್ನನ್ನು ಬಿಡಿಸಿಕೊಳ್ಳಿ' ಎಂದು ಸರಕಾರವನ್ನು ವಿನಂತಿಸಿ, ಸಂಧಾನಗಳಾಗಿ ಹೊರಬರುವಂತೆ ಆಗಿದ್ದು ಬಹುಶಃ ಒಳಗೆ ಕುಗ್ಗಿಸಿತ್ತು. ಆದರೂ ಜನಮಾನಸದಲ್ಲಿ ಅವರ ಬಗ್ಗೆ ಪ್ರೀತಿ ಉಳಿದಿತ್ತು. ಅವರು ಒಬ್ಬರು. ೭೭ ವರ್ಷಕಾಲ ನಿಡಿದಾದ ಸಾರ್ಥಕವಾದ ಬಾಳನ್ನು ಬಾಳಿದವರು. ತಮ್ಮ ನಟನೆಯ ಮೂಲಕ, ಹಾಡುಗಳ ಮೂಲಕ ಕೋಟ್ಯಂತರ ಪ್ರೇಕ್ಷಕರನ್ನು ರಂಜಿಸಿದವರು. ವೈಯಕ್ತಿಕವಾಗಿ ಅಪಾರವಾದ ಕೀರ್ತಿ ಹಣ ಜನಪ್ರಿಯತೆಯನ್ನು ಅನುಭವಿಸಿದವರು. ಆದರೂ ಜನ ಈ ಸಾವು ನ್ಯಾಯವೇ ಎಂದು ಪರಿತಪಿಸಿದರು. ಆದರೆ ಅವರ ಸಾವಿಗೆ ದುಃಖ ಪ್ರಕಟಿಸಲು ಬಂದ ಇನ್ನೂ ಬದುಕಿ ಬಾಳಬೇಕಾದ ತರುಣರು ತಮ್ಮ ಕುಟುಂಬಗಳನ್ನು ಅನಾಥ ಮಾಡಿ ಸತ್ತದ್ದು ನ್ಯಾಯವೆ? ಇದು ಅನ್ಯಾಯವಾದರೆ, ಈ ಸಾವುಗಳ ಹೊಣೆಯನ್ನು ಹೊರಬೇಕು ಯಾರು? ಪ್ರತಿಷ್ಠಿತ ಬಡಾವಣೆಯ ಜನರಂತೆ ಟೀವಿಯಲ್ಲಿ ಕುಳಿತು ನೋಡದೆ, ಶೋಕಾಚರಣೆಗೆ ಬೀದಿಗೆ ಬಂದಿದ್ದ ಈ ಏಳು ಜನರೆ? ಗೋಲಿಬಾರು ಮಾಡಿದ ಪೊಲೀಸರದೆ? ಪರಿಸ್ಥಿತಿಯನ್ನು ನಿಭಾಯಿಸದ ಸರಕಾರವೇ? ಪ್ರೇಕ್ಷಕರನ್ನು 'ಅಭಿಮಾನಿ'ಗಳನ್ನಾಗಿ ಮಾಡಿ, ಅವರಿಂದ ದೇವರಾಗಿ ಪೂಜೆಗೊಳ್ಳುವ ಸಿನಿಮಾ ನಟರೆ? ಚಿಂತನೆಗೆ ಬದಲಾಗಿ ಭಾವಾವೇಶವನ್ನು ಹುಚ್ಚುಚ್ಚಾಗಿ ಅಭಿವ್ಯಕ್ತಿ ಮಾಡುವ ಮನೋಭಾವ ಬೆಳೆಸಿರುವ ನಮ್ಮ ಜನಪ್ರಿಯ ಸಿನಿಮಾ ಉದ್ಯಮವೇ? ಇಂತಹ ಜನ ವರ್ಗವನ್ನು ಉತ್ಪತ್ತಿ ಮಾಡಿರುವ ನಮ್ಮ ಆರ್ಥಿಕ ರಾಜಕೀಯ ವ್ಯವಸ್ಥೆಯೇ? ಯಾರು ಹೊರಬೇಕು?

ರಾಜಕುಮಾರ್ ಅವರ ಸಾಂಸ್ಕೃತಿಕ ಮಹತ್ವವನ್ನು ಕುರಿತು ಕನ್ನಡದ ಅನೇಕ ಚಿಂತಕರು ಸಾಕಷ್ಟು ಚರ್ಚಿಸಿದ್ದಾರೆ. ಆಧುನಿಕ ಕರ್ನಾಟಕದ ಚರಿತ್ರೆಯನ್ನು, ಅದರಲ್ಲೂ ಸಿನಿಮಾ ಉದ್ಯಮ, ಕನ್ನಡ ಚಳುವಳಿಗಳನ್ನು ಕುರಿತು ಬರೆಯುವ ಯಾರೂ ರಾಜಕುಮಾರ್ ಅವರನ್ನು ಕೈಬಿಟ್ಟು ಬರೆಯಲು ಸಾಧ್ಯವಿಲ್ಲ. ೨೦ನೇ ಶತಮಾನದಲ್ಲಿ ಕರ್ನಾಟಕ ಕಂಡ ಅತ್ಯಂತ ಜನಪ್ರಿಯ ವ್ಯಕ್ತಿಗಳಲ್ಲಿ ಒಬ್ಬರು. ಹಿಂದುಳಿದ ಸಾಮಾಜಿಕ ಹಿನ್ನೆಲೆಯಿಂದ ಬಂದ ಅವರು ತಮ್ಮ ಪ್ರತಿಭೆಯಿಂದ ದೊಡ್ಡದಾಗಿ ಬೆಳೆದವರು. ಲಕ್ಷಾಂತರ ಜನರಿಗೆ ಉದ್ಯೋಗ ದೊರಕಿಸಿಕೊಟ್ಟಿರುವ ಕನ್ನಡ ಸಿನಿಮಾ ಉದ್ಯಮಕ್ಕೆ ಬೇಕಾದ ಆಧಾರವನ್ನು ಒದಗಿಸಿದವರು. ಕರ್ನಾಟಕದ ಎಲ್ಲ ಸಮುದಾಯಗಳಿಗೆ ಸಂಬಂಧಪಟ್ಟ ಪಾತ್ರಗಳನ್ನು ಮಾಡಿ, ಅವರ ಮನಸ್ಸನ್ನು ರಂಜಿಸಿ, ಅವರ ಭಾವನೆಗಳಿಗೆ ಸ್ಪಂದಿಸಿದವರು. ಜತೆಗೆ ಅವರ ಸರಳತೆ ಸಜ್ಜನಿಕೆ ಮಗುವಿನ ಮುಗ್ಧತೆ ಎಲ್ಲವೂ ದಂತಕತೆಯಾಗಿದೆ. ಆದರೆ ಒಟ್ಟು ಕನ್ನಡ ಸಿನಿಮಾ ಜಗತ್ತಿನ ಭಾಗವಾಗಿರುವ ರಾಜಕುಮಾರ್ ಹಾಗೂ ಅವರ ಚಿತ್ರಗಳು ಸಿನಿಮಾ ಪ್ರೇಕ್ಷಕ ಸಮುದಾಯದಲ್ಲಿ ಹುಟ್ಟುಹಾಕಿರುವ ಮನೋಭಾವ ಎಂತಹುದು? ಅದರ ಪರಿಣಾಮಗಳು ಯಾವುವು ಎಂಬ ಬಗ್ಗೆ ಪ್ರಶ್ನೆಗಳನ್ನು ಕೇಳಿಕೊಳ್ಳಬೇಕಿದೆ. ಅದು ಹುಟ್ಟುಹಾಕಿದ ಮನೋಭಾವಗಳಲ್ಲಿ ಆದರ್ಶವಾದ ಜನಪರ ಮೌಲ್ಯಗಳೂ ಇವೆ, ಸಾಂಪ್ರದಾಯಿಕ ಪ್ರತಿಗಾಮಿ ಮೌಲ್ಯಗಳೂ ಇವೆ.

ಸಿನಿಮಾಗಳು, ಅದರ ನಟರು, ಕಂಪನಿ ನಾಟಕಗಳು, ಜನಪ್ರಿಯ ಕಾದಂಬರಿ, ಟಿ.ವಿ. ಸೀರಿಯಲ್ಲುಗಳು, ಟ್ಯಾಬ್ಲಾಯ್ಡ್ ಪತ್ರಿಕೆಗಳು ಮುಂತಾಗಿ ಬಹುಸಂಖ್ಯಾತ ಜನರನ್ನು ಹಿಡಿದಿಟ್ಟಿರುವ ಮಾಧ್ಯಮಗಳ ಪರಿಣಾಮಗಳ ಮೇಲೆ ಗಂಭೀರ ಅಧ್ಯಯನ ಮಾಡುವ ಪದ್ಧತಿಯೇ ಕನ್ನಡದಲ್ಲಿ ಕಡಿಮೆ. ತಮಿಳುನಾಡಿನಲ್ಲಿ ಎಂಜಿಆರ್ ಅವರ ಸಿನಿಮಾ ಹಾಗೂ ರಾಜಕಾರಣದ ಬಗ್ಗೆ ಬಹಳ ಅಧ್ಯಯನಗಳು ಬಂದಷ್ಟು ರಾಜಕುಮಾರ್ ಅವರ ಸಿನಿಮಾಗಳ ಮೇಲೆ ಬಂದಿಲ್ಲ. ನಮ್ಮ ಅಧ್ಯಯನಗಳಲ್ಲಿ ಒಂದೊ ಜನಪ್ರಿಯ ಸಂಸ್ಕೃತಿ ಕುರಿತು ಒಂದು ಬಗೆಯ ಪ್ರತಿಷ್ಠಿತ ದೃಷ್ಟಿಕೋನದ ತಿರಸ್ಕಾರವಿದೆ. ಇಲ್ಲವೇ ದೊಡ್ಡ ಕಲಾವಿದರು ಸಾಂಸ್ಕೃತಿಕ ನಾಯಕರಾದ ಬಗ್ಗೆ ವಿಮರ್ಶೆಯಿಲ್ಲದೆ



ನೋಡುವ ಗುಣಗ್ರಾಹಿತನವಿದೆ. ಪರ್ಯಾಯಗಳ ಹುಡುಕಾಟದಲ್ಲಿ ನಮ್ಮ ತಾತ್ವಿಕ ಪರಿಮಿತಿ, ರಾಜಕೀಯ ಅಸಹಾಯಕತೆಗಳೆ ಕೆಲವೊಮ್ಮೆ ನಾಯಕಾರಾಧನೆಯ ಸಂಸ್ಕೃತಿಯನ್ನು ಉದಾರವಾಗಿ ನೋಡಲು ಪ್ರೇರಿಸುತ್ತವೆಯೆ? ಜನಪ್ರಿಯ ಸಂಸ್ಕೃತಿಯ ಭಾಗವಾಗಿರುವ ಸಿನಿಮಾ ನಟರ ಆರಾಧನೆಯು ಹಾಗೂ ಅಭಿಮಾನಿ ಸಂಸ್ಕೃತಿಯು ಜನರಲ್ಲಿ ಬೆಳೆಸಿರುವ ಭಾವೋದ್ರೇಕವನ್ನು ವಿಮರ್ಶಾತ್ಮಕವಾಗಿ ನೋಡಬೇಕಿದೆ. ಇಲ್ಲದಿದ್ದರೆ, ಹೀಗೆ ಯಾರದೊ ಸಾವಿಗೆ ಇನ್ಯಾರೊ ಸಾಯುವ ಪರಿಸ್ಥಿತಿಯ ಬಗ್ಗೆ ನಿರ್ಲಿಪ್ತತೆ ತೋರಿದಂಗಾಗಬಹುದು.

ರಕ್ತಸಿಕ್ತ ಲಾಂಗನ್ನು ಹಿಡಿದುಕೊಂಡ, ತನ್ನ ಎದುರಾಳಿಯನ್ನು ತರಕಾರಿ ಹಣ್ಣಿನ ರಾಶಿಯ ಮೇಲೆ ಕೆಡವಿ ಚೆಲ್ಲಾಪಿಲ್ಲಿ ಮಾಡುವ ಉದ್ರಿಕ್ತ ಹೀರೊಗಳಿರುವ ಸಿನಿಮಾಗಳು ಬೆಂಗಳೂರಿಂದ ಹಿಡಿದು ಕರ್ನಾಟಕದ ಎಲ್ಲ ಪಟ್ಟಣಗಳಲ್ಲೂ ನಡೆಯುತ್ತವೆ. ಅವನ್ನು ನೋಡುವ ಒಂದು ದೊಡ್ಡ ಸಮುದಾಯವೂ ಇದೆ. ಗಾಂಧಿನಗರದ ಸಿನಿಮಾಗಳ ಮಾರುಕಟ್ಟೆಯ ಗಿರಾಕಿಗಳಿವರು. ನಾನಿರುವ ಹೊಸಪೇಟೆಯಲ್ಲಿ ಸಿನಿಮಾ ಸಂಸ್ಕೃತಿ ಸಾಕಿಬೆಳೆಸಿರುವ ಬಲಿಪಶುಗಳ ಒಂದು ಅಭಿನಯದ ದೃಶ್ಯವು ತಿಂಗಳಿಗೆ ಎರಡು ಬಾರಿಯಾದರೂ ಕಾಣಸಿಗುತ್ತದೆ. ಇಲ್ಲಿ ಹೊಸ ತೆಲುಗು ಸಿನಿಮಾ ಬಂದಾಗ, ಅದರ ನಾಯಕನಟನ ಚಿತ್ರಗಳನ್ನು ಅಂಟಿಸಿದ ರಟ್ಟಿನ ದೊಡ್ಡ ಸ್ಟಾರ್ ಮಾಡಿ, ನಕ್ಕಿಕಾಗದ ಅಂಟಿಸಿ, ಹೂವಿನಹಾರ ಹಾಕಿ, ಎತ್ತಿನ ಬಂಡಿಯಲ್ಲಿ ಹೇರಿಕೊಂಡು ಶಿಳ್ಳೆ ಹೊಡೆಯುತ್ತ ತಮಟೆ ಬಾರಿಸುತ್ತ ಬರುವ ಮೆರವಣಿಗೆಗಳು ಬರುತ್ತವೆ. ಈ ಮೆರವಣಿಗೆಯ ಗುಂಪಿನ ಹುಡುಗರೆಲ್ಲ ೨೦ರ ಆಸುಪಾಸಿನವರು. ಸ್ಟಾರಿನ ಮೆರವಣಿಗೆಗಳು ದಲಿತರ ಕೂಲಿಕಾರರ ಸ್ಲಮ್ಮುಗಳಿಂದಲೇ ಹೊರಡುತ್ತವೆ, ಪ್ರತಿಷ್ಠಿತ ಬಡಾವಣೆಗಳಿಂದಲ್ಲ. ಮನೆಕಟ್ಟುವ, ಮೈನ್ಸು ಅಗೆಯುವ, ಅಂಗಡಿ ಮುಂಗಟ್ಟುಗಳಲ್ಲಿ ಕೆಲಸ ಮಾಡುವ ಈ ಹುಡುಗರು ಅವರು. ತಮ್ಮ ವಾರದ ದುಡಿಮೆಯಲ್ಲಿ ೫೦ ರೂಪಾಯಿಯಲ್ಲಿ ಅವರು ನೋಡುವ ಸಿನಿಮಾ, ಅವರ ಜೀವನದ ಎಲ್ಲ ದುಮ್ಮಾನ ಅಪಮಾನ ಅಭದ್ರತೆಗಳನ್ನು ಕೆಲಹೊತ್ತು ಮರೆಯುವವರು.

ಇಂತಹ ಬಲಿಪಶುಗಳನ್ನು ನಮ್ಮ ನಗರಗಳು ಕಳೆದ ಶತಮಾನವಿಡೀ ಸೃಷ್ಟಿಸಿವೆ. ಅದರಲ್ಲೂ ಈಗ ನಮ್ಮ ಸರಕಾರಗಳು ಒಪ್ಪಿಕೊಂಡಿರುವ ಕಳೆದ ಹೊಸ ಅಭಿವೃದ್ಧಿಯ ಕಲ್ಪನೆಯಲ್ಲಿ ನಮ್ಮ ನಗರಗಳು ಇನ್ನು ಯಾವುದೊ ನಗರದಂತೆ ಆಗಲು ಪಡೆಯುತ್ತಿರುವ ರೂಪಾಂತರಗಳು, ಈ ಹೊಸ ಅಸ್ಪೃಶ್ಯ ಸಮುದಾಯವನ್ನು ಮತ್ತಷ್ಟು ಹೆಚ್ಚು ಸೃಷ್ಟಿಸಿವೆ. ಹಿಂದುಳಿದ ಜಾತಿಯವರು, ಹಳ್ಳಿಗಳಿಂದ ವಲಸೆ ಬಂದವರು, ಸಣ್ಣಪುಟ್ಟ ಗಲ್ಲಿಗಳಲ್ಲಿ ಕೊಳಗೇರಿಗಳಲ್ಲಿ ಇರುವವರು, ಶಾಲೆಗಳನ್ನು ಅರ್ಧಕ್ಕೆ ಬಿಟ್ಟವರು, ಗೌರವಾನ್ವಿತ ಜೀವನ ಮಾಡಲು ಬೇಕಾದ ಕೆಲಸ ಸಿಗದವರು. ಮಾರುಕಟ್ಟೆ ಗ್ಯಾರೇಜು ಹೋಟೆಲು ಬಾರು ಲಾಡ್ಜುಗಳಲ್ಲಿ ೧೫-೧೬ ಗಂಟೆ ಕೆಲಸದ ಭದ್ರತೆಯಿಲ್ಲದೆ ದುಡಿಯುವವರು. ಪ್ರತಿಷ್ಠಿತರಿಂದ ಬಯ್ಯಿಸಿಕೊಂಡು ನಿರ್ಲಕ್ಷ್ಯಕ್ಕೆ ಒಳಗಾಗಿ ಬದುಕುವವರು. ಉಳ್ಳವರಂತೆ ಬದುಕಲು ಸಾಮರ್ಥ್ಯವಿಲ್ಲದೆ ಅಗ್ಗದ ಬಟ್ಟೆಬರೆಗಳನ್ನು ಬಣ್ಣ ಬಣ್ಣದ ಥಳುಕಿನ ಬಟ್ಟೆ ಬರೆ ತೊಟ್ಟು ಶೋಕಿ ಮಾಡುವವರು, ಕೆಲವೊಮ್ಮೆ ಸಣ್ಣಪುಟ್ಟ ಕಳ್ಳತನ ಮಾಡುವವರು, ಈ ಕಾರಣದಿಂದ ಪೋಲಿಸರಿಂದ ಹೊಡೆತ ತಿಂದವರು – ಇವರೆ ಆ ಹೊಸ

ಅಸ್ಪೃಶ್ಯರು. ಬೆಂಗಳೂರಿನಲ್ಲಿ ಹೊಸ ಕನ್ನಡ ಸಿನಿಮಾ ಬಂದಾಗ, ಬೆಳಬೆಳಗ್ಗೆ ಟಿಕೇಟಿಗಾಗಿ ತಳ್ಳಾಡಿಕೊಂಡು ಕ್ಯೂನಿಲ್ಲುವ ಜನರನ್ನು, ಅವರ ಭಾಷೆ, ಬಟ್ಟೆಬರೆಗಳನ್ನು ಗಮನಿಸಿದರೆ ಗೊತ್ತಾಗುತ್ತದೆ. ಗೋಲಿಬಾರಿನಲ್ಲಿ ಸತ್ತವರು ಅಥವಾ ಅವತ್ತು ಬೀದಿಯಲ್ಲಿ ಕಲ್ಲು ಎಸೆಯುತ್ತ ಅಳುತ್ತ ಬೆಂಕಿ ಹಚ್ಚುತ್ತ ಇದ್ದವರು ಹೆಚ್ಚು ಕಡಿಮೆ ಇವರ ಅಣ್ಣತಮ್ಮಂದಿರು. ಇವರಲ್ಲಿ ಕಳೆದ ೧೦ ವರ್ಷಗಳಿಂದ ಬೆಂಗಳೂರು ಸುತ್ತಮುತ್ತಲಿನ ಜಮೀನನ್ನು ಕಂಪನಿಗಳಿಗೆ ಕಾರಿಡಾರುಗಳಿಗೆ ಕೊಟ್ಟು ಕಳೆದುಕೊಂಡಿರುವ ರೈತರ ಮಕ್ಕಳೂ ಸೇರಿಕೊಂಡಿದ್ದರೆ ಸೋಜಿಗವಿಲ್ಲ.

ಜೀವನ ಭದ್ರತೆಯಿಲ್ಲದ ನಿಕೃಷ್ಟ ಪರಿಸರದಲ್ಲಿ ದುಡಿಮೆ ಮಾಡುವ ಈ ಅರೆಶಿಕ್ಷಿತ ಸಮುದಾಯದ ಮನಃಸ್ಥಿತಿಗೆ ಎರಡು ಸಂಗತಿಗಳು ಬೇಕು. ಒಂದು ಪ್ರೀತಿಸಲು ತನ್ನನ್ನು ಅರ್ಪಿಸಿಕೊಳ್ಳಲು ಒಂದು ಆರಾಧನೆಯ ಸಂಕೇತ. ಇನ್ನೊಂದು ತನ್ನ ಕೋಪತಾಪ ತೀರಿಸಿಕೊಳ್ಳಲು ಒಂದು ಎದುರಾಳಿ. ಈ ಜನಸಮುದಾಯವು, ತನ್ನ ದುರವಸ್ಥೆಯಿಂದ ಪಾರಾಗಲು ಸೆಣಸಾಡುವಾಗ ಒಂದು ಅಸ್ಮಿತೆಗಾಗಿ ಹುಡುಕುತ್ತಿರುತ್ತದೆ. ಅದಕ್ಕೊಂದು ಕುರುಹು ಬೇಕು; ಅದು ಸಿನಿಮಾ ನಾಯಕ ಆಗಬಹುದು. ಕನ್ನಡ ಭಾಷೆ ಆಗಬಹುದು. ರಾಮ ಆಗಬಹುದು. ಅಯ್ಯಪ್ಪಸ್ವಾಮಿ ಆಗಬಹುದು. ಸಿನಿಮಾ ನಟರ ಅಭಿಮಾನಿಗಳು, ಕನ್ನಡ ಚಳುವಳಿಗಳಲ್ಲಿ ರುವವರು ಹಾಗೂ ಅಯ್ಯಪ್ಪ ಸ್ವಾಮಿಯಂತಹ ತಳಸ್ತರದ ಜನರು ಒಟ್ಟು ಸೇರುವ ದೈವಕ್ಕೆ ಮಾಲೆ ಹಾಕುವವರು ಎಂಬುದು ಗಮನಾರ್ಹ. ದೇವರು ಅಥವಾ ದೇವರಂತಹ ಯಾರಾದರೂ ಒಬ್ಬ ನಾಯಕ, ಅಥವಾ ತಮ್ಮ ಭಾಷೆ ಏನಾದರೂ ಒಂದು ಗುರುತು ಸಿಗಲೇಬೇಕು. ರಾಜ್ ಮಣ್ಣುಮಾಡಿದ ಎರಡನೆ ದಿನ ಟಿವಿಯೊಂದು ಚರ್ಚೆ ಏರ್ಪಡಿಸಿತ್ತು. ಆ ಸಭೆಯಲ್ಲಿ ಸ್ಪಷ್ಟವಾಗಿ ಬೆಂಗಳೂರಿನ ವರ್ಗವಿಭಜನೆ ನೋಡಬಹುದಿತ್ತು. ನಮ್ಮ ಐಟಿ ಕಂಪನಿಗಳು ಬೆಂಗಳೂರಿಗೆ ಸಂಪಾದಿಸಿ ಕೊಟ್ಟ ಜಾಗತಿಕ ಕೀರ್ತಿಯನ್ನು ಈ ಸಿನಿಮಾ ಅಭಿಮಾನಿಗಳು ಹಾಳು ಮಾಡಿದರು ಎಂದು ಸಿಡಿಮಿಡಿಗೊಂಡಿದ್ದವರ ಒಂದು ಗುಂಪಿತ್ತು. ಇಂಗ್ಲಿಷ್ ಕಲಿತು, ಪ್ರತಿಷ್ಠಿತ ಕಂಪನಿಗಳಲ್ಲಿ ನೌಕರಿ ಮಾಡುತ್ತ ಲಕ್ಷಗಟ್ಟಲೆ ಹಣದುಡಿಯುತ್ತ ಕಾರುಗಳಲ್ಲಿ ಓಡಾಡಿಕೊಂಡಿರುವ ವರ್ಗವಿದು. ಪಾಶ್ಚಾತ್ಯ ಸಂಗೀತ, ಇಂಗ್ಲಿಷ್ ಸಿನಿಮಾ, ಐಟಿ ಉದ್ಯಮಗಳ ಜತೆ ಗುರುತಿಸಿಕೊಂಡಿರುವ ಇದರ ಒಳಗೆ ಏನಾದರೂ ಮಾಡಿ ಅಮೇರಿಕಕ್ಕೆ ಹಾರಿಹೋಗುವ ಕನಸಿರುತ್ತದೆ. ಅದಕ್ಕೆ ಕನ್ನಡ, ಅದರ ಸಿನಿಮಾಗಳು, ಅದರ ನಟರ ಜತೆ ಗುರುತಿಸಿಕೊಳ್ಳುವುದು ಘನತೆ ಕೆಲಸವಲ್ಲ. ಅದಕ್ಕೆ ರಾಜ್ ಅಥವಾ ಉಳಿದ ಎಂಟು ಜನರ ಸಾವಿಗಿಂತ ಬೆಂಗಳೂರಿನ ಮಾನಹೋಯಿತು ಎಂಬುದು ದೊಡ್ಡ ನೋವಾಗಿತ್ತು. ಅದೇ ವೇದಿಕೆಯಲ್ಲಿ ರಾಜ್ ಅಭಿಮಾನಿಯೊಬ್ಬರು ಇದ್ದರು. ಅವರಿಗೆ ಪ್ರಶ್ನೆ ಕೇಳಿದಾಗ 'ರಾಜ್ ಈಸ್ ಮೈ ಗಾಡ್' ಎಂದಷ್ಟೆ ಹೇಳಿದರು. ಅವರಿಗೆ ಇಂಗ್ಲಿಷಿನಲ್ಲಿ ಮಾತಾಡುವುದು ಕಷ್ಟವಾಗಿತ್ತು. ಬರುತ್ತಿದ್ದ ಅಲ್ಪಸ್ವಲ್ಪ ಇಂಗ್ಲಿಷಿನಲ್ಲಿ ಇಷ್ಟು ಮಾತ್ರ ಹೇಳಲು ಸಾಧ್ಯವಾಯಿತು. ಬೆಂಗಳೂರಿನ ಒಂದು ದೊಡ್ಡ ಸಮುದಾಯ ಕನ್ನಡ, ಕನ್ನಡ ನಟರ ಜತೆ ಗುರುತಿಸಿಕೊಳ್ಳುವುದು, ಅದಕ್ಕೆ ಅಭಿಮಾನದ ಪ್ರಶ್ನೆಯಲ್ಲ. ರೂಪಾಂತರ ಪಡೆಯುತ್ತಿರುವ ಹೊಸ ಬೆಂಗಳೂರಿನಲ್ಲಿ ಒಂದು ಬಗೆಯಲ್ಲಿ ಅಂಚಿಗೆ ಸರಿಸಲಾದ ಅದಕ್ಕೆ ಈ ನಾಯಕಾರಾಧನೆ ಒಂದು ಅಸ್ಮಿತೆಯಾಗಿತ್ತು.

ಎಂತಲೇ ತನ್ನನ್ನು ಹೊರಗಿಟ್ಟು ಮುನ್ನಡೆಯುತ್ತಿರುವ ಈ ಅಭಿವೃದ್ಧಿಗೆ ಪ್ರತಿಕ್ರಿಯಿಸಲು, ತನ್ನ ಕೋಪ ತೀರಿಸಿಕೊಳ್ಳಲು ಈ ವರ್ಗ ಎದುರಾಳಿ ಹುಡುಕಿಕೊಳ್ಳುತ್ತದೆ. ವ್ಯವಸ್ಥೆಯ ಕಾವಲುಗಾರರಾದ ಪೊಲೀಸರು ತಕ್ಷಣ ಸಿಗುವ ಎದುರಾಳಿ. ಜತೆಗೆ ತಾವು ಹತ್ತಲಾಗದ ಕಾರುಗಳು, ತಾವು ವಾಸಿಸಲಾಗದ ಗಾಜಿನ ದೊಡ್ಡ ಕಟ್ಟಡಗಳು ಕಾಣುತ್ತವೆ. ಕೆಲವೊಮ್ಮೆ ತಮಗೆ ನಿತ್ಯ ಕೆಲಸ ಮಾಡುವ ಕಡೆ ಸ್ಪರ್ಧಿಗಳಾಗಿರುವ ತಮಿಳರೂ ಶತ್ರುಗಳಾಗಿ ಕಾಣುತ್ತಾರೆ. ಒಟ್ಟಿನಲ್ಲಿ ಅದರ ದಮನಿತ ಅಸಹನೆ ಯಾವುದಾದರೂ ರೂಪದಲ್ಲಿ ಹೊರಬರಬೇಕು. ಅದಕ್ಕಾಗಿ ಒಂದು ಭಾವೋದ್ರೇಕದ ಸನ್ನಿವೇಶ ಬೇಕು. ರಾಜ್ ಅಂತ್ಯಸಂಸ್ಕಾರ ಅಂತಹ ಅವಕಾಶವನ್ನು ಒದಗಿಸಿತು. ಒಬ್ಬ ಹೆಂಗಸು, ಅವಳ ಬಟ್ಟೆಬರೆ ನೋಡಿದರೆ ಆಕೆ ಕೂಲಿನಾಲಿ ಮಾಡುವವಳಿರಬಹುದು, ಒಂದು ದೊಡ್ಡ ಕಲ್ಲನ್ನು ಎತ್ತಿಕೊಂಡು, ಸದಾಶಿವನಗರದಲ್ಲಿ ನಿಂತಿದ್ದ ಕಾರಿನ ಗಾಜನ್ನು ಚಚ್ಚಿಹಾಕಿದಳು. ರಾಜ್ ಅಂತಿಮ ಯಾತ್ರೆಯಲ್ಲಿ ಕೆಲವರು ಟಿ.ವಿ. ಕ್ಯಾಮೆರಾ ಕಂಡರೆ ಕೈಯೆತ್ತಿ ಕೇಕೆ ಹಾಕಿ ಕುಣಿಯುತ್ತಿದ್ದರು. (ಅದಕ್ಕೆ ಸರಿಯಾಗಿ ಈಟಿವಿಯ ವರದಿಗಾರನು ಬಹುಶಃ ಬಾಯಿತಪ್ಪಿ ಅಭಿಮಾನಿಗಳು ಹರ್ಷೋದ್ಗಾರ ಮಾಡುತ್ತಿದ್ದಾರೆ ಎಂದನು.) ಶವದ ಮೆರವಣಿಗೆಯಲ್ಲಿ ಈ ಹರ್ಷ ಎಲ್ಲಿಂದ ಬಂದಿತು? ಈ ಜನ ನಟನ ಸಾವಿಗೆ ದುಃಖಿಸುತ್ತಿದ್ದರು. ಅದೇ ಹೊತ್ತಿಗೆ ತಮ್ಮನ್ನು ದಿನನಿತ್ಯ ಬಯ್ಯುವ ಹೊಡೆಯುವ ಅಪಮಾನಿಸುವವರ ಸಂಪತ್ತನ್ನು ನಾಶಮಾಡಿ ಭಗ್ನ ಸಂತೋಷ ಪ್ರಕಟಿಸುತ್ತಿದ್ದರು. ಇದೊಂದು ವಿಚಿತ್ರ ಸಾಮಾಜಿಕ ಮಾನಸಸ್ಥಿತಿ.

ಈ ಮಾನಸಸ್ಥಿತಿಯ ರೂಪಿಸಿಕೊಟ್ಟಿದ್ದು ಬಹುತೇಕವಾಗಿ ನಮ್ಮ ಜನಪ್ರಿಯ ಸಿನಿಮಾಗಳು. ಸಮಾಜದ ಕೆಳಸ್ತರದ ಜನಸಮುದಾಯಗಳು, ಬದುಕಿನ ಹೋರಾಟದಲ್ಲಿ ಪಡುವ ಅಪಮಾನ, ಎದುರಿಸುವ ಅನಿಶ್ಚಿತತೆ, ಕಾಣುವ ಕನಸು ಇವಕ್ಕೂ, ಈ ಸಿನಿಮಾಗಳಿಗೂ ಸಂಬಂಧವಿದೆ. ಜನಪ್ರಿಯ ಸಿನಿಮಾಗಳು ಈ ಸಮುದಾಯದ ಆಸೆ ಕೊರತೆ ಕೋಪ ಹತಾಶೆಗಳನ್ನು ಸ್ಪರ್ಶಿಸುತ್ತವೆ. 'ಸನಾದಿ ಅಪ್ಪಣ್ಣ' 'ಸಂಪತ್ತಿಗೆ ಸವಾಲು' ಸಿನಿಮಾಗಳ ಯಶಸ್ಸಿನ ಹಿಂದೆ ಈ ಸ್ಪರ್ಶಗುಣ ಕೆಲಸ ಮಾಡಿದೆ.

ನಾಯಕ ನಟರು ಕೇಡಿಗಳನ್ನು ತಮ್ಮ ವೈಯಕ್ತಿಕ ಸಾಹಸ ಶೌರ್ಯಗಳಿಂದ ಹೊಡೆದುಹಾಕುವ ಮೂಲಕ ಜನರ ಅಸ್ಪಷ್ಟವಾದ ಕೋಪಕ್ಕೆ ಅಭಿವ್ಯಕ್ತಿ ಕೊಟ್ಟು ಅವರ ಮನಸ್ಸಿನಲ್ಲಿ ದೇವರಾಗಿ ನೆಲೆಸಿಬಿಡುತ್ತಾರೆ. ಅನೇಕ ಸಲ ನಮ್ಮ ನಟರು ಜನಪ್ರಿಯರಾಗಿರುವುದು ಅವರ ನಟನಾ ಪ್ರತಿಭೆಗಿಂತ ಹೆಚ್ಚಾಗಿ, ಹೀಗೆ ಭಾವನೆಗಳನ್ನು ಮುಟ್ಟುವ ಕೆರಳಿಸುವ ಮತ್ತು ತಣಿಸುವ ಅವರ ಸಿನಿಮಾಗಳ ಕಥೆಗಳ ಮೂಲಕ. ರಕಸಿಕ್ತವಾದ ದೊಡ್ಡ ಮಚ್ಚುಗಳನ್ನು ಹಿಡಿದುಕೊಂಡಿರುವ ನಾಯಕರ ಸಿನಿಮಾಗಳು ಯಾಕೆ ಅಷ್ಟೊಂದು ತಯಾರಾಗುತ್ತಿವೆ ? ನನಗನಿಸುತ್ತದೆ : ಇದು ಅನೇಕ ಸಲ ಕರ್ನಾಟಕದ ಹಳ್ಳಿಗಳನ್ನಲ್ಲ, ಬೆಂಗಳೂರಿನ ಪ್ರಕ್ಷುಬ್ಧ ಬದುಕನ್ನು ಪ್ರತಿನಿಧಿಸುತ್ತದೆ ಎಂದು. ಸಿನಿಮಾಗಳು ಸಮುದಾಯಗಳನ್ನು ತಲುಪುವ ತಮ್ಮ ಅಪಾರ ಮಾಧ್ಯಮ ಶಕ್ತಿಯನ್ನು ಬಳಸಿಕೊಂಡು, ಅಸಹಾಯಕ ಜನರ ಜತೆ ಭಾವನಾತ್ಮಕ ಸಂಬಂಧ ಬೆಳೆಸಿಕೊಂಡಿವೆ, ಮಾತ್ರವಲ್ಲದೆ, ಜನರ ಅಸಹಾಯಕತೆಯನ್ನೆ ಬಂಡವಾಳ ಮಾಡಿಕೊಂಡು ಸಹ ಬೆಳೆದಿವೆ. ಅಂದು ಗಲಭೆ ಮಾಡುತ್ತ ಗೋಲಿಬಾರಿನಲ್ಲಿ ಸಾಯುತ್ತಿದ್ದ ಜನರೂ ಈ ನಟರೂ ಪರಸ್ಪರರ ಸೃಷ್ಟಿಗಳು. ಕಾರ್ಲ್ ಮಾರ್ಕ್ಸನು ಧರ್ಮವನ್ನು ಕುರಿತು ಮಾಡಿದ ಪ್ರಸಿದ್ಧ ಹೇಳಿಕೆಯನ್ನು ಕೊಂಚ ಬದಲು ಮಾಡಿ ಹೇಳುವುದಾದರೆ, ಸಿನಿಮಾ ನಾಯಕರು ರೂಪಿಸಿರುವ ಈ ಅಭಿಮಾನಿ ಸಂಸ್ಕೃತಿಯು ಒಂದು ಬಗೆಯ ಅಮಲೂ ಆಗಿದೆ; ಜತೆಗೆ ಹೃದಯಹೀನ ಮಹಾನಗರಗಳಲ್ಲಿ ಹೃದಯವಂತಿಕೆ ಕೊಡುವ ಕೆಲಸವನ್ನೂ ಮಾಡುತ್ತಿದೆ.

ನಮ್ಮ ಜನಪ್ರಿಯ ಸಿನಿಮಾಗಳು ಜನರಲ್ಲಿ ಬೆಳೆಸಿರುವ ನಾಯಕಾರಾಧನೆಯು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಕೆಲಸ ಮಾಡುತ್ತಿರುವ ಬಗ್ಗೆ ಇನ್ನೂ ತಿಳಿಯಬೇಕಾದ್ದು ಇದೆ. ಆಧುನಿಕ ಸಿನಿಮಾ ಉದ್ಯಮವು ಬೇರೆಬೇರೆ ಜಾತಿಧರ್ಮಗಳಿಂದ ಬಂದ ನಟರು, ಎಲ್ಲ ಜಾತಿಧರ್ಮಗಳ ಮನ್ನಣೆ ಪಡೆಯಲು ಹೊಸ ಹೆಸರನ್ನು ಪಡೆಯುವ ಪದ್ಧತಿಯನ್ನು ಆರಂಭಿಸಿತು. ಯೂಸೂಫ್‌ಖಾನ್ ಮುಂಬೈಯ ಹಿಂದಿ ಸಿನಿಮಾ ಲೋಕದಲ್ಲಿ ಪ್ರವೇಶಪಡೆಯಲು ದಿಲೀಪಕುಮಾರನಾಗಿ ಬದಲಾಗಬೇಕಾಯಿತು. ಹಿಂದುಳಿದ ಜಾತಿಯಲ್ಲಿ ಹುಟ್ಟಿದ ಮುತ್ತುರಾಜ್ ರಾಜಕುಮಾರ್ ಆಗಿ ಬದಲಾಗಬೇಕಾಯಿತು. ಈ ನಟರು ತಮ್ಮ ಜಾತಿ-ಧರ್ಮಗಳ ಹಿನ್ನೆಲೆ ಮರೆಗೆ ಸರಿಯುವಂತೆ ಕಲಾವಿದರಾಗಿ ಬೆಳೆದು ಜನರ ಪ್ರೀತಿ ಪಡೆದರು. ಇದು ಕಲಾಜಗತ್ತಿನ ವಿಚಿತ್ರ ಜಾತ್ಯತೀತತೆ. ರಾಜವಂಶದ ಹಿನ್ನೆಲೆಯಿಲ್ಲದ ರಾಜಕುಮಾರ್, ಲಕ್ಷಾಂತರ ಜನರ ಮನಸ್ಸಿನ ಮೇಲೆ ರಾಜನಂತೆ ಆಳ್ವಿಕೆ ನಡೆಸಿದರು. ಇದು ಸಿನಿಮಾ ಮಾಧ್ಯಮದ ಮಾಂತ್ರಿಕ ಪವಾಡ. ರಾಜ್ ತೀರಿಕೊಳ್ಳುವ ಆಸುಪಾಸಿನಲ್ಲಿ, ಮೈಸೂರು ರಾಜರ ಕುಮಾರರು ಕುಮಾರಿಯರು, ತಮಗೆ ತಮ್ಮ ಅಪ್ಪನ ಆಸ್ತಿಯನ್ನು ಕೊಡಿಸಬೇಕೆಂದು ಬೀದಿಗೆ ಬಂದಿದ್ದರು. ಜನ ಮರುಗಲಿಲ್ಲ. ಪಕ್ಕದ ನೇಪಾಳದಲ್ಲಿ ಆಳುವ ರಾಜನು ಕೆಳಗಿಳಿಯಬೇಕೆಂದು ಇಡೀ ದೇಶದ ಜನ ಬೀದಿಗೆ ಬಂದು ಹೋರಾಟ ಮಾಡುತ್ತಿದ್ದರು. ರಾಜನ ಅವಸ್ಥೆಗೆ ಯಾರಲ್ಲೂ ಸಹಾನುಭೂತಿ ಇರಲಿಲ್ಲ. ಇದೇ ಹೊತ್ತಲ್ಲಿ ಕರ್ನಾಟಕದಲ್ಲಿ ರಾಜವಂಶದ ಹಿನ್ನೆಲೆಯಿಲ್ಲದ ರಾಜಕುಮಾರ್ ತೀರಿಕೊಂಡಾಗ ಜನ ತಮ್ಮ ಬಂಧುವೆಂಬಂತೆ ಪರಿಭಾವಿಸಿದ್ದರು.

ಆದರೆ, ರಾಜಪ್ರಭುತ್ವವು ಅಳಿದುಹೋಗುತ್ತಿದ್ದ ಹೊತ್ತಲ್ಲಿ, ಕನ್ನಡ ನಾಟಕ ಹಾಗೂ ಸಿನಿಮಾಗಳು ನಮ್ಮ ರಾಜಮಹಾರಾಜರ ಮೇಲೆ, ದೇವಾನುದೇವತೆಗಳ ಮೇಲೆ ನಿರಂತರವಾಗಿ ಚಿತ್ರ ನಿರ್ಮಾಣ ಮಾಡಿದವು. ಇವು ಊಳಿಗಮಾನ್ಯ ನಿಷ್ಠೆಯನ್ನು ಹೇಗೆ ಜೀವಂತಗೊಳಿಸಿದವೊ ಗೊತ್ತಿಲ್ಲ. ಅವುಗಳ ಆಶಯ ಮಾತ್ರ ಹಾಗೇ ಇದೆ. 'ಹುಲಿಯ ಹಾಲಿನ ಮೇವು' ಸಿನಿಮಾ ಗಮನಿಸಿ. ಅಲ್ಲಿ ದನಕಾಯುವ ಒಬ್ಬ ತರುಣ ತನ್ನ ಶೌರ್ಯದಿಂದ ರಾಜಮನ್ನಣೆ ಗಳಿಸುವಷ್ಟು ಎತ್ತರಕ್ಕೆ ಏರುತ್ತಾನೆ. ಜತೆಯಲ್ಲಿ ತನ್ನ ರಾಜನಿಷ್ಠೆಗಾಗಿ ಪ್ರಾಣವನ್ನೂ ಕೊಡುತ್ತಾನೆ. ಇದು ಹಿಂದೆ ರಾಜಪ್ರಭುತ್ವಗಳು ರಾಜನಿಷ್ಠೆಯನ್ನು ಒಂದು ಮೌಲ್ಯವಾಗಿ ನಿರ್ಮಿಸಿದ ಹೊತ್ತಲ್ಲಿ ಹುಟ್ಟಿಕೊಂಡ ವೇಳೆವಾಳಿ ಹಾಗೂ ಕೀಳ್ಗುಂಟೆ ಆಚರಣೆಗಳನ್ನು ನೆನಪಿಸುತ್ತದೆ. ವೇಳೆವಾಳಿಗಳು ತಮ್ಮ ಜೀವಕೊಟ್ಟು ರಾಜನ ಪ್ರಾಣ ರಕ್ಷಿಸುವವರು. ಕೀಳ್ಗುಂಟೆ ಯಾಗುವುದು ಎಂದರೆ ರಾಜ ಸತ್ತರೆ ತಾವು ದೇಹತ್ಯಾಗ ಮಾಡಿಕೊಳ್ಳುವವರು. ಈ ಇವರು ಕಡ್ಡಾಯವಾಗಿ ನಮ್ಮ ಸಮಾಜದ ಕೆಳಜಾತಿಯ ತಳಸ್ತರದ ಜನರೇ ಆಗಿರುತ್ತಿದ್ದರು. ಈಗಲೂ ತಮ್ಮ ರಾಜಕೀಯ ನಾಯಕರು ಸತ್ತರೆ ಇರಲಿ, ಚುನಾವಣೆಯಲ್ಲಿ ಸೋತರೂ ಆತ್ಮಾಹುತಿ ಮಾಡಿಕೊಳ್ಳುವ ಸಂಸ್ಕೃತಿಯು ನಮ್ಮ ಪ್ರಜಾಪ್ರಭುತ್ವದಲ್ಲಿದೆ ಎಂಬುದನ್ನು ಮರೆಯಬಾರದು.

ನಾಯಕತ್ವ ತನಗೆ ತಾನೆ ಕೇಡಲ್ಲ, ನಾಯಕಾರಾಧನೆ ಕೇಡು. ಪ್ರಶ್ನೆಯೆಂದರೆ ನಾಯಕ ಹಾಗೂ ಅನುಯಾಯಿಗಳ ಸಂಬಂಧ ಯಾವ ಸ್ವರೂಪದಲ್ಲಿದೆ ಎನ್ನುವುದು. ನಾಯಕನು ಜನರಿಗಾಗಿ ಮಡಿಯುವವನೋ ಅಥವಾ ಜನರೇ ಅವನಿಗಾಗಿ ಮಡಿಯುತ್ತಾರೆಯೊ ? ಜನರಿಗಾಗಿ ಸಾಯುವ ಕ್ರಾಂತಿಕಾರ ನಾಯಕರು ಚರಿತ್ರೆಯಲ್ಲಿ ಎಷ್ಟೋ ಜನರು ಆಗಿಹೋಗಿದ್ದಾರೆ. ಎಂಜಿಆರ್, ಜಯಲಲಿತ ಇವರಿಗಾಗಿ ಜನ ಸಾಯುವುದು ವಿಮರ್ಶೆಯಿಲ್ಲದ ಅಭಿಮಾನದ ಫಲ. ನಿನ್ನೆ ಮೊನ್ನೆಯ ಸುದ್ದಿಯೆಂದರೆ ಕೋಟ್ಯಾಧಿಪತಿ ಗಯಾದ ಅಮಿತಾಭನಿಗೆ ಅಮೆರಿಕೆಯಲ್ಲಿ ಕೊಂಡ ಕನ್ನಡಕಕ್ಕೆ ತೆರಿಗೆ ಪಾವತಿಸಿಲ್ಲ ಎಂದು ಇಲಾಖೆ ನೋಟಿಸು ಕೊಟ್ಟರೆ, ನಮ್ಮ ನಾಯಕನಿಗೆ ಅಪಮಾನವಾಗಿದೆ ಎಂದು ಅಭಿಮಾನಿಗಳು ಬೀದಿಗೆ ಇಳಿದಿದ್ದಾರೆ. ಕನ್ನಡ ಸಿನಿಮಾ ಜಗತ್ತು ಕೂಡ ಇಂತಹ ವಿಮರ್ಶೆ ಯಿಲ್ಲದ ನಾಯಕ ಆರಾಧನಾ ಸಂಸ್ಕೃತಿಯನ್ನು ಹುಟ್ಟುಹಾಕಿದೆ. ಅದರಲ್ಲೂ ರಾಜನ ಅಥವಾ ದೇವರ ಪಾತ್ರ ಮಾಡುವ ನಟರಿಗೆ ಒಂದು ಬಗೆಯ ದೈವಿಕ ಇಮೇಜು ಬಂದು ಬಿಡುತ್ತದೆ. ಎನ್. ಟಿ. ರಾಮರಾವ್ ಅವರು ತಮ್ಮ ಕೃಷ್ಣ ಪಾತ್ರಗಳ ಜನಪ್ರಿಯತೆಯಿಂದ ಅರ್ಧ ಶಕ್ತಿ ಪಡೆದು ರಾಜಕೀಯಕ್ಕೆ ಬಂದರು. ಈಗಲೂ ಪೌರಾಣಿಕ ಪಾತ್ರಗಳನ್ನು ಮಾಡಿದ ನಟರು ರಾಜಕೀಯಕ್ಕೆ ಬರುವುದು ನಡೆಯುತ್ತಲೇ ಇದೆ.

ನಾಯಕಾರಾಧಕ ಸಂಸ್ಕೃತಿಯು ಸಿನಿಮಾ ಜಗತ್ತಿನಲ್ಲಿ ಹುಟ್ಟುಹಾಕುವ ಅಭಿಮಾನಿ ವರ್ಗವು, ನಾಯಕರಿಗಾಗಿ ನಾವು ಎಂಬ ಮನೋಭಾವದಲ್ಲೆ ಇರುತ್ತದೆ. ನಮ್ಮ ನಾಯಕ ಪ್ರಧಾನ ಸಿನಿಮಾಗಳು ಹುಟ್ಟುಹಾಕಿರುವ ಸಹಾಯಕ ಅಥವಾ ಹಾಸ್ಯನಟರ ಪಾತ್ರಗಳನ್ನು ಗಮನಿಸಬೇಕು. ಪ್ರತಿ ರಾಜಕುಮಾರನಿಗೆ ಒಬ್ಬ ವಿದೂಷಕ ಜತೆಯಲ್ಲಿ ಇರುವುದು ನಮ್ಮ ಪ್ರಾಚೀನ ಕಾವ್ಯ ನಾಟಕಗಳಲ್ಲೂ ಇದೆ. ಕನ್ನಡದಲ್ಲಿ ನರಸಿಂಹರಾಜುವಿಗೆ ಸಿನಿಮಾರಂಗ ಅಂತಹ ವಿದೂಷಕ ಪಾತ್ರ ಕೊಟ್ಟಿತು. ವಿದೂಷಕ ನೋಡಲು ಸುಂದರ ಇರಬಾರದು. ವಿಚಿತ್ರ ಬಟ್ಟೆ ಹಾಕಿಕೊಂಡು ಹಾಸ್ಯಾಸ್ಪದರಾಗಬೇಕು. ರಾಜಕುಮಾರ್ ಅವರು ರಾಜಕುಮಾರನ ಪಾತ್ರದಲ್ಲಿಯೂ ನರಸಿಂಹರಾಜು ಜೋಕರ್ ಪಾತ್ರದಲ್ಲಿಯೂ ಇರುವ ಸಿನಿಮಾ ಒಂದಿದೆ. ಅದರಲ್ಲಿ ರಾಜಕುಮಾರ ಉದ್ಯಾನದಲ್ಲಿ ಹಾಡುತ್ತಿರುವ ರಾಜಕುಮಾರಿಯನ್ನು ನೋಡಬೇಕಿದೆ. ಗೋಡೆ ಎತ್ತರವಾಗಿದ್ದು ರಾಜಕುಮಾರ ವಿದೂಷಕನ ಹೆಗಲನ್ನು ಹತ್ತಿನಿಂತು ನಾಯಕಿಯನ್ನು ನೋಡುತ್ತ ಆನಂದಿಸುತ್ತ ನಿಲ್ಲುತ್ತಾನೆ. ಕೆಳಗೆ ವಿದೂಷಕ ಭಾರವನ್ನು ಹೊತ್ತು ಪಡಬಾರದ ಕಷ್ಟಪಡುತ್ತ ಒದ್ದಾಡುತ್ತಾನೆ. ಈ ಘಟನೆ ಸಾಂಕೇತಿಕವಾಗಿದೆ.

ತಾತ್ವಿಕವಾಗಿ ಅಪ್ರಜಾಪ್ರಭುತ್ವೀಯ ಆದ ನಾಯಕ ಕೇಂದ್ರಿತ ಸಿನಿಮಾ ಸಂಸ್ಕೃತಿಯು ಅಭಿಮಾನಿ ಸಂಸ್ಕೃತಿಯನ್ನು ಉದ್ದೇಶಪೂರ್ವಕವಾಗಿ ಬೆಳೆಸುತ್ತದೆ. ಸಿನಿಮಾ ಒಂದು ಉದ್ಯಮವಾಗಿರುವ ಕಾರಣ ಅಲ್ಲಿ ಈ ಭಾವಾವೇಶಗಳು ಅಭಿಮಾನಗಳು ಮಾರುಕಟ್ಟೆ ವಿಸ್ತರಣೆಯ ಆಯಾಮವಾಗಿವೆ. ರಾಜ್ ಅಂತಿಮಯಾತ್ರೆಯಲ್ಲಿ ಜನಗಲಭೆ ಕಂಡ ಕೆಲವರು, ನಿಜವಾದ ಅಭಿಮಾನಿಗಳು ಹಾಗೆ ಮಾಡುವುದಿಲ್ಲ ಎನ್ನುತ್ತಿದ್ದರು. ತೆರೆಮೇಲೆ ಸಿಗರೇಟು ಸೇದದ ಕುಡಿಯದ, ನಿಜಜೀವನದಲ್ಲಿ ಯಾರ ಮನಸ್ಸೂ ನೋಯುವಂತೆ ಮಾತನಾಡದ ರಾಜ್ ಅವರ ಅಭಿಮಾನಿಗಳು ಹೀಗೆ ಇರಲು ಸಾಧ್ಯವೆ ಎಂದು ಸೋಜಿಗಪಡುತ್ತಿದ್ದರು. ಇದು ನಿಜ. ಆದರೆ ಯಾವುದೇ ಅಭಿಮಾನದ ಮೂಲಭೂತ ಲಕ್ಷಣವೇ ಉದ್ರೇಕ, ವೈಭವೀಕರಣ, ನಿಷ್ಠೆ. ಸಂವಾದ, ಭಿನ್ನಾಭಿಪ್ರಾಯ ಸಾಧ್ಯವಿಲ್ಲದ ಮನಃಸ್ಥಿತಿ. ಇಷ್ಟಪಡದ್ದರ ಬಗ್ಗೆ ತೀವ್ರ ಅಸಹನೆ. ಇದಕ್ಕೆಲ್ಲ ಒಬ್ಬರ ನಟರು ಕಾರಣವಲ್ಲ. ಇಡೀ ಸಿನಿಮಾ ಸಂಸ್ಕೃತಿಯೂ ಕಾರಣ. ನಮ್ಮ ಮಹಾನಗರಗಳ ರೂಪಾಂತರಗಳು, ಅದರ ಆರ್ಥಿಕ ರಾಜಕೀಯ ಚಲನೆಗಳು ಹುಟ್ಟುಹಾಕುತ್ತಿರುವ ಅಭದ್ರ ಸಮುದಾಯಗಳು, ಇವೆಲ್ಲವೂ ಕಾರಣ. ಸತ್ತ ಎಂಟು ಜನ ಅಮಾಯಕರ ಸಾವಿಗೆ ಕೇವಲ ಪೊಲೀಸರ ಗುಂಡು ಕಾರಣವಲ್ಲ. ಕರ್ಣನನ್ನು ಕೊಂದಿದ್ದು ಅರ್ಜುನನ ಬಾಣ ಹೌದು. ಆದರೆ ಮರೆಯಲ್ಲಿ ನಿಂತು ಪರೋಕ್ಷವಾಗಿ ಸಾವಿಗೆ ಕಾರಣವಾದವರು – ದುರ್ಯೋಧನ, ಕುಂತಿ, ದ್ರೋಣ, ಇಂದ್ರ, ಧರ್ಮರಾಯ, ಪರಶುರಾಮ, ಎಷ್ಟೊಂದು ಜನ ? ಕಡೆಗೆ ಸ್ವತಃ ಈ ವ್ಯವಸ್ಥೆಯ ಭಾಗವಾಗಿದ್ದ ಕರ್ಣ ಕೂಡ.




ಡಾ|| ರಹಮತ್ ತರೀಕೆರೆ
ಕನ್ನಡ ವಿ.ವಿ., ಹಂಪಿ, ವಿದ್ಯಾರಣ್ಯ - ೫೮೩ ೨೭೬


# ಮಧುರ ನೆನಪುಗಳು

ಧನಧಾನ್ಯ ಚಿನ್ನ ಸಕಲ ಸಂಪತ್ತು ಕೊಟ್ಟರು
ಈ ಮಹಲುಗಳ ಮೋಜು ದೌಲತ್ತು ಬಿಟ್ಟರು
ಸಿಗಬಹುದೇಕ ಮತ್ತೆ ಆ ಬಾಲ್ಯದ ದಿನಗಳು
ಆ ಮುದ್ದು ಮುಖಗಳು ಆ ಮುಗ್ಧ ಜನಗಳು ||

ಅಮ್ಮನೆದೆ ಅಪ್ಪುಗೆ ಅಮೃತದ ಪಾನ
ತೊಟ್ಟಿಲಲಿ ಲಾಲಿಯ ಲಲನೆಯರ ಗಾನ
ಅಜ್ಜಿಯ ಕಥೆಗಳಲಿ ರಂಜನೆಯ ಯಾನ
ಚಿಂದಿಗಳ ಕೌದಿಯಲಿ ಬೆಚ್ಚನೆಯ ಕನಸುಗಳು
ಅಕ್ಕರೆಯ ಅಪ್ಪನ ಆಟಿಕೆ ತಿನಿಸುಗಳು
ಸಿಗಬಹುದೇಕ ಮತ್ತೆ ಆ ಅಮ್ಮ ಅಪ್ಪ ಅಜ್ಜಿಗಳು
ಮಮತೆಯ ಕೈತುತ್ತು ಆ ಸಿಹಿ ಮುತ್ತುಗಳು ||

ಬಿಸಿಲಲ್ಲಿ ಹಗಲೆಲ್ಲ ನದಿಯಲ್ಲಿ ಈಜಾಡಿ
ಮರಳಲ್ಲಿ ಮನೆಕಟ್ಟಿ ಕೆಡಿಸಿ ಕಿತ್ತಾಡಿ
ಮರಮರದ ಹರೆಗಳಲಿ ಜೋಕಾಲಿ ಜೀಕಾಡಿ
ಏರುವ ಹಾರುವ ಮರಕೋತಿ ಆಟಗಳು
ಶಾಲೆಯಲಿ ಶಿಸ್ತಿನ ಗುರುಗಳ ಪಾಠಗಳು
ಸಿಗಬಹುದೇಕ ಮತ್ತೆ ಆ ಹುಡುಗಾಟದ ದಿನಗಳು
ಆ ಶಿಕ್ಷೆ ಶಿಕ್ಷಣ ಅಮರಕೋಶ ಗುರುಗಳು ||

ಚಿನ್ನಿದಾಂಡು ಬುಗುರಿ ಲಗೋರಿ ಏಣಿಗಳು
ಹೊಸನೋಟ ತುಂಟಾಟ ಜಾರಿಬಿದ್ದ ಓಣಿಗಳು
ಮುಂಗಾರ ಮಳೆಯಲ್ಲಿ ಮಕ್ಕಳ ದೋಣಿಗಳು
ಮುಗಿಲಿಂದ ಸುರಿಯುವ ಆ ನೀರ ಕಲ್ಲುಗಳು
ಬೆಟ್ಟ ಬಯಲು ಹೊಲಗದ್ದೆ ಹಚ್ಚನೆಯ ಹುಲ್ಲುಗಳು
ಸಿಗಬಹುದೇಕ ಮತ್ತೆ ಆ ಹುಡುಕಾಟದ ದಿನಗಳು
ಆ ತುಂಟ ಗೆಳೆಯರು ಆ ನೆಂಟಿನ ಜನಗಳು ||




ಅಬ್ಬಾಸ್ ಅಬ್ಬಲಗೆರೆ
೭ನೇ ತಿರುವು, ಬಾಪೂಜಿನಗರ, ಶಿವಮೊಗ್ಗ - ೫೭೭ ೨೦೧



# ಹಾರುಹಕ್ಕಿ

■ ಎಸ್. ಆರ್. ಗುರುನಾಥ್

"ಬೇರೆ ಧರ್ಮಕ್ಕೆ ಕನ್ವರ್ಟ್ ಆಗ್ತೀನಿ ಕಣೋ ಗುರು" ಎಂಬ ನಾಗರಾಜನ ಗಂಭೀರವಾದ ಮಾತುಗಳನ್ನು ಕೇಳಿ ನಿಜಕ್ಕೂ ನನಗೆ ಗಾಬರಿಯಾಯಿತು; ಸಿಟ್ಟೂ ಬಂದಿತು. "ನೀನು ತುಂಬಾ ಅವಿವೇಕಿ ಕಣೋ. ಬೇರೆ ಧರ್ಮಕ್ಕೆ ಕನ್ವರ್ಟ್ ಆಗ್ಬಿಟ್ರೆ ನಿನ್ನ ಹೆತ್ತವರಿಗೂ ಪೂರ್ವಿಕರಿಗೂ ಅವಮಾನವಾದಂತಾಗೋದಿಲ್ವೇನೋ... ನಿನಗೆ ಬುದ್ಧಿ ಇದೆಯಾ ?!" ಎಂದು ಮುಂತಾಗಿ ಅಸಮಾಧಾನ ವ್ಯಕ್ತಪಡಿಸಿದೆ. "ನನ್ನನ್ನ ಅವಿವೇಕಿ ಹುಂಬ ಅಂದ್ಕೋಬೇಡ. ನಾನು ತುಂಬಾ ಸೀರಿಯಸ್ಸಾಗಿ ಯೋಚ್ನೆ ಮಾಡಿ ನಿರ್ಧಾರಕ್ಕೆ ಬಂದಿದೀನಿ... ಸಾವಿರಾರು ವರ್ಷಗಳಿಂದ ನಮ್ಮನ್ನ ಮನುಷ್ಯರೆಂದೇ ಭಾವಿಸದ ಜನ ಯಾವತ್ತಿಗೂ ಆತ್ಮವಿಮರ್ಶೆ ಮಾಡ್ಕೊಳ್ಳೋದಿಲ್ಲ ಕಣೋ... ನಾವೇ ಬದಲಾಗ್ಬೇಕು. ಅಸ್ಪೃಶ್ಯತೆಯಿಂದ ಪಾರಾಗ್ಬೇಕು ಅಂದ್ರೆ ನನ್ನ ನಿರ್ಧಾರವೇ ಸರಿ... ಬೇರೆ ಮಾರ್ಗವೇ ಇಲ್ಲ..." ಎನ್ನುತ್ತಾ ಒಳ ಒಳಗೇ ಕುದಿಯಲಾರಂಭಿಸಿದ ಅವನು ವಿದ್ಯಾರ್ಥಿದೆಸೆಯಿಂದಲೂ ಸಾಮಾಜಿಕ ಕಳಕಳಿ ಉಳ್ಳವನು. ಯಾವುದೇ ಹಲ್ಲೆ, ದೌರ್ಜನ್ಯ ಮೊದಲಾದ ಶೋಷಣೆಯ ವಿರುದ್ಧ ದಲಿತ ಸಂಘಟನೆಗಳೊಂದಿಗೆ ಕೈ ಜೋಡಿಸುವವನು; ನ್ಯಾಯಕ್ಕಾಗಿ ಹೋರಾಡುವವನು. ಎಂ. ಎ. ಪದವೀಧರನಾದರೂ ನಿರುದ್ಯೋಗದ ನಿಮಿತ್ತ ಹಳ್ಳಿಯಲ್ಲಿ ನಿಂತಿದ್ದಾನೆ. ಆದರೂ ಅವನ ಅಕ್ಯಾಡಮಿಕ್ ಚಟುವಟಿಕೆಗಳಿಗೇನೂ ಕೊರತೆಯಿಲ್ಲ. ಆ ವಿಚಾರಪರ ನಿಲುವುಗಳ ಬಗ್ಗೆ ನನಗೆ ಗೌರವವಿದೆ. ನಂಬಿಕೆಯೂ ಇದೆ. ಆದರೆ ಅವನ ಮತಾಂತರದ ನಿರ್ಧಾರದ ಬಗ್ಗೆ ಮಾತ್ರ ನನಗೆ ಅಸಮಾಧಾನ. ಇಂಥ ನಿರ್ಧಾರಕ್ಕೆ ಬರಬಹುದೂಂತ ನಾನು ಯಾವತ್ತೂ ಅಂದುಕೊಂಡಿರಲಿಲ್ಲ. ಯಾವ ರೀತಿ ತಿಳಿಯ ಹೇಳಬೇಕೋ ತಿಳಿಯಲಿಲ್ಲ.

ಕಡೆಗೆ ನಿರ್ದಾಕ್ಷಿಣ್ಯವಾಗಿ "ನೀನು ಯಾವುದೋ ಆಮಿಷ ಕ್ಕೊಳಗಾಗಿರಬಹುದು...!" ಎಂದುಬಿಟ್ಟೆ. ಅವನು ಕೆಟ್ಟ ದೃಷ್ಟಿಯಲ್ಲಿ ನನ್ನನ್ನು ನೋಡಲಾರಂಭಿಸಿದ! ನನ್ನ ಸ್ಥಾನದಲ್ಲಿ ಬೇರೆ ಯಾರೇ ಇದ್ದಿದ್ದರೂ ಕೆನ್ನೆಗೆ ಬಾರಿಸಿಬಿಡುತ್ತಿದ್ದನೇನೋ! ನಾನು ತಣ್ಣಗಾಗಿ "ಆಮಿಷ ಅನ್ನೋದನ್ನ ಕೇಳಿದೀನಿ... ಬಡವರೂ ಅನಕ್ಷರಸ್ಥರೂ ಅಮಾಯಕರೂ ಆದಂಥ ನಮ್ಮ ಜಾತಿಯ ಜನರ್ನ ಬುಟ್ಟಿಗೆ ಹಾಕ್ಕೋಳೋದಕ್ಕೆ ಅದನ್ನ ಒಡ್ತಾರಂತಲ್ಲ... ಅದನ್ನ ಹೇಳ್ದೆ..." ಎಂದು ತಲೆ ತಗ್ಗಿಸಿದೆ. ಅವನು ಸಿಟ್ಟಿನಲ್ಲಿ "ಆಮಿಷ! ಆಮಿಷ! ಅನ್ನೋದ್ನ ನಾನೂ ಕೇಳಿದೀನಿ. ಡಿಕ್ಷನರಿಯ ಪ್ರಕಾರ ಅದಕ್ಕೆ 'ಮಾಂಸ' 'ಪ್ರಲೋಭನೆ' ಎಂದರ್ಥ. ಇವುಗಳಿಂದ ಯಾರು ? ಯಾರನ್ನ ? ಯಾವಾಗ ? ಎಲ್ಲಿ? ಸೆಳೆದಿದ್ದಾರೋ ತಿಳಿಯದು. ಅದರ ಬಗ್ಗೆ ನನಗೂ ಕುತೂಹಲ ಇದೆ. ಏನೂ ಕಾಣದ ನೀನೂ..." ನೋವು ಬೇಸರಗಳಿಂದ ತಲೆ ಕೊಡಹಿದ.

"ಹಾಗಾದ್ರೆ, ಆಮಿಷ ಅನ್ನೋದು ಕೇವಲ ಗಾಳಿ ಸುದ್ದಿ ಅಂತೀಯಾ ?" ನನ್ನ ಪ್ರಶ್ನೆಗೆ ಸೋಲರಿಯದ ಸರದಾರನಂತೆ ಮುಂದುವರಿಸಿದ : "ಶೋಷಿತ ಜಾತಿಯಲ್ಲಿ ಹುಟ್ಟಿ, ಅಮಾಯಕತೆಯೇ ಕೆನೆಗಟ್ಟಿದಂಥ ಹಳ್ಳಿಗಾಡಿನಲ್ಲಿ ಬೆಳೆದು; ಅಸ್ಪೃಶ್ಯತೆಯನ್ನು ಹಸಿಹಸಿಯಾಗಿ ಬಿಸಿಬಿಸಿಯಾಗಿ ಅನುಭವಿಸಿದವನು ನಾನು. ನೀನೋ ದೊಡ್ಡ ಪೊಲೀಸ್ ಅಧಿಕಾರಿಯ ಮಗ. ನನ್ನಂಥವನ ಸ್ಥಿತಿ-ಗತಿ ನಿನಗೆ ಹೇಗೆ ಅರ್ಥವಾಗ್ಬೇಕು ?!"

ನನ್ನನ್ನು ನಾನು ಮುಟ್ಟಿನೋಡಿಕೊಳ್ಳುವಂತಾಯಿತು. ನನಗೆ ಸಂಬಂಧಿಸಿದ ಕೆಲವು ದಾಖಲಾತಿಗಳಲ್ಲಿ 'ಪರಿಶಿಷ್ಟ-ಹಿಂದೂ' ಎಂದೇ ದಾಖಲಾಗಿದೆ. ಇಂಥ ದಾಖಲೆ ಪತ್ರಗಳನ್ನು ನನ್ನ ತಂದೆ ಸಂರಕ್ಷಿಸಿಕೊಂಡಿದ್ದಾರೆ. ಆದರೆ ನಮ್ಮನ್ನು ಯಾರೂ 'ಕೀಳು ಜಾತಿಯವರು' ಅಂದದ್ದಿಲ್ಲ. ನಮ್ಮ ಮನೆಗೆ ವಿವಿಧ ಬಗೆಯ ಜನರು ಬರುವುದೂ, ಕಾಫಿ ಕುಡಿಯುವುದೂ, ಊಟ ಮಾಡುವುದೂ ಉಂಟು. ಹಾಗೆಯೇ ನಮ್ಮನ್ನು ತಮ್ಮ ತಮ್ಮ ಮನೆಗಳಿಗೂ ಆಹ್ವಾನಿಸುತ್ತಾರೆ; ಆದರಾತಿಥ್ಯ ನೀಡುತ್ತಾರೆ. ಅಂಥವರಲ್ಲಿ ಕೆಲವರು 'ಅಯ್ಯೋ, ಕಾಲ ಮೊದಲಿನಂಗಿಲ್ಲ...' ಎನ್ನುವುದನ್ನೂ ಕೇಳಿದ್ದೇನೆ! ಜಾತೀಯತೆಯ ವಿರಾಡ್ರೂಪ, ಅಸ್ಪೃಶ್ಯತೆಯ ವಿಕರಾಳ ಮುಖಗಳು ನನ್ನ ಗಮನಕ್ಕೆ ಬರುತ್ತಿದ್ದುದು ನಾಗರಾಜನಂತಹ ಗೆಳೆಯರ ಒಡನಾಟದಿಂದ. ಅಂತಹ ಸಂದರ್ಭಗಳಲ್ಲಿ ನಾನು "ನಾವು ಸರಿಯಾಗಿದ್ರೆ ಲೋಕ ಸರಿಯಾಗಿರುತ್ತೆ. ಈ ತತ್ತ್ವವನ್ನ ನಾವು ಮನಸ್ನಲ್ಲಿಟ್ಕೊಂಡಿರ್ಬೇಕು" ಎನ್ನುತ್ತಿದ್ದೆ. ಅಂತಹ ಸಂದರ್ಭಗಳಲ್ಲಿ ಅವರು "ನಿನ್ನ ಜೀವನ ಶೈಲಿಯ ಪ್ರಕಾರ ನೀನು ಅಸ್ಪೃಶ್ಯನೇ ಅಲ್ಲ, ಕೆಳಜಾತಿಯವನಂತೆ ಕಾಣೋದೂ ಇಲ್ಲ. ಪಾಪ, ಎಲ್ಲಾ ನಿನಗೆ ಹ್ಯಾಗೆ ಅರ್ಥವಾದೀತು !" ಎಂದು ಮುಂತಾಗಿ ಭಾಷಣ ಬಿಗಿಯುತ್ತಿದ್ದರು. ಹಾಗೆಯೇ ನಾಗರಾಜ ನನ್ನ ಧೋರಣೆಯನ್ನೇ ಅಣಕಿಸುವವನಂತೆ ನಗಲಾರಂಭಿಸಿದ! ಅವನ ಕೆನ್ನೆಗೆ ಬಾರಿಸಿ 'ನಿನ್ನ ದೇಹದಲ್ಲಿ ಹರೀತಾ ಇರೋದು ನಿನ್ನ ವಂಶದ ರಕ್ತ! ಸಹಿಸಿಕೋ, ಸಿಟ್ಟಿನಲ್ಲಿ ಮೂಗು ಕುಯ್ಕೋಬೇಡ...' ಎನ್ನಬೇಕೆನಿಸಿತು !

ವಾದದಿಂದ ಪ್ರಯೋಜನವಿಲ್ಲ ಅಂದುಕೊಂಡನೋ ಏನೋ, ನಾಗರಾಜ ಮಾತು ಬದಲಾಯಿಸಿದ. "ಲೋ ಗುರು, ನನಗಿಂತ ಫೈವ್ ಪರ್ಸೆಂಟ್ ಕಡಿಮೆ ಇದ್ರೂ ನೀನು ಸೆಲೆಕ್ಟ್ ಆಗಿದೀಯ. ಒಳ್ಳೇ ಪೋಸ್ಟ್, ಸಂತೋಷ. ಆರ್ಡರ್ ಬರೋದ್ರೊಳಗೆ ನಮ್ಮೂರಿಗೆ ಬಾ. ಅಲ್ಲಿ ನಿನ್ನ ಫ್ರೆಂಡ್ ಶಂಕರೇಗೌಡನ್ನೂ ನೋಡಬೌದು. ಮುಖ್ಯವಾಗಿ ಹಳ್ಳೀ ವಾತಾವರಣ, ನಮ್ಮವರ ಸ್ಥಿತಿ ಗತೀನೂ ಕಣ್ಣಾರೆ ಕಾಣಬೌದು" ಎನ್ನುತಾ ಏರ್‌ಬ್ಯಾಗನ್ನು ಹೆಗಲಿಗೇರಿಸಿದ. "ದುಡುಕಬೇಡಕಣೋ ನಾಗರಾಜ, ಒಂದಿಷ್ಟು ಸರಿಯಾಗಿ ಯೋಚ್ನೆಮಾಡು... ಮತಾಂತರ ಅನ್ನೋದು ಮೂರ್ಖತನದ ಪರಮಾವಧಿ..." ಎಂದೆ. ನನ್ನನ್ನು ತೀಕ್ಷ್ಣವಾಗಿ ನೋಡಿ 'ಗುಡ್ ಬೈ' ಎಂದ.

ಅಪಾಯಿಂಟ್‌ಮೆಂಟ್ ಆರ್ಡರ್‌ನ ನಿರೀಕ್ಷೆಯಲ್ಲಿದ್ದ ನಾನು ಒಂದೆರಡು ದಿನಗಳ ಮಟ್ಟಿಗೆ ನಾಗರಾಜನ ಹಳ್ಳಿಗೆ ಹೋದೆ. ಅವನು ಅತ್ಯಂತ ಸಂಭ್ರಮದಿಂದ ನನ್ನನ್ನು ಸ್ವಾಗತಿಸಿದ. ಅವನ ತಂದೆ ತಾಯಿ ನನ್ನನ್ನು ನೋಡಿ ತುಂಬಾ ಖುಷಿಪಟ್ಟರು. ನಾನು ಹಳ್ಳಿಗಾಡಿನ ಬದುಕನ್ನು ಅದರಲ್ಲೂ ಶೋಷಿತರ ಸ್ವರೂಪವನ್ನು ಕೇಳಿದ್ದೆ, ಓದಿದ್ದೆ, ಈಗ ಕಣ್ಣಾರೆ ನೋಡುವ ಅವಕಾಶ ದೊರಕಿದಂತಾಯಿತು. ನಾಗರಾಜ ತಂದೆತಾಯಿಗೆ ಒಬ್ಬನೇ ಮಗ. ಹಳ್ಳಿಗೆ ಇವರದೇ ಮಣ್ಣಿನ ಯಜಮಾನಿಕೆ. ಆದ್ದರಿಂದ ಇವರನ್ನು 'ಯಜಮಾನರ ಮನೆಯೋರು' ಎಂದೇ ಕರೆಯುವುದು ಉಂಟಂತೆ.

ಗೋಡೆಗಳಿಗೆ ಸಿಮೆಂಟ್ ಶೀಟು – ಮುಂಬದಿಯಲ್ಲಿ ದನ, ಕರು, ಕೋಳಿಗಳ ಕೊಟ್ಟಿಗೆ. ಒಳಗೆ ವ್ಯವಸಾಯದ ಪರಿಕರಗಳು, ದವಸ-ಧಾನ್ಯಗಳ ತರಹೇವಾರಿ ಚೀಲಗಳು, ಗೋಡೆಯಲ್ಲಿ ದೊಡ್ಡ ದೊಡ್ಡ ಬುದ್ಧ ಮತ್ತು ಅಂಬೇಡ್ಕರ್ ಫೋಟೋಗಳು.

ಹಟ್ಟಿಯೆಂಬುದು ನಗರದ ಸ್ಲಂ ಏರಿಯಾದ ಹಾಗೆಯೇ! ಬಿದಿರು, ಗರಿ, ಹುಲ್ಲು, ತಡಿಕೆಗಳ ಗುಬ್ಬಚ್ಚಿ ಗೂಡಿನಂಥ ಗುಡಿಸಲುಗಳು. ಇವುಗಳಲ್ಲಿ ಮಾನವಜೀವಿಗಳು ಹೇಗೆ ಬದುಕುತ್ತವೂ ?! ಎಂಬಂಥ ನನ್ನ ಆಶ್ಚರ್ಯದ ಬಗ್ಗೆ ''ನೀನೇ ಕಣ್ಬಿಟ್ಟು ನೋಡು'' ಎಂದ ನಾಗರಾಜ.

ಕಾಲುದಾರಿ ಯಾವುದೋ! ಚರಂಡಿ ಯಾವುದೋ! ಸಂದುಗೊಂದುಗಳಲ್ಲಿಯ ಮಕ್ಕಳು ಬಡತನದ ಬಿಂಬಗಳು! ''ಇದಕ್ಕೆಲ್ಲಾ ಬಡತನವೊಂದೇ ಕಾರಣವಲ್ಲ. ಶತಶತಮಾನಗಳ ಜಾತಿವ್ಯವಸ್ಥೆಯೇ ಕಾರಣ. ಮೇಲುವರ್ಣದ ಸಮಾಜ-ಸಂಸ್ಕೃತಿಯಲ್ಲಿ ಮಾನವೀಯತೆ ಇದ್ದಿದ್ದರೆ ಹೀಗಾಗುತ್ತಿರಲಿಲ್ಲ. ಮನುವಿನ ನಿಯಮ ಅಘೋಷಿತ ಕಾನೂನಾದುದರ ಪ್ರತಿಫಲ ಇದು... ಈ ದೇಶಕ್ಕೆ ಪರಕೀಯರಿಂದ ಸ್ವಾತಂತ್ರ್ಯ ಸಿಕ್ಕರೂ ಈ ನಮ್ಮ ಜನಕ್ಕೆ ಯಾರಿಂದ-ಯಾವುದರಿಂದ ಬಿಡುಗಡೆ ದೊರಕಬೇಕೊ ಯೋಚಿಸಿ ನೋಡು...'' ಎಂದ ಅವನ ದನಿ ಭಾರವಾಗಿತ್ತು!

ನನ್ನನ್ನು ಊರು-ಕೇರಿಗಳಲ್ಲೆಲ್ಲಾ ನಡೆದಾಡಿಸಿದ. ಹಳ್ಳಿಯ ಸ್ವಲ್ಪ ದೂರದ ಗುಡಿಸಲುಗಳ ಸಮೂಹವನ್ನು 'ಹಟ್ಟಿ' ಎಂದೂ ಮೇಲುಜಾತಿಯವರ ದೊಡ್ಡ ದೊಡ್ಡ ಮನೆಗಳ ಪ್ರದೇಶವನ್ನು 'ಊರು' ಎಂದೂ ಕರೆಯುತ್ತಾರಂತೆ! ನಗರದಲ್ಲಿ ಎಲ್ಲರಂತೆ ತಲೆಯೆತ್ತಿ ನಡೆಯುವ ನಾಗರಾಜ ಇಲ್ಲಿ ತಗ್ಗಿ ಬಗ್ಗಿ ನಡೆಯುವುದನ್ನು ಗಮನಿಸಿದೆ! ಊರಿನ ಕೆಲವರಿಗೆ ಎರಡೂ ಕೈಜೋಡಿಸಿ ನಮಸ್ಕರಿಸಿದ! ಪ್ರತಿಯಾಗಿ ಕೆಲವರು ''ಏನಲೇ ನಾಗ!'' ಎಂದರು! ಇನ್ನು ಕೆಲವರು ನಿಲ್ಲಿಸಿಕೊಂಡು ಪತ್ರ ಇತ್ಯಾದಿಗಳನ್ನು ಓದಿಸಿಕೊಂಡರು! ಸೌಜನ್ಯಕ್ಕಾದರೂ ಕುಳಿತುಕೋ ಎನ್ನಲಿಲ್ಲ! ಒಬ್ಬನಂತೂ ''ಏನಲೇ... ! ಗರಿಗರಿ ಬಟ್ಟೇಲಿ ಗೌಡ್ರ ಅಳಿಯನಂಗೆ ಓಡ್ಯಾಡ್ತಿದೀಯ! ಸರ್ಕಾರ್ದೋರು ನಿನ್ನ ಕರ್ದು ಕೆಲ್ಸ ಕೊಡಬಕಾಗಿತ್ತಲ್ಲ, ಇನ್ನಾ ಯಾಕ್ಕೊಟ್ಟಿಲ್ಲ?'' ಎಂದ! ಇದೇನು ವ್ಯಂಗ್ಯವೋ ಅಸೂಯೆಯ ಬಿಸಿಯೋ ತಿಳಿಯಲಿಲ್ಲ. ''ನೋಡೋ ಗುರು, ವಿದ್ಯಾವಂತನಾಗಿ, ಸಂಘಟನೆಗಳಲ್ಲಿ ತೊಡಗಿರುವ ನನ್ನನ್ನೇ ಈ ರೀತಿ ಕಾಣ್ತಾಯಿರುವಾಗ, ಇನ್ನು ಅನಕ್ಷರಸ್ಥರೂ ಅಮಾಯಕರೂ ಬಡವರೂ ಆದಂಥ ಹಟ್ಟೀಜನರ ಸ್ಥಿತಿ ಹೇಗಿರಬಹುದು!?''

ಎದುರಾದ ಇನ್ನೊಬ್ಬ ನನ್ನನ್ನು ನೋಡಿ ''ಇವುನ್ಯಾರೋ ?! ನಿಮ್ಮವನೋ ನಮ್ಮವನೋ ?'' ಎಂದು ಪ್ರಶ್ನಿಸಿದ! ಅವನ ಉಡಾಫೆಯಿಂದ ಕೆನ್ನೆಗೆ ಬಾರಿಸಲೇ ಎಂಬಂಥ ಸಿಟ್ಟನ್ನು ಹತ್ತಿಕ್ಕಿಕೊಂಡೆ. ಜಮೀನ್ದಾರನ ಮನೆಯ ಸಗಣಿ ಗಂಜಲ ಕೊಟ್ಟಿಗೆಯಲ್ಲಿ ಒಬ್ಬ ಆಳು ಮುರುಕು ತಟ್ಟೆಯಲ್ಲಿ ಮುದ್ದೆ ಉಣ್ಣುತ್ತಿದ್ದ! ''ಆತ ನನ್ನ ಚಿಕ್ಕಪ್ಪ! ಮದುವೆಗೆ ಮಾಡಿದ ಸಾಲಕ್ಕಾಗಿ ಐದು ವರ್ಷಗಳಿಂದ ಆಳಾಗಿ ದುಡಿಯುತ್ತಿದ್ದಾನೆ! ಲೆಕ್ಕ ಯಾವತ್ತಿಗೆ ಚುಕ್ತಾ ಆಗುವುದೋ ಆ ದೇವರಿಗೇ ಗೊತ್ತು...'' ಎಂದ ನಾಗರಾಜ. ಮುಂದೆ, ಒಂದು ಮನೆಯಂಗಳದಲ್ಲಿ, ಸೆರಗನ್ನು ಬಿಗಿಹಿಡಿದು ತಲೆತಗ್ಗಿಸಿ ನಿಂತಿದ್ದ ಹಟ್ಟಿಯ ಯುವತಿಯನ್ನು ಕುರಿತ ಒಬ್ಬ ''ನಿಮ್ಮವ್ವ, ನೀನೇನು ಪುಗಸಟ್ಟೆ ಕಿಸಿತಿಯೇನೇ! ಕೂಲಿ ಇಸ್ಕಳಲ್ವಾ! ಸೆಂಜೀಕೆ ಬಾ, ಕೆಲಸೈತೆ...'' ಎಂದೆಲ್ಲಾ ತರಾಟೆಗೆ ತೆಗೆದುಕೊಂಡಿದ್ದ! ನನ್ನ ಮೈ ಉರಿದುಹೋಯಿತು. ಈ ಬಗ್ಗೆ ವಿಚಾರಿಸ್ಬೇಕು ಅಂದುಕೊಂಡೆ. ಆದರೆ ನಾಗರಾಜ ನನ್ನನ್ನು ತಡೆದು ''ಇದು ನಿಮ್ಮ ಸಿಟಿಯಲ್ಲ ಇಂಡಿಯಾದ ಒಂದು ಹಳ್ಳಿ. ನೆನಪಿರಲಿ. ಚಕಾರ ಎತ್ತಿದ್ರೆ ನಮ್ಮಿಬ್ಬರ್ನೂ ಕಂಬಕ್ಕೆ ಕಟ್ಟಿ ತೌಡು ಹರಿದ್ಬಿಡ್ತಾರೆ! ಸುದ್ದಿ ಸಿಟಿಗೆ ತಲುಪೋದ್ರೊಳಗೆ ನಮ್ಮ ಹೇಲು ಉಚ್ಚೆ ಒಂದೇ ಆಗಿರುತ್ತೆ... ಬಾ ಬಾ'' ಎನ್ನುತ್ತಾ ನನ್ನನ್ನು ಮುಂದಕ್ಕೆ ಎಳೆದೊಯ್ದ.

''ಎಲ್ಲಾನೂ ನೋಡ್ತಿದೀಯಲ್ಲ ನಿನಗೇನನ್ನಿಸ್ತಿದೆ ?'' ಎಂದು ಕೇಳಿದ ನಾಗರಾಜನ ಉದ್ದೇಶ ನನಗೆ ಅರ್ಥವಾಯಿತು. ''ಎಲ್ಲದಕ್ಕೂ ಮುಖ್ಯ ಕಾರಣ ಅನಕ್ಷರತೆ, ಅಧೈರ್ಯ, ಬಡತನ, ಅಮಾಯಕತೆಯೇ ವಿನಃ ಕೇವಲ ಜಾತೀಯತೆಯಂತೂ ಖಂಡಿತಾ ಅಲ್ಲ'' ಎಂದೆ. ಅವನು ಭಾವೋದ್ವೇಗದಲ್ಲಿ ಕಂಪಿಸುತ್ತಾ ''ಬೇರೆ ಜಾತಿಗಳಲ್ಲೂ ಅನಕ್ಷರತೆ, ಅಧೈರ್ಯ, ಬಡತನ, ಅಮಾಯಕತೆಗಳು ಇಲ್ವಾ ?! ಅವರ್ನೆಲ್ಲಾ ಊರಹೊರಗಿಟ್ಟಿದ್ದಾರಾ ? ಇಷ್ಟೊಂದು ಹೀನಾಯವಾಗಿ ಕಾಣ್ತಾರಾ ?...?'' ಎನ್ನುತ್ತಲೇ ಒಳಒಳಗೇ ಕುದಿಯುವ ಲಾವಾರಸದಂತಾದ! ''ಸರಿಯೋ ನಾಗರಾಜ, ನಿನ್ನ ಅಭಿಪ್ರಾಯದಂತೆ ಈ ಹಟ್ಟಿಯ ಜನರೆಲ್ಲಾ ಬೇರೆ ಧರ್ಮಕ್ಕೆ ಕನ್ವರ್ಟ್ ಆಗಿಬಿಟ್ರೆ ಪರಿಸ್ಥಿತಿ ಸುಧಾರಿಸಿಬಿಡುತ್ತಾ ?!'' ಎಂದು ಪ್ರಶ್ನಿಸಿದಾಗ ಅವನು ನಿಂತ ಭಂಗಿಯನ್ನು ಬದಲಿಸಿ ''ತಕ್ಷಣ ಸುಧಾರಿಸ್ದೇಯಿದ್ರೂ ಕ್ರಮೇಣ – ಅಂದ್ರೆ, ನಮ್ಮ ಮುಂದಿನ ಪೀಳಿಗೆಯ ಕಾಲಕ್ಕಾದ್ರೂ ಬದುಕಿನ ಸ್ಥಿತಿ ಹಾಗೂ ಅಸ್ಪೃಶ್ಯತೆಯ ಸ್ವರೂಪ ಅಥವಾ ತೀಕ್ಷ್ಣತೆ ಕಮ್ಮಿ ಆದ್ರೂ ಆಗಬೌದು ಕಣೋ ಗುಗ್ಗು'' ಎಂದು ದಬಾಯಿಸಿದ. ಮುಂದಕ್ಕೇನು ಮಾತಾಡಬೇಕೆಂದೇ ತಿಳಿಯಲಿಲ್ಲ.

ಮುಖ್ಯವಾದ ಕಾರ್ಯಕ್ರಮ ಇದೇ ಊರಿನ ಗೆಳೆಯ ಶಂಕರೇಗೌಡನನ್ನು ಭೇಟಿಯಾಗುವುದು. ಅವನು ಊರಿಗೆ ತಾಕಿದಂತಿರುವ ತನ್ನ ತೆಂಗಿನ ತೋಟದಲ್ಲಿದ್ದಾನೆ ಎಂಬುದನ್ನು ತಿಳಿದು, ನಾಲ್ಕು ಹೆಜ್ಜೆ ಹಾಕಿ ಅವನನ್ನು ಭೇಟಿಯಾದೆವು. ಅವನು ಯಾವುದೋ ಮರದ ಅರೆಬರೆ ನೆರಳಲ್ಲಿ ಮಾತಿಗೆ ಕುಳ್ಳಿರಿಸಿಕೊಂಡ. ನಾವೆಲ್ಲಾ ಮಾನಸ ಗಂಗೋತ್ರಿಯಲ್ಲಿ ಒಡನಾಡಿದವರು. ಸಾಮಾಜಿಕ ವಿಷಯಗಳ ಬಗ್ಗೆ ಮುಕ್ತವಾಗಿ ಚರ್ಚಿಸಿದವರು. ಅಂದಹಾಗೆ ಈ ಶಂಕರೇಗೌಡ, ರಾಘವೇಂದ್ರ ಮತ್ತಿತರರು ನಮ್ಮ ಮನೆಯಲ್ಲಿ ಕಾಫಿ, ತಿಂಡಿ, ಊಟದ ರುಚಿ ನೋಡಿದ್ದಾರೆ. 'ನಾನೀಗ ಇವನ ಊರಿಗೇ ಬಂದದ್ದಾಗಿದೆ. ಮನೆಗೆ ಎಳೆದೊಯ್ಯುತ್ತಾನೆ. ಕಾಫಿ, ತಿಂಡಿ ಅಥವಾ ಊಟ ಎಂದೆಲ್ಲಾ ಒತ್ತಾಯಿಸುತ್ತಾನೆ...' ಅಂದುಕೊಳ್ಳುತ್ತಾ ''...ಶಂಕ್ರಾ, ನಿನ್ನ ದೃಷ್ಟೀಲಿ ಅನ್‌ಟಚ್ಚಬಿಲಿಟಿ ಯಾಕೆ...?'' ಎಂದೆ. ಅವನು ನಗುತ್ತಾ ಶುರುಮಾಡಿದ : ''ಕೆಳಜಾತಿ ಜನ ಮಾಂಸ ತಿಂತಾರೆ, ಹೆಂಡ ಕುಡೀತಾರೆ, ಕೀಳು ಕೆಲ್ಸ ಮಾಡ್ತಾರೆ. ಆದ್ರಿಂದ ಕೆಲವು ಸಂಪ್ರದಾಯಸ್ಥರು ಅವರ್ನ ಮುಟ್ಟಿಸ್ಕೊಳೋಕೆ ಹಿಂದೇಟಾಕ್ತಾರೆ, ಅಷ್ಟೇ. ಕ್ಲೀನಾಗಿ ನಮ್ಮಂಗೇ ಇದ್ರೆ ಯಾವ ಅಭ್ಯಂತರವೂ ಇರಲ್ಲ. ಉದಾಹರಣೆಗೆ, ನಿನ್ನನ್ನೇ ತಗೋಳೋ ಗುರು, ನಾನು ಸಿಟಿಗೆ ಬಂದಾಗ ನಿಮ್ಮನೇಲಿ ಎಷ್ಟೋ ಸಲ ಕಾಫಿ ಕುಡ್ದಿದೀನಿ, ತಿಂಡಿ ತಿಂದಿದೀನಿ, ಊಟಾನೂ ಮಾಡಿದೀನಿ. ಯಾಕಂದ್ರೆ ನೀವೂ ನಮ್ಮಂಗೇ ಇದೀರಲ್ಲಾ!'' ಎಂದ ಅವನ ಅಭಿಪ್ರಾಯ ನನಗೆ ಸರಿ ಎನಿಸಿತು. ನಾಗರಾಜ ಹೊಸಕಾಡುತ್ತಾ ''ಶುಚಿತ್ವವೇ ಇಲ್ಲದ ಉತ್ತಮರ್ನ ದೂರ ಇಟ್ಟಿದೀರಾ ?...'' ಎಂದ!

ಯಾಕೋ ಚರ್ಚೆ ಮುಂದುವರಿಯಲಿಲ್ಲ. ಮಟ ಮಟ ಮಧ್ಯಾಹ್ನ. ಬಾಯಾರಿಕೆ. ನಾಗರಾಜ ''ಹೊರಡೋಣ'' ಎಂದ. ಶಂಕರೇಗೌಡ ಎದ್ದು ನಿಂತು ''ಸರಿಕಣ್ರೋ, ಇನ್ನೊಮ್ಮೆ ಭೇಟಿಯಾಗೋಣ'' ಎನ್ನುತ್ತಾ ಬೀಳ್ಕೊಟ್ಟ.

ಏಕೋ ಏನೋ ಮಾರನೆಯ ದಿನ ಹಳ್ಳಿಯಲ್ಲಿ ನಿಲ್ಲಲಾಗಲಿಲ್ಲ. ಇದು ನಾಗರಾಜನಿಗೂ ಅರ್ಥವಾಗಿರಬಹುದು. ಆರ್ಡರ್ ಬಂದೊಡನೆ ಹೋಗಿ ಡ್ಯೂಟಿ ರಿಪೋರ್ಟ್ ಮಾಡ್ಕೋಬೇಕಲ್ಲ ಎಂಬ ಆತುರದಲ್ಲಿ ಹೊರಟ ನಾನು ಬಸ್ಸು ಏರುವುದಕ್ಕಿಂತ ಮೊದಲು ಅವನನ್ನು ಕುರಿತು ''ದುಡುಕಬೇಡ ಕಣೋ ನಿನ್ನ ನಿರ್ಧಾರ ಚಿಕ್ಕದಲ್ಲ. ಸರಿಯಾಗಿ ಯೋಚಿಸು...'' ಎಂದು ಮುಂತಾಗಿ ಹಿರಿಯನಂತೆ ನೀತಿ ಹೇಳಿದೆ. ಅವನು ನನ್ನನ್ನೇ ಸಮಾಧಾನ ಪಡಿಸುವವನಂತೆ ಭುಜ ತಟ್ಟಿದ!

ಆರ್ಡರ್ ನಿರೀಕ್ಷೆಯಲ್ಲಿದ್ದ ನನಗೆ ನಾಗರಾಜನ ವಿಷಯವೇ ತಲೆ ತುಂಬಿಕೊಂಡಿತು. ಮತಾಂತರ ಮತಾಂತರ ಎನ್ನುವವರು ಒಂದಷ್ಟು ಸರಿಯಾಗಿ ಯೋಚಿಸಬಾರದೇಕೆ ? ಮತಾಂತರ ಮಾಡಿದಾಕ್ಷಣ ಮೈಬಣ್ಣ, ಆರ್ಥಿಕ ಸ್ಥಿತಿ ಮುಂತಾದವುಗಳೇನಾದರೂ ಬದಲಾಗುವುದು ಸಾಧ್ಯವಾ ?! ಅಲ್ಲದೆ ಸಹಸ್ರಾರು ವರ್ಷಗಳಿಂದ ಯಥಾ ಜಾತಿಯಲ್ಲಿ ಬದುಕಿದ್ದ ಪೂರ್ವಿಕರಿಗೆ ಅಪಮಾನ ಮಾಡಿದಂತಾಗುವುದಿಲ್ಲವೇ ? ಸಂಸ್ಕೃತಿ ಸಂಸ್ಕಾರಗಳನ್ನು ಪರಿಷ್ಕರಿಸಿಕೊಂಡರೆ ಸಮಾನತೆಯನ್ನು ಸಾಧಿಸಬಹುದಲ್ಲ! ಇದನ್ನು ಗಮನಿಸದೆ, ದುಡುಕಿಬಿಟ್ಟರೆ !? ಅಥವಾ ಆಮಿಷಕ್ಕೊಳಗಾದರೆ ?! ಇದೇ ಗುಂಗಿನಲ್ಲಿದ್ದಾಗ ಒಂದು ದಿನ ಭೇಟಿಯಾದ ರಾಘವೇಂದ್ರ ನನ್ನ ಮಾನಸಿಕ ತೊಳಲಾಟವನ್ನು ತಿಳಿದು ''ನಮ್ಮ ದೇಶದ ಮತಾಂತರದ ಪಿಡುಗನ್ನು ನಿಯಂತ್ರಿಸ್ಬೇಕು. ಇಲ್ಲವಾದ್ರೆ ಕಡೆಗೆ ನಾವೇ ಅಲ್ಪಸಂಖ್ಯಾತರಾಗಿ ಬಾಲ ಮುದುರಿಕೊಳ್ಳಬೇಕಾಗುತ್ತೆ... ಮತಾಂತರದ ಯೋಚನೇನ ಬಿಟ್ಬಿಡು. ನಿನ್ನ ನಿರ್ಧಾರ ಒಳ್ಳೆಯದಲ್ಲ; ಮೂರ್ಖತನದ್ದು ಎಂದು ಎಚ್ಚರಿಸಬೇಕು. ಅವನು ಮನಸ್ಸು ಬದಲಿಸದಿದ್ರೆ ನಾವು ಬಹಿರಂಗವಾಗಿ ಪ್ರತಿಭಟಿಸಬೇಕು...'' ಎಂದೆಲ್ಲಾ ಬಡಬಡಿಸಿದ! ಸ್ಥಳೀಯ ಪತ್ರಿಕೆಯೊಂದರ ಸಂಪಾದಕ-ಪ್ರಕಾಶಕನಾದ ಈ ರಾಘವೇಂದ್ರ ಧರ್ಮ ಸಂಸ್ಕೃತಿಯ ಬಗ್ಗೆ ತೀವ್ರವಾದ ಕಳಕಳಿ ಉಳ್ಳವನು. ಸಂಪ್ರದಾಯಗಳಿಗೆ ವಿರುದ್ಧವಾದಂಥ ವೈಚಾರಿಕ-ವೈಜ್ಞಾನಿಕ ವಿಷಯಗಳನ್ನು ಖಂಡಾತುಂಡಾ ಖಂಡಿಸುವವನು. ನಮ್ಮ ಸಂಸ್ಕೃತಿ ಉಳಿಯಬೇಕು; ನ್ಯಾಯ ನೀತಿ ಧರ್ಮ ಬೆಳೆಯಬೇಕು. ದಲಿತ



ಸಂಸ್ಕೃತಿಯ ತೊಟ್ಟಿಲಾದ ಜಾನಪದ ಶಾಶ್ವತವಾಗಬೇಕು... ಎಂದು ಮುಂತಾಗಿ ವಾದಿಸುವವನು. ಅವನೊಂದಿಗೆ ಯಾವುದೇ ವಿಷಯವನ್ನು ಚರ್ಚಿಸುವುದೆಂದರೆ ಕರಡಿಯೊಂದಿಗೆ ಕಿತ್ತಾಡಿದ ಹಾಗೆ! ಅವನ ಧೋರಣೆ ಒಂದು ರೀತಿಯಲ್ಲಿ ನನಗೆ ಸರಿ ಎನಿಸುತ್ತದೆ. ಆದರೆ ನಾಗರಾಜನ ನಿರ್ಧಾರವನ್ನು ಬದಲಿಸುವುದು ಹೇಗೆ? ನನ್ನ ತಲೆ ಎಂಬುದು ಗೊಂದಲದ ಗೂಡಾಯಿತು!

ನನ್ನ ನಿರೀಕ್ಷೆಯಂತೆ ಕೆಲವೇ ದಿನಗಳಲ್ಲಿ ಬಂದ ಆರ್ಡರ್ ಪ್ರಕಾರ ಜಿಲ್ಲಾ ಕೇಂದ್ರಸ್ಥಾನಕ್ಕೆ ಹೋಗಿ ಡ್ಯೂಟಿ ರಿಪೋರ್ಟ್ ಮಾಡಿಕೊಂಡು, ನನ್ನ ಪಾಲಿನ ಇಲಾಖಾ ನಿವಾಸ ಇನ್ನೂ ಖಾಲಿಯಾಗದಿದ್ದುದರಿಂದ, ನಮ್ಮ ಕಚೇರಿಯ ಸಿಬ್ಬಂದಿ ಹುಡುಕಿಕೊಟ್ಟ ರೂಮೊಂದರಲ್ಲಿ ಸದ್ಯದ ವಾಸ್ತವ್ಯ ಹೂಡಿದೆ. ಈ ರೂಮು ಬಡಾವಣೆಯಲ್ಲೇ ಭವ್ಯವಾದ ಕಟ್ಟಡದ ಒಂದು ಸುಸಜ್ಜಿತ ಭಾಗ. ಈ ಕಟ್ಟಡದ ಇನ್ನಿತರ ಪೋರ್ಷನ್‌ಗಳಲ್ಲಿ ಕೆಲವು ಕುಟುಂಬಗಳು ವಾಸವಾಗಿವೆ. ಒಟ್ಟಿನಲ್ಲಿ ಈ ಬಡಾವಣೆಯೆಂದರೆ ಒಂದು ಮಿನಿ ಇಂಡಿಯಾ ಎನ್ನಬೇಕು! ಉತ್ತಮರೂ ಬಡವರೂ ಕೂಲಿಕಾರರೂ ಕಾರ್ಮಿಕರೂ ರಿಕ್ಷಾವಾಲಾಗಳೂ ಬೀದಿ ವ್ಯಾಪಾರಿಗಳೂ ಮುಂತಾದ ತರಹೇವಾರಿ ಜನ! ಅಂದಹಾಗೆ ಹಲವಾರು ಜಾತಿ-ಧರ್ಮ-ಭಾಷೆಗಳು! ಈ ದೇಶದ ವೈವಿಧ್ಯಮಯ ಸಮಾಜವನ್ನು ಅಧ್ಯಯನ ಮಾಡಬೇಕೆಂಬುವವರು ಇತ್ತ ಗಮನಹರಿಸಬೇಕು!

ವಯೋವೃದ್ಧರಾದ ಈ ಕಟ್ಟಡದ ಮಾಲೀಕರು ನನ್ನ ಬಿಡುವಿನ ವೇಳೆಯಲ್ಲಿ ಕಷ್ಟಪಟ್ಟು ಮೆಟ್ಟಿಲೇರಿ ರೂಮಿಗೆ ಬಂದು ಅದೂ ಇದೂ ಮಾತಾಡುತ್ತಾ ಹೊತ್ತುಕಳೆಯುತ್ತಿದ್ದರು. ಸರಿಯಾಗಿ ಕಣ್ಣು ಕಾಣಿಸದ, ಕಿವಿ ಕೇಳಿಸದ ಅವರೊಂದಿಗೆ ಮಾತಾಡುವುದೇ ಒಂದು ಹರಸಾಹಸ! ಒಮ್ಮೆ ಅವರು ಹೇಳಿದರು: ''ಈ ಬಡಾವಣೇಲಿ ತರಾವರಿ ಜನ ಅಣ್ಣ ತಮ್ಮಂದಿರಂಗಿದಾರೆ. ಒಂದ್ಸಲ ಇಲ್ಲಿಯ ಒಂದು ಮನೆಗೆ ಕುಟುಂಬವೊಂದು ಬಾಡಿಗೆಗೆ ಸೇರಿಕೊಂಡಿತು. ಒಂದೆರಡು ದಿನಗಳಲ್ಲೇ ಅವರು ಕೀಳು ಜಾತಿಯವರೆಂಬುದು ತಿಳಿಯಿತು! ತಡಮಾಡದೆ ಇಲ್ಲಿಯ ಜನರೆಲ್ಲಾ ಸೇರಿ ರಾತ್ರೋರಾತ್ರಿ ಅವರನ್ನು ಹೊರದಬ್ಬಿಬಿಟ್ಟರು!'' ಎಂದಾಗ ಪರೋಕ್ಷವಾಗಿ ನನಗೇ ತಿವಿದಂತಾಯಿತು! ಹಾಗೆಯೇ ನನ್ನ ಜಾತಿಯ ಬಗ್ಗೆಯೂ ವಿಚಾರಿಸಬಹುದೆಂಬ ಅನುಮಾನ-ಹೆದರಿಕೆ ಶುರುವಾಯಿತು. ಕುಡುಕರೂ ಅನಕ್ಷರಸ್ಥರೂ ಜಗಳಗಂಟರೂ ತುಂಬಿ ತುಳುಕುವ ಈ ಬಡಾವಣೆಯಲ್ಲಿ ಜಾತಿ ಜಾತಿಗೆ ಸಂಬಂಧಿಸಿದ ಗದ್ದಲ ನಡೆದಂತೆ ಕಾಣಲಿಲ್ಲ. ಏಕೆಂದರೆ ಕೆಳಜಾತಿಯವರಾರೂ ಇಲ್ಲವಲ್ಲ! ಬರಬರುತ್ತಾ ನನಗೆ ಭಯ ಹೆಚ್ಚಾಗಲಾರಂಭಿಸಿತು! ನನ್ನ ಜಾತಿ ಬಯಲಾಗಿಬಿಟ್ಟರೆ ಯಾವ ರಾದ್ಧಾಂತವೋ! ಎಂಥ ಅವಮಾನವೋ! ನನ್ನಷ್ಟಕ್ಕೆ ನಾನು ನೆಮ್ಮದಿಯಾಗಿರಲು ಸಾಧ್ಯವಾಗಲಿಲ್ಲ! ಅಪರಿಚಿತರು ನಲ್ಲಿಗೆ ಬೊಗಸೆಯೊಡ್ಡಿ ನೀರು ಕುಡಿದರೆ ಆ ನಲ್ಲಿಯ ಮೂಲೆ ತೊಳೆಯುವುದೂ, ಭಿಕ್ಷುಕರು ಬಂದು ಹೋದರೆ ನಿಂತ ನೆಲಕ್ಕೆ ನೀರು ಚಿಮುಕಿಸುವುದೂ ಮೀಸಲಾತಿಯ ವಿಷಯ ಬಂದಾಗ ಅಸಮಾಧಾನದಲ್ಲಿ ಕುದಿಯುವುದೂ ಕೂಳಕರನ್ನು ಕೆಳಜಾತಿಯವರಿಗೆ ಹೋಲಿಸುವುದೂ ಮೊದಲಾದಂಥ ಘಟನೆಗಳು ನನ್ನನ್ನು ಚೂಪುಕತ್ತಿಯಲ್ಲಿ ತಿವಿದಂತಾಗುತ್ತಿತ್ತು. ಪೊಲೀಸ್ ಅಧಿಕಾರಿಯಾದ ನನ್ನ ತಂದೆಯ ಪ್ರಭಾವವೂ ಈ ವಿಷಯದಲ್ಲಿ ಪ್ರಯೋಜನವಾಗುವುದಿಲ್ಲ. ಇಂಥ ಸ್ಥಳದಲ್ಲಿ ಜೀವ ಅಂಗೈಯಲ್ಲಿ ಹಿಡಿದಿರುವ ಬದಲು ಕೆಳಜಾತಿಯ ಬಡಾವಣೆಯಲ್ಲೇ ರೂಮು ನೋಡಿಕೊಂಡರಾಯಿತು – ಅಂದುಕೊಳ್ಳುತ್ತಿರುವಾಗ ಅದೃಷ್ಟವಶಾತ್ ನನ್ನ ಪಾಲಿನ ನಿವಾಸ ಖಾಲಿಯಾಯಿತು. ಅದು ದೊಡ್ಡ ಕುಟುಂಬಕ್ಕೂ ದೊಡ್ಡದೇ ಎಂಬಂತಿದ್ದರೂ ಸದ್ಯ ಇಲ್ಲಿಂದ ಪಾರಾಗಿಬಿಟ್ಟರೆ ಸಾಕೆಂಬ ಆತುರದಲ್ಲಿ ಅದನ್ನು ಸ್ವಚ್ಛಗೊಳಿಸಿ, ಅಲ್ಲಿಗೆ ಸ್ಥಳಾಂತರಗೊಂಡು, ನಿಟ್ಟುಸಿರುಬಿಟ್ಟೆ. 'ಇವು ಇಲಾಖಾ ಕ್ವಾರ್ಟರ್ಸ್. ಯಾವ ದೊಣ್ಣೆನಾಯಕರ ಕಿರಿಕಿರಿಯೂ ಇರೋದಿಲ್ಲ. ಇಲ್ಲಿಯ ಎಲ್ಲರೂ ನೌಕರರು – ಅಧಿಕಾರಿಗಳು; ಲೋಕ ಕಂಡವರು; ತಿಳಿವಳಿಕೆ ಉಳ್ಳವರು; ಹೇಳೀ ಕೇಳೀ ವಿದ್ಯಾವಂತರು; ಯಾರ ವಿಷಯಕ್ಕೆ ಯಾರೂ ತಲೆ ಹಾಕುವುದಿಲ್ಲ'

''ಹೇಗಿದ್ದೀಯ?'' ಎಂಬಂಥ ನನ್ನ ತಂದೆ-ತಾಯಿ, ನಾಗರಾಜ, ಶಂಕರೇಗೌಡ, ರಾಘವೇಂದ್ರ ಮತ್ತಿತರರೆಲ್ಲರ ಪ್ರಶ್ನೆಗೆ ನನ್ನ ಸಂಭ್ರಮದ ಉತ್ತರ ''ಫೈನ್''.

ಕ್ವಾರ್ಟರ್ಸ್‌ನ ಸುಮಾರು ಹದಿನೈದು ಮನೆಗಳ ಕುಟುಂಬಗಳಲ್ಲಿ ಕೆಲವು ಹತ್ತಿರದ ಬಂಧುಗಳಂತೆ – ಬಡ ಕುಟುಂಬಗಳಂತೆ ಪರಸ್ಪರ ಒಡನಾಟ-ಬಾಂಧವ್ಯ ಬೆಳೆಸಿಕೊಂಡಿವೆ. ಇನ್ನುಳಿದ ಕೆಲವು ಕುಟುಂಬಗಳು ಮಾತ್ರ ತಮ್ಮಷ್ಟಕ್ಕೆ ತಾವೇ ಎಂಬಂತೆ ಪ್ರತ್ಯೇಕ! ಅವು ಇನ್ನಿತರ ಕುಟುಂಬಗಳೊಂದಿಗೆ ಯಾವುದೇ ಒಡನಾಟ-ಸಂಪರ್ಕ ಇಟ್ಟುಕೊಂಡಂತೆ ಕಾಣಲಿಲ್ಲ! ನನಗೆ ಕುತೂಹಲ ಶುರುವಾಯಿತು. ಆ ಕುಟುಂಬಗಳ ಬಗ್ಗೆ ವಿಚಾರಿಸಿದೆ. ಅವು 'ಕೆಳಜಾತಿಯವು' ಎಂಬುದು ತಿಳಿಯಿತು! ಅವುಗಳಲ್ಲಿ ಒಬ್ಬನಾದ – ನನ್ನ ಹತ್ತಿರದ – ಸಹೋದ್ಯೋಗಿಯನ್ನು ವಿಚಾರಿಸಿದೆ. ''ಒಂದು ಇಲಾಖೆಯ ಕ್ವಾರ್ಟರ್ಸ್ ಆದುದರಿಂದ ಯಾರು ಯಾವ ಜಾತಿಯವರೆಂಬುದು ಸುಲಭವಾಗಿ ತಿಳಿದುಬಿಡುತ್ತದೆ... ನಾವು ಎಲ್ಲರಂಗೆ ಚನ್ನಾಗಿದ್ರೂ ಅನ್‌ಟಚಬಿಲಿಟಿ ಆಚರಿಸ್ತಾರೆ... ಪ್ರತಿಭಟಿಸೋದಾದ್ರೂ ಹೇಗೆ? ಇಂಥ ವಿಷಯಗಳು ಕಾನೂನಿನ ಹಿಡಿತಕ್ಕೂ ಸಿಗುವುದಿಲ್ಲ. ಈ ಬಗ್ಗೆ ಬಾಯಿಬಿಟ್ರೇ ಬಣ್ಣಗೇಡು ಅಂದ್ಕೊಂಡು ಸಹಿಸ್ಕೋಬೇಕಾಗಿದೆ... ಹಿರಿಯರ ವಿಷ್ಯ ಹಾಗಿರ್ಲಿ, ನಮ್ಮ ಮಕ್ಕಳೊಂದಿಗೆ ಅವರ ಮಕ್ಕಳೂ ಆಟಕ್ಕೆ ಸೇರೋದಿಲ್ಲ! ಅದೇ ಜೋಸಪ್ಪ ಪೀರಣ್ಣರೊಂದಿಗೆ ಯಾವ್ದೇ ಭೇದವಿಲ್ದೆ ಇರ್ತಾರೆ... ನಾವು ಅಂದ್ರೆ ನಾಯಿಗಳಿಗೂ ತಿರಸ್ಕಾರ! ಹಾವು ಕರಡಿಗಳ ಜೊತೆಲಾದ್ರೂ ಬದುಕಬೌದು, ಇಂಥ ಜಾತಿವಾದಿಗಳ ನೆರೇಲಿ ಇರೋದು ನಿಜಕ್ಕೂ ಅಪಾಯವೇ...''

ಹಲವರ ಅನುಭವಗಳನ್ನು ಕೇಳಿ, ನೋಡಿ ಮನಸಿಗೆ ತುಂಬಾ ನೋವಾಯಿತು. ಇದನ್ನೆಲ್ಲಾ ಯಾರಲ್ಲಿ ಹೇಳಿಕೊಳ್ಳಲಿ? ಹೇಗೆ ಸಹಿಸಿಕೊಳ್ಳಲಿ? ಬರಬರುತ್ತಾ ಕೇಳಿದ್ದೂ ನೋಡಿದ್ದೂ ನನ್ನ ಅನುಭವಕ್ಕೇ ಬರಲಾರಂಭಿಸಿತು! ಯಾರೋ ಒಬ್ಬ ಪುಣ್ಯಕ್ಷೇತ್ರಕ್ಕೆ ಹೋಗಿ ಬಂದು ಪ್ರಸಾದ ಎಲ್ಲರಿಗೂ ನೀಡಲಾರಂಭಿಸಿದ. ಸನಿಹದಲ್ಲೇ ಇದ್ದ ನನ್ನ ಬಳಿಗೇ ಬರಲಿಲ್ಲ! ನನ್ನ ಜಾತಿ ಬಹಿರಂಗವಾಗಿದೆ ಎಂಬುದು ಖಾತರಿಯಾಯಿತು! ವಾಸಿಸುವ ಮನೆಯ ವಿಸ್ತಾರ, ಕಿಟಕಿ ಬಾಗಿಲುಗಳ ಸರಿಯಾದ ಸಂಖ್ಯೆಯನ್ನೂ ತಿಳಿಯದವರು ನೆರೆಹೊರೆಯವರ ಜಾತಿಯನ್ನು ಮಾತ್ರ ಬೇಗನೆ ಕಂಡುಹಿಡಿದುಬಿಡುತ್ತಾರೆ!

ಒಮ್ಮೆ ಒಳಗಿನ ನಲ್ಲಿಯಲ್ಲಿ ನೀರು ಬಾರದಿದ್ದಾಗ ಎಲ್ಲರಂತೆ ನಾನೂ ಬಿಂದಿಗೆ ಹಿಡಿದು ಸಾರ್ವಜನಿಕ ಟ್ಯಾಂಕ್‌ನ ಬಳಿಗೆ ಹೋದಾಗ ಕೆಲವರು ತಮ್ಮ ತಮ್ಮ ಬಿಂದಿಗೆಗಳನ್ನು ಸರಕ್ಕನೆ ಪಕ್ಕಕ್ಕೆ ಸರಿಸಿಕೊಂಡರು! ನಾನು ನೀರು ಹಿಡಿದುಕೊಂಡ ನಂತರ ಒಬ್ಬ ನಲ್ಲಿಯ ಮೂತಿಯನ್ನು ತೊಳೆದ! ಮತ್ತೆ ಕೆಲವರು ನನ್ನ ಬೆನ್ನಹಿಂದೆ ಗುಸುಗುಸು ನಡೆಸಿದರು! ನನಗಾದ ಅವಮಾನದ ನೋವು ಅಷ್ಟಿಷ್ಟಲ್ಲ! ಛೆ! ಛೆ! ದರಿದ್ರ ಸಂಸ್ಕೃತಿಯೆ! ರಾತ್ರಿ ತುಂಬಾ ಹೊತ್ತಿನವರೆಗೂ ನಿದ್ರೆ ಸುಳಿಯಲಿಲ್ಲ. ಆಫೀಸ್ ಹಾಗೂ ಕ್ವಾರ್ಟರ್ಸ್ ಏರಿಯಾದಲ್ಲಿ ತಲೆಯೆತ್ತಿ ನಡೆಯಲೂ ನಾಚಿಕೆಯಾಯಿತು! ಯಾರೊಂದಿಗಾದರೂ ಮಾತಾಡಬೇಕಾದ ಸಂದರ್ಭಗಳಲ್ಲೂ ಚಳಿ! ಚಳಿ! ನಾಗರಾಜನ ನಿರ್ಧಾರಕ್ಕೆ ಪ್ರಬಲವಾದ ಕಾರಣಗಳಿರುವುದು ಸತ್ಯ! ಅವನು ಹುಂಬ-ಅವಿವೇಕಿಯಾಗಿರುವುದು ಸಾಧ್ಯವಿಲ್ಲ! ಅವನು ಸ್ವಾಭಿಮಾನಿ... ಅಂದುಕೊಂಡೆ.

ಇದ್ದಕ್ಕಿದ್ದಂತೆ ನನ್ನ ಮನೋಭಾವವೇ ಬದಲಾಯಿತು! ನಾಗರಾಜನ ಟ್ರ್ಯಾಕಿನಲ್ಲೇ ಯೋಚಿಸಲಾರಂಭಿಸಿತು! ನನಗೆ ನಾನೇ ಅರ್ಥವಾಗದಂಥ ಸ್ಥಿತಿ! ಅಮಾಯಕ ಪೂರ್ವಿಕರು ನಾನೂ ನನ್ನ ಪೀಳಿಗೆಯೂ ನರಳಬೇಕೆ?! ಈ ದೇಶದ ಬದುಕಿನ ರೀತಿ ಬದಲಾದರೂ ಜಾತೀಯತೆಯ ನೀತಿ ಬದಲಾಗುವುದಿಲ್ಲ!... ನನ್ನ ಬದುಕು ನನಗೆ ಮುಖ್ಯ. ಇದು ಸ್ವಾರ್ಥವಲ್ಲ; ಸರಿಯಾದ ವಿವೇಚನೆ... ಮಾನವರೊಂದಿಗೆ ಮಾನವರಾಗಿ ಬದುಕ ಮಾರ್ಗ ನೋಡಿಕೊಳ್ಳುವುದರಲ್ಲಿ ತಪ್ಪೇನೂ ಇಲ್ಲ, ಯೋಚಿಸಿದೆ. ಚಿಂತಿಸಿದೆ. ಚಂಡಮಾರುತದಿಂದ ಅಲ್ಲೋಲಕಲ್ಲೋಲವಾದ ಸರೋವರ ಕ್ರಮೇಣ ಶಾಂತವಾಗುವಂತೆ ನನ್ನ ಮನಸ್ಸೂ ಒಂದು ನಿಶ್ಚಲ ಸ್ಥಿತಿಯನ್ನು ತಲುಪಿತು!

ನಾಗರಾಜನ ಹಾಗೆ ನಾನೂ 'ಬೇರೆ ಧರ್ಮಕ್ಕೆ ಕನ್ವರ್ಟ್ ಆಗಬೇಕೆಂದಿದ್ದೇನೆ' ಎಂಬ ನನ್ನ ನಿರ್ಧಾರವನ್ನು ಬಹಿರಂಗಪಡಿಸಿದೆ.

ನನ್ನ ತಂದೆ ತಾಯಿ ''ಧರ್ಮಕ್ಕಾಗಿ ಬದುಕಲ್ಲ; ಬದುಕಿಗಾಗಿ ಧರ್ಮ. ನೆಮ್ಮದಿಯಾಗಿ ಬದುಕೋದಕ್ಕೆ ಯಾವ ಧರ್ಮವಾದರೇನು! ಎಲ್ಲಾ ನಿನ್ನಿಷ್ಟ. ನಮ್ಮದೇನೂ ಅಭ್ಯಂತರವಿಲ್ಲ. ಏನೇ ಆದರೂ ನೀನು ನಮ್ಮ ಮಗನೇ ಅಲ್ಲವೇ!?'' ಎಂದರು. ನಾಗರಾಜ ''ಕೊನೆಗೂ ನಿನಗೆ ಜ್ಞಾನೋದಯವಾಯ್ತಲ್ಲ!'' ಎಂದ. ಶಂಕರೇಗೌಡ ''ನೀನೂ ಆಮಿಷಕ್ಕೊಳಗಾಗಿ ಬಿಟ್ಯಾ?!'' ಎಂದ ದೂರವಾಣಿಯಲ್ಲಿ. ''ಆಮಿಷ! ಆಮಿಷ! ಅನ್ನುವ ನೀನು ಅಸ್ಪೃಶ್ಯತೆಯ ಪರಿಣಾಮವನ್ನೇಕೆ ಅರ್ಥ ಮಾಡ್ಕೊಳ್ಳೋದಿಲ್ಲ?'' ಎನ್ನುತ್ತಿದ್ದಂತೆಯೇ ಫೋನ್ ಕಟ್ಟಾಯಿತು!

ರಾಘವೇಂದ್ರನ ಫೋನ್ ''ಏನೋ?! ನೀನೂ ಕನ್ವರ್ಟ್ ಆಗ್ತೇಕೂಂತಿದೀಯ!? ನಿನಗೆ ಆಮಿಷ ಒಡ್ಡಿದವರು ಯಾರು? ಬಲವಂತ ಮಾಡಿದವರು ಯಾರು? ಇದೆಲ್ಲಾ ನನಗೆ ಹಿಡ್ಸೋದಿಲ್ಲ...'' ಅವನ ಮಾತಿನ ಮಧ್ಯದಲ್ಲೇ ನಾನು ''ಎಲ್ಲಾ ನನ್ನ ಸ್ವಂತ ಇಚ್ಛೆ. ಯಾವ ದೊಣ್ಣೆನಾಯಕನ ಅಪ್ಪಣೆಯೂ ನನಗೆ ಬೇಕಾಗಿಲ್ಲ'' ಎಂದವನೇ ರಿಸೀವರ್ ಇಟ್ಟುಬಿಟ್ಟೆ.

ಎಸ್. ಆರ್. ಗುರುನಾಥ್
೧೧ನೇ ತಿರುವು, ಐ.ಯು.ಡಿ.ಪಿ. ಬಡಾವಣೆ, ಚಿತ್ರದುರ್ಗ - ೫೭೭ ೫೦೧



# ನಾವೆಷ್ಟು ಪೌರಪ್ರಜ್ಞರು?

**ತುಂ**ಬಿದ ಬಸ್ಸು ನಿಗದಿತ ಊರು ತಲುಪುತ್ತದೆ. ಅದೇ ಬಸ್ಸು ಮತ್ತೆ ಅಲ್ಲಿಂದ ಹೊರಡಬೇಕು. ಅಯ್ಯೋ! ಬಸ್‌ಸ್ಟಾಪಿನಲ್ಲಿ ಜನವ್ವೋ ಜನ. ಬಂದವರಿಳಿಯಲೂ ಬಿಡದಂತೆ ಅವರು ಬಸ್ಸಿಗೆ ಮುತ್ತಿಗೆ ಹಾಕಿದ್ದಾರೆ. ಒಬ್ಬಿಬ್ಬರು ಕಿಟಕಿಯಿಂದ ತೂರಲೂ ಹವಣಿಸಿದಂತಿದೆ. ಅಗೋ ಹೆಂಗಸರು ಮಕ್ಕಳು ಬಸ್ಸಿನಿಂದಿಳಿಯಲಾಗದೆ ಅಕ್ಷರಶಃ ಆಘಾತಕ್ಕೊಳಗಾಗಿದ್ದಾರೆ. ಮೊದ್ಲು ಇಳಿಯೋರಿಗೆ ಬಿಡ್ರಪ್ಪ... ಪ್ಲೀಸ್ ಪ್ಲೀಸ್... ಇಲ್ನೋಡಿ, ಈ ತರಹ ನುಗ್ಗಿದ್ರೆ ಹ್ಯಾಗ್ರಿ ಇಳಿಯೋದು? ಇತ್ಯಾದಿ ಆರ್ತನಾದಗಳು ಕೇಳಿಸೀತೆ ನುಗ್ಗುವವರಿಗೆ? ಕೊಡೆ, ಕರವಸ್ತ್ರ, ಪುಸ್ತಕ, ಕಡೆಗೆ ಟೋಪಿ (ವಿಗ್ ಅಲ್ಲ!) ಬಿಸಾಡಿ ಸೀಟು ಆಕ್ರಮಣ. ಇಂತಹ ದೃಶ್ಯ ಮಾಮೂಲೆನ್ನುತ್ತೀರ? ನಮ್ಮ ಪೌರಪ್ರಜ್ಞೆಯನ್ನೇ ಈ ವರ್ತನೆ ಕೆಣಕುತ್ತದೆ ತಾನೆ! ನಾಗರಿಕರೆಂದು ಕರೆದುಕೊಳ್ಳುವ ನಾವು ನಮ್ಮ ವರ್ತನೆಗಳನ್ನು ಅವಲೋಕಿಸಿದರೆ ಹುಬ್ಬೇರಿಸುವಷ್ಟು ಅಚ್ಚರಿಗಳು ಅನಾವರಣಗೊಳ್ಳುತ್ತವೆ. ಒಂದಷ್ಟು ಸ್ಯಾಂಪಲ್ಲುಗಳನ್ನು ನೋಡೋಣ. ಬಸ್ಸು, ರೈಲುಗಳಲ್ಲಿ ಕಿಟಕಿಯಂಚಿನ ಆಸನಗಳಲ್ಲಿ ಕುಳಿತ ಪ್ರಯಾಣಿಕರು ಠೀಕಾಗಿ ತಾಂಬೂಲ ಚರ್ವಣಗೈಯ್ಯುತ್ತಾ ಪದೇ ಪದೇ ಪಿಚಕಾರಿಯಂತೆ ಬಾಯಿಯಿಂದ ಕೆಂಪುರಂಗಿನ ರಸ ಕಾರುವ ಸಂಭವವಿಲ್ಲವೆ ನೀವೇ ಹೇಳಿ. ಹಿಂದಿನ ಸೀಟಿನವರಿಗೆ ಅದು ಸಿಂಪಡನೆ ಆಗುತ್ತದೆ. ಅಸಹನೀಯ ಮುಜುಗರ, ಅಸಹ್ಯಕ್ಕೆ ಆಸ್ಪದವಾದೀತು ಎಂಬ ಪರಿಜ್ಞಾನ ತಾಂಬೂಲಪ್ರಿಯರಿಗೆ ಇರಬೇಕಲ್ಲವೆ?

ನಾನು ನಿತ್ಯ ಬೆಳಗ್ಗೆ ಹತ್ತಿರದ ಸಾರ್ವಜನಿಕ ಗ್ರಂಥಾಲಯಕ್ಕೆ ಹೋಗಿಬರುವವ. ಎಂಟೂವರೆ ಗಂಟೆಗೆ ಅದು ತೆರೆಯುವುದೇ ತಡ, ವಾಚಕಪ್ರಿಯರು ದಾಳಿಯಿಡುತ್ತಾರೆ. ಈ ವ್ಯಾಸಂಗಶೀಲ ಗುಣವನ್ನು ಖಂಡಿತ ಮೆಚ್ಚೋಣ. ಆದರೆ ಗ್ರಂಥಾಲಯದಲ್ಲಿ ಕೆಲವು ಓದುಗರು ತೋರುವ ವರ್ತನೆಗಳು ತೀರಾ ಅನಾಗರಿಕವೆನ್ನಿಸುತ್ತವೆಯೆನ್ನದೆ ವಿಧಿಯಿಲ್ಲ. ಪತ್ರಿಕೆ, ಪುಸ್ತಕ, ಮ್ಯಾಗಸಿನ್‌ಗಳ ಪುಟ ತಿರುವಲು ಧಾರಾಳವಾಗಿ ಎಂಜಲಿನ ಬಳಕೆ! ಚಿತ್ರ ವಿಚಿತ್ರ ಓದುಗ ಮಹಾನುಭಾವರಿರುತ್ತಾರೆ. ಅದು ತಮ್ಮ ಸ್ವಂತ ವಸ್ತು ಎನ್ನುವಂತೆ ಪುಟಗಳಲ್ಲಿ ಗೀಚುವುದು, ಅಂಡರ್‌ಲೈನ್ ಮಾಡುವುದು, ಪದಬಂಧ ಬಿಡಿಸುವುದು ಇತ್ಯಾದಿ ಕಸರತ್ತುಗಳು! ಗ್ರಂಥಾಲಯವನ್ನು ದೇವಾಲಯ ಎನ್ನುತ್ತೇವೆ ನಿಜ. ಆದರೆ ಅಲ್ಲಿನ ಟಾಯ್ಲೆಟ್‌ಗಳಲ್ಲೂ ಅಶ್ಲೀಲ ಬರಹಗಳಿರುತ್ತವೆಯಲ್ಲ. ಇದೆಂತಹ ವಿಪರ್ಯಾಸ ನೋಡಿ.

ನಾವು ರಸ್ತೆಗಳನ್ನು ಅಪಹರಿಸುವುದುಂಟು! ಗಾಬರಿಯಾಗಬೇಡಿ. ಇದು ನಿಮ್ಮ ಅನುಭವಕ್ಕೆ ಬಾರದ್ದೇನಲ್ಲ. ಗೃಹಪ್ರವೇಶ, ಮದುವೆ, ಔತಣ, ಬರ್ತ್‌ಡೇ ಪಾರ್ಟಿ ಮುಂತಾದ ಸಂದರ್ಭಗಳಲ್ಲಿ ಆಯಾ ಮಂದಿ ತಮ್ಮ ಮನೆಮಟ್ಟಿಗೆ ಅವನ್ನು ಆಚರಿಸಿಕೊಳ್ಳುವುದು ಸರಿ. ಅದು ಬಿಟ್ಟು ಬೀದಿಯಲ್ಲಿ ಶಾಮಿಯಾನ ಏರಿಸಿ ಸಾರ್ವಜನಿಕರ ಓಡಾಟಕ್ಕೆ ಸಂಚಕಾರ ಒಡ್ಡುವುದು ಯಾವ ನ್ಯಾಯ? ಅಶುಭ ಸಂದರ್ಭಗಳಲ್ಲೂ ನೆರೆಹೊರೆಯವರಿಗೆ ಕನಿಷ್ಠ ಉಪದ್ರವವಾಗದಂತೆ ಜಾಗೃತಿ ವಹಿಸುವುದು ಸಭ್ಯತೆ. ಅಂದಕಾಲತ್ತಲೆ ಅಂದರೆ ಮೂವತ್ತು ನಲವತ್ತು ವರ್ಷಗಳ ಪೂರ್ವದಲ್ಲಿ ರೇಡಿಯೋ ಲಕ್ಸುರಿ. ನಿಮ್ಮ ಮನೇಲಿ ರೇಡಿಯೋ ಜೋರಾಗಿ ಹಾಕೀಪ್ಪ... ನಮ್ಗೂನೂ ಕೇಳ್ಲಿ ಎಂದು ಅಕ್ಕಪಕ್ಕದ ಮನೆಯವರು ಗೋಗರೆಯುತ್ತಿದ್ದರು ಆಗ. ಆದರೆ ಈಗ ಮನೆಗಳು ಒತ್ತೊತ್ತಾಗಿವೆ. ಜನಸಾಂದ್ರತೆಯನ್ನು ಬಣ್ಣಿಸಲಸದಳ. ಟಿ.ವಿ., ರೆಕಾರ್ಡ್ ಪ್ಲೇಯರ್ ಇತ್ಯಾದಿ ವಿದ್ಯುನ್ಮಾನ ಉಪಕರಣಗಳನ್ನು ಬಳಸುವಾಗ ಅವುಗಳು ಪರರಿಗೆ ಹಿಂಸೆಯಾಗದಂತೆ ಎಚ್ಚರವಹಿಸಬೇಕೆನ್ನುವ ಕಾಳಜಿ ಎಷ್ಟು ಮಂದಿಗಿದೆ? ಗದ್ದಲ ಮಾಲಿನ್ಯ ಇದೀಗ ತನ್ನ ಇನ್ನೊಂದು ಅವತಾರವನ್ನು ತಾಳಿದೆ. ಅದೇ ಮೊಬೈಲು! ತಂತ್ರಜ್ಞಾನ ಸದಾ ಆವಿಷ್ಕಾರಗೊಳ್ಳುತ್ತಿರಲಿ! ಅದು ಸದಾ ಸ್ವಾಗತಾರ್ಹವೇ! ಆದರೆ ಅದರ ಜೊತೆ ಜೊತೆಗೆ ನಮ್ಮ ಪ್ರಜ್ಞೆಯೂ ಆರೋಗ್ಯಕರವಾಗಿ ಬೆಳೆದಿರಬೇಕು. ಸಾರ್ವಜನಿಕ ಸ್ಥಳಗಳಲ್ಲಿ ಎಲ್ಲೆಂದರಲ್ಲಿ ಮೊಬೈಲಿನಲ್ಲಿ ಸಂಭಾಷಣೆ ನಡೆಸುವುದರಿಂದ ಆಗುವ ದುಷ್ಪರಿಣಾಮಗಳು ಒಂದೇ ಎರಡೇ? ಆಸುಪಾಸಿನವರಿಗೆ ಕಿರಿಕಿರಿ, ಅವರ ಏಕಾಂತಕ್ಕೆ ಭಂಗ, ವಯಸ್ಸಾದವರಿಗೆ ಮತ್ತು ಕಾಯಿಲೆಯವರಿಗಂತೂ ಬೇಡ ಹಿಂಸೆ! ಟೆಲಿಫೋನ್ ಶೋಧಕ ಗ್ರಹಾಂ ಬೆಲ್ ವೃಥಾ ಏಕಾದರೂ ಈ ಸಲಕರಣೆ ರೂಪಿಸಿದ ಎಂದು ನಿಂದಿಸುವಷ್ಟು ಸಿಟ್ಟಾದರೂ ಅತಿಶಯವಿಲ್ಲವೆನ್ನಿ.

'ಮನೆ ಕಟ್ಟಿ ನೋಡಿ' ಗಾದೆ ಗೊತ್ತೇ ಇದೆಯಲ್ಲ. ಆದರೆ ಅಕ್ಕಪಕ್ಕದವರು ಮನೆ ಕಟ್ಟುತ್ತಿದ್ದಾಗ ನೀವು ಅನುಭವಿಸಿ ನೋಡಿಯೇ ತೀರಬೇಕು. ನಿಜವೆ, ಅಲ್ಪಸ್ವಲ್ಪ ಅನುಸರಿಸಿಕೊಳ್ಳೋಣ. ಕೆಲವೊಮ್ಮೆ ಅಸಹನೀಯ ಅಡೆತಡೆಗಳು ನಮಗೆ ಸವಾಲಾಗುತ್ತವೆ. ಹಗಲಿರುಳೆನ್ನದೆ ಅಗೆಯುವುದು, ಕುಟ್ಟುವುದು, ಬೋರ್‌ವೆಲ್ ಯಂತ್ರದ ಕೊರೆತ ಅವ್ಯಾಹತವಾಗಿ ಸಾಗಿರುತ್ತದೆ. ಎಲ್ಲಿಗಾದರೂ ಗುಳೆಹೋಗಿಬಿಡೋಣ ಎನ್ನುವಷ್ಟು ಬೇಸರವಾಗಿಬಿಡುತ್ತದೆ. ಮನಸ್ಸು ಮಾಡಿದರೆ ಮನೆಕಟ್ಟುವವರು ಅರ್ಧದಷ್ಟು ಮುಜುಗರವನ್ನು ನಿವಾರಿಸಬಹುದಲ್ಲವೇ? ಕ್ಯೂ ಮಧ್ಯೆ ನುಸುಳುವುದು, ಫುಟ್‌ಪಾತ್ ಮೇಲೆ ವಾಹನ ಓಡಿಸುವುದು, ರಸ್ತೆಗಳು ಕೂಡುವಲ್ಲಿ ವಾಹನಗಳನ್ನು ನಿಲ್ಲಿಸುವುದು, ಮೈಕಾಸುರನ ಆರ್ಭಟ, ಕಸವನ್ನು ಮೀಸಲಾದ ತೊಟ್ಟಿಯಲ್ಲಿ ಹಾಕದೆ ಸಿಕ್ಕಲ್ಲಿ ವಿಲೇವಾರಿ ಮಾಡುವುದು, ಸಿಕ್ಕಿದ ಕಡೆ ಉಗಿಯುವುದು, ಮೂತ್ರ ವಿಸರ್ಜಿಸುವುದು – ಇದು ಮುಗಿಯದ ಯಾದಿ.

ತಾವು ಬಾಳಿ ಇತರರನ್ನೂ ಬಾಳಗೊಡುವ ಸಮಷ್ಟಿ ಭಾವ ನಮ್ಮ ಹೃನ್ಮನಗಳಲ್ಲಿ ಬೇರೂರಿದಾಗ ಮಾತ್ರ ನಾವು ಅನುಪಮ ಪೌರರೆನ್ನಿಸಿಕೊಳ್ಳುತ್ತೇವೆ. ಇತರರ ಬಗ್ಗೆ ನಮಗೆ ಎಷ್ಟು ಕಾಳಜಿಯಿರಬೇಕೆನ್ನುವುದನ್ನು ಗಾದೆಯೊಂದು ಹೇಗೆ ಮನೋಜ್ಞವಾಗಿ ಅಭಿವ್ಯಕ್ತಿಸುತ್ತದೆ ಗಮನಿಸಿ :

'ಊರು ಬಿಟ್ಟು ಹೋಗೋರು
ಹೊಲಕ್ಕೆ ಹುಚ್ಚೆಳ್ಳು ಹಾಕಬೇಕು.'


ಬಿಂಡಿಗನವಿಲೆ ಭಗವಾನ್
ಗಣಿತ ಉಪನ್ಯಾಸಕರು, ಶ್ರೀ ಕೊಂಗಾಡಿಯಪ್ಪ ಪದವಿಪೂರ್ವ ಕಾಲೇಜು, ದೊಡ್ಡಬಳ್ಳಾಪುರ - ೫೬೧ ೨೦೩

# ಸಂಸ್ಕೃತಿ ಮತ್ತು ಚಳುವಳಿ ಇವತ್ತಿನ ಸವಾಲುಗಳು

ಡಾ|| ಬಸವರಾಜ ಸಬರದ

ಬಂಡಾಯ ಸಾಹಿತ್ಯ ಸಂಘಟನೆ ಇಪ್ಪತ್ತು ವರ್ಷಗಳನ್ನು ಪೂರ್ಣಗೊಳಿಸಿದ ಸಂದರ್ಭದಲ್ಲಿ, ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಬಂಡಾಯ ಸಾಹಿತ್ಯ ಸಮಾವೇಶ ನಡೆದಿತ್ತು. ಅದೇ ದಿನ, ದಿನಾಂಕ ೧೦-೦೬-೨೦೦೧ರಂದು 'ಪ್ರಜಾವಾಣಿ' ಸಾಪ್ತಾಹಿಕ ಪುರವಣಿಯಲ್ಲಿ ನನ್ನ ಲೇಖನವೊಂದು ಪ್ರಕಟವಾಗಿತ್ತು. ಆ ಲೇಖನದಲ್ಲಿ ನಾನು ಬಂಡಾಯ ಸಂಘಟನೆಯ ಮಿತಿಗಳನ್ನು ಗುರುತಿಸಿದ್ದೆ. ಸಂಘಟನೆ ಎಡವಿದ್ದು ಎಲ್ಲಿ ಎಂದು ಪ್ರಶ್ನಿಸಿಕೊಳ್ಳುತ್ತಲೇ, ಸಂಘಟನೆಗೆ ಸಂಬಂಧಿಸಿದ ಕೆಲವು ಸಂದೇಹಗಳನ್ನು ಆ ಲೇಖನದಲ್ಲಿ ನಮೂದಿಸಿದ್ದೆ. ಬಂಡಾಯದ ಗೆಳೆಯರ ಆತ್ಮಾವಲೋಕನದ ಪ್ರತೀಕವಾಗಿ ಆ ಲೇಖನ ಪ್ರಕಟವಾಗಿತ್ತು. ಈಗ ಬಂಡಾಯ ಸಂಘಟನೆ, ಇಪ್ಪತ್ತೈದು ವರ್ಷಗಳನ್ನು ಪೂರ್ಣಗೊಳಿಸಿ, ಬೆಳ್ಳಿಹಬ್ಬ ಆಚರಿಸಿದ ಈ ಸಂದರ್ಭದಲ್ಲಿಯೂ ಅವೇ ಸವಾಲುಗಳು, ಅವೇ ಸಂದೇಹಗಳು ನನ್ನನ್ನು ಕಾಡುತ್ತಲಿವೆ. ನಾನು ಬಂಡಾಯದ ಒಬ್ಬ ಕಾರ್ಯಕರ್ತನಾಗಿ, ರಾಜ್ಯ ಸಂಚಾಲಕನಾಗಿ ಈ ಇಪ್ಪತ್ತೈದು ವರ್ಷಗಳಲ್ಲಿ ಚಳುವಳಿಯೊಂದಿಗೆ ಗುರುತಿಸಿಕೊಂಡಿದ್ದೇನೆ. ಸಂಘಟನೆಯ ಅನೇಕ ನಿರ್ಣಯಗಳನ್ನು ಸ್ವಾಗತಿಸುತ್ತಲೇ, ಕೆಲವು ಅನುಮಾನಗಳನ್ನು ವ್ಯಕ್ತಪಡಿಸುತ್ತಲೇ ಬಂದಿದ್ದೇನೆ. ನನ್ನಷ್ಟಕ್ಕೆ ನಾನೇ ಕೆಲವು ಮುಖ್ಯಪ್ರಶ್ನೆಗಳನ್ನೆತ್ತಿಕೊಂಡು ಆಲೋಚಿಸಿದ್ದೇನೆ. ಬಂಡಾಯದ ಗೆಳೆಯರ ಹಾಗೂ ಬಂಡಾಯ ಸಾಹಿತ್ಯದ ಸಾಧ್ಯತೆಗಳನ್ನು ಸ್ಪಷ್ಟಪಡಿಸುತ್ತಲೇ ಅದರ ಮಿತಿಗಳನ್ನು ಹೇಳಿದ್ದೇನೆ. ಬಂಡಾಯದ ಕೃತಿಗಳನ್ನು ವಿಮರ್ಶಿಸುವ ಸಂದರ್ಭದಲ್ಲಿ ಅಂತರವನ್ನಿಟ್ಟುಕೊಂಡೇ, ಆ ಕೃತಿಗಳಿಗೆ ನ್ಯಾಯ ಒದಗಿಸಲು ಪ್ರಯತ್ನಿಸಿದ್ದೇನೆ. ನಾನು, ನನ್ನಂತಹ ಅನೇಕ ಗೆಳೆಯರು ಬಂಡಾಯದ ಮೂಲಕವೇ ಬೆಳೆದು ಬಂದಿದ್ದರಿಂದ ನಮಗೆಲ್ಲ ಬಂಡಾಯ ಚಳುವಳಿ, ತಾಯಿಯ ಅಂತಃಕರಣವನ್ನು ನೀಡುವ ಮೂಲ ಸೆಲೆಯಾಗಿದೆ. ಸಂಘಟನೆಯೊಂದಿಗಿನ ನಮ್ಮ ಸಂಬಂಧ, ಅದು ಕರುಳ ಬಳ್ಳಿಯ ಸಂಬಂಧವಾಗಿದೆ. ಹೀಗಾಗಿ ಸಂಘಟನೆಯ ಗೆಳೆಯರನ್ನು ಅನುಮಾನಿಸುವ ಪ್ರಶ್ನೆಯೇ ಹುಟ್ಟುವುದಿಲ್ಲ. ಆದರೆ ಜಾಗತೀಕರಣದ ಈ ತುರ್ತಿನಲ್ಲಿ ಬಂಡಾಯ ಸಂಘಟನೆಯ ಪ್ರಣಾಳಿಕೆಯನ್ನು ಹೊಸರೀತಿಯಲ್ಲಿ ರೂಪಿಸುವುದು ಇಂದಿನ ಅಗತ್ಯವಾಗಿದೆ.

ಸಾಹಿತ್ಯ ಚಳುವಳಿಯೊಂದು ಕಾಲು ಶತಮಾನವನ್ನು ಪೂರ್ಣಗೊಳಿಸಿರುವುದು, ಚಾರಿತ್ರಿಕವಾಗಿ ತುಂಬ ಮುಖ್ಯವಾದ ಸಂಗತಿ. ಸಂಘಟನೆ ಬೆಳ್ಳಿಹಬ್ಬವನ್ನಾಚರಿಸಿದ ಈ ಸಂದರ್ಭದಲ್ಲಿ, ಸಂಘಟನೆಯ ಸಾಧನೆಗಳನ್ನು ಕುರಿತು ಹೇಳಬೇಕಾಗುತ್ತದೆ. ಅದರ ಜತೆಯಲ್ಲಿಯೇ ಪ್ರಸ್ತುತ ಸವಾಲುಗಳನ್ನೆತ್ತಿಕೊಂಡು ಚರ್ಚಿಸಬೇಕಾಗುತ್ತದೆ. ಬಂಡಾಯ ಸಾಹಿತ್ಯಕ್ಕೂ, ಅದರ ಚಳುವಳಿಗೂ ಹಾಗೂ ನಮ್ಮ ಬದುಕಿಗೂ ನೇರ ಸಂಬಂಧವಿದೆ. ಈ ಇಪ್ಪತ್ತೈದು ವರ್ಷಗಳ ಅವಧಿಯಲ್ಲಿ ಅನೇಕ ಬದಲಾವಣೆಗಳಾಗಿವೆ. ಹೊಸನೀರು ಹರಿದಿದೆ. ಇಷ್ಟಕ್ಕೇ ನಾವು ಸಂಭ್ರಮಿಸುವ ಆತುರ ಬೇಡ. ಹಿಂದಿಗಿಂತಲೂ ಇಂದು ಮತೀಯ ಶಕ್ತಿಗಳು ಹೆಚ್ಚು ಸಶಕ್ತವಾಗತೊಡಗಿವೆ. ಕೋಮು ಗಲಭೆಗಳು ಹೆಚ್ಚತೊಡಗಿವೆ. ಹೀಗಾಗಿ ಪ್ರಗತಿಪರ ಸಂಘಟನೆಗಳ ಅನಿವಾರ್ಯತೆ ಹಿಂದೆಂದಿಗಿಂತಲೂ ಹೆಚ್ಚಾಗಿದೆ. ತಾವು ಜಾತ್ಯತೀತರೆಂದು ಹೆಮ್ಮೆಯಿಂದ ಹೇಳಿಕೊಂಡ ಕೆಲವು ರಾಜಕೀಯ ಪಕ್ಷಗಳು, ಅಧಿಕಾರದ ದಾಹದಿಂದ ಮತೀಯ ಪಕ್ಷಗಳೊಂದಿಗೆ ಅಪವಿತ್ರ ಮೈತ್ರಿ ಮಾಡಿಕೊಂಡಿವೆ. ಇಂತಹ ಸಂದರ್ಭದಲ್ಲಿ ಪ್ರಗತಿಪರ ಸಂಘಟನೆಗಳು ಹೆಚ್ಚಿನ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿದೆ.

ಬಂಡಾಯ ಸಾಹಿತ್ಯ ಸಂಘಟನೆ ಪ್ರಾರಂಭವಾದಾಗ ಎಲ್ಲ ಪ್ರಗತಿಪರ ಸಂಘಟನೆಗಳೂ ನಮ್ಮೊಂದಿಗಿದ್ದವು. ದಲಿತ ಸಂಘರ್ಷ ಸಮಿತಿ, ಸಮುದಾಯ ಸಂಘಟನೆ ನಮ್ಮೊಂದಿಗೆ ಜತೆಯಾಗಿಯೇ ಕೆಲಸ ಮಾಡುತ್ತಿದ್ದವು. ರೈತ ಸಂಘಟನೆ, ಕಾರ್ಮಿಕ ಸಂಘಟನೆಗಳು ನಮಗೆ ಬೆನ್ನೆಲುಬಾಗಿದ್ದವು. ಇಂದು ಪರಿಸ್ಥಿತಿ ಬದಲಾಗಿದೆ. ಜಾಗತೀಕರಣದ ತೀವ್ರದಾಳಿಗೆ ಅನೇಕ ಕಾರ್ಖಾನೆಗಳು ಮುಚ್ಚಿಬಿಟ್ಟಿವೆ. ರೈತರು ಸಾಲ ತೀರಿಸಲಾಗದೆ ಹತಾಶೆಗೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ರೈತರು ಬೆಳೆದ ಬೆಳೆಗಳಿಗೆ ಬೆಲೆ ಇಲ್ಲದಂತಾಗಿದೆ. ಕಾರ್ಮಿಕರ ಕೈಗಳಿಗೆ ಕೆಲಸವಿಲ್ಲದಂತಾಗಿದೆ. ಎಲ್ಲ ಕೆಲಸವನ್ನೂ ಯಂತ್ರಗಳೇ ಮಾಡತೊಡಗಿವೆ. ಸರಕು ಸಂಸ್ಕೃತಿಯಲ್ಲಿ ಮನುಷ್ಯನಿಗೆ ಬೆಲೆಯಿಲ್ಲದಂತಾಗಿದೆ. ಕೊಳ್ಳುಬಾಕ ಸಂಸ್ಕೃತಿ ಮಧ್ಯಮ ವರ್ಗದ ಜನತೆಯನ್ನು ನಿದ್ದೆಗೆಡಿಸಿದೆ. ದಲಿತ ಸಂಘರ್ಷ ಸಮಿತಿ ಹೋಳಾಗಿದೆ. ಅಧಿಕಾರಶಾಹಿ ವಿರುದ್ಧ ದನಿಯೆತ್ತಬೇಕಾಗಿದ್ದ ದಲಿತ ಸಂಘಟನೆಗಳು ಎಡ-ಬಲ ಪ್ರದರ್ಶನ ಮಾಡುತ್ತ, ತಮ್ಮ ತಮ್ಮಲ್ಲಿಯೇ ಸಂಘರ್ಷಕ್ಕಿಳಿದಿವೆ.

ಇಂತಹ ಪರಿಸ್ಥಿತಿಯಲ್ಲಿ ಬಂಡಾಯ ಸಂಘಟನೆಯ ಜವಾಬ್ದಾರಿ ಹೆಚ್ಚಿದೆ. ಎಲ್ಲ ಪ್ರಗತಿಪರ ಸಂಘಟನೆಗಳನ್ನೂ ಬೆಸೆಯುವ ಶಕ್ತಿ ಬಂಡಾಯ ಸಂಘಟನೆಗಿದೆ. ಇದೊಂದು ಮಹತ್ವದ ಸಾಂಸ್ಕೃತಿಕ ಸಂಘಟನೆಯಾಗಿ ಇರುವುದರಿಂದ ಇಲ್ಲಿ ಎಲ್ಲ ಪ್ರಗತಿಪರರು, ಶೋಷಿತರು ಈ ಸಂಘಟನೆಯ ಮೂಲಕ ಗುರುತಿಸಿಕೊಳ್ಳಲು ಇಚ್ಛಿಸುತ್ತಾರೆ. ಬದಲಾದ ಈ ಸಂದರ್ಭದಲ್ಲಿ ಬಂಡಾಯ ಸಂಘಟನೆ ಹೊಸ ತಾತ್ವಿಕ ಚಿಂತನೆಗಳನ್ನು ಕಟ್ಟಿಕೊಳ್ಳಬೇಕಾಗಿದೆ. ಜಾಗತೀಕರಣ ತೀವ್ರಗೊಳ್ಳುತ್ತಿರುವ ಇಂದಿನ ಸಂದರ್ಭದಲ್ಲಿ ವರ್ಗ- ವರ್ಗಗಳ ನಡುವೆ ಅಂತರ ಹೆಚ್ಚುತ್ತಲೇ ನಡೆದಿದೆ. ಶ್ರೀಮಂತರು ಅತಿ ಶ್ರೀಮಂತರಾಗಲು ಪೈಪೋಟಿ ನಡೆಸಿದ್ದರೆ, ಬಡವರು ಅತಿ ಬಡವರಾಗುತ್ತಿದ್ದಾರೆ. ಮಧ್ಯಮವರ್ಗ ಅತ್ಯಂತ ಅಪಾಯದ ಸ್ಥಿತಿಯಲ್ಲಿದೆ. ಈ ದೇಶದ ಸಂಪತ್ತಾದ ರೈತರು, ಕಾರ್ಮಿಕರು, ಕುಶಲ ಕರ್ಮಿಗಳು ಕೆಲಸ ಕಳೆದುಕೊಂಡು ಅನಾಥರಾಗುತ್ತಿದ್ದಾರೆ. ಇಂತಹ ಸಂದರ್ಭದಲ್ಲಿ ಪ್ರಗತಿಪರರೆಲ್ಲರೂ ಒಂದುಗೂಡಿ ಸಂಘಟನೆಗಳನ್ನು ತೀವ್ರಗೊಳಿಸುವುದು ಇಂದಿನ ಅನಿವಾರ್ಯತೆಯಾಗಿದೆ.

ಬಂಡಾಯ ಚಳುವಳಿ ಹುಟ್ಟಿಕೊಂಡಾಗ, ದಲಿತ ಸಂಘಟನೆಗಳ ಜತೆಗೆ ಎಲ್ಲ ಎಡಪಂಥೀಯ ಸಂಘಟನೆಗಳು ಬಂಡಾಯದ ಬೆಳವಣಿಗೆಗೆ ಕಾರಣವಾದವು. ಬಂಡಾಯ ಚಳುವಳಿ ಈ ಇಪ್ಪತ್ತೈದು ವರ್ಷಗಳ ಅವಧಿ

ಸಾಹಿತ್ಯ ಚಳುವಳಿಯೊಂದು ಕಾಲು ಶತಮಾನವನ್ನು ಪೂರ್ಣಗೊಳಿಸಿರುವುದು, ಚಾರಿತ್ರಿಕವಾಗಿ ತುಂಬ ಮುಖ್ಯವಾದ ಸಂಗತಿ. ಸಂಘಟನೆ ಬೆಳ್ಳಿಹಬ್ಬವನ್ನಾಚರಿಸಿದ ಈ ಸಂದರ್ಭದಲ್ಲಿ, ಸಂಘಟನೆಯ ಸಾಧನೆಗಳನ್ನು ಕುರಿತು ಹೇಳಬೇಕಾಗುತ್ತದೆ. ಅದರ ಜತೆಯಲ್ಲಿಯೇ ಪ್ರಸ್ತುತ ಸವಾಲುಗಳನ್ನೆತ್ತಿಕೊಂಡು ಚರ್ಚಿಸಬೇಕಾಗುತ್ತದೆ. ಬಂಡಾಯ ಸಾಹಿತ್ಯಕ್ಕೂ ಅದರ ಚಳುವಳಿಗೂ ಹಾಗೂ ನಮ್ಮ ಬದುಕಿಗೂ ನೇರ ಸಂಬಂಧವಿದೆ. ಈ ಇಪ್ಪತ್ತೈದು ವರ್ಷಗಳ ಅವಧಿಯಲ್ಲಿ ಅನೇಕ ಬದಲಾವಣೆಗಳಾಗಿವೆ. ಹೊಸನೀರು ಹರಿದಿದೆ. ಇಷ್ಟಕ್ಕೇ ನಾವು ಸಂಭ್ರಮಿಸುವ ಆತುರ ಬೇಡ. ಹಿಂದಿಗಿಂತಲೂ ಇಂದು ಮತೀಯ ಶಕ್ತಿಗಳು ಹೆಚ್ಚು ಸಶಕ್ತವಾಗತೊಡಗಿವೆ. ಕೋಮುಗಲಭೆಗಳು ಹೆಚ್ಚತೊಡಗಿವೆ. ಹೀಗಾಗಿ ಪ್ರಗತಿಪರ ಸಂಘಟನೆಗಳ ಅನಿವಾರ್ಯತೆ ಹಿಂದೆಂದಿಗಿಂತಲೂ ಹೆಚ್ಚಾಗಿದೆ.

ಯಲ್ಲಿ ಅಲ್ಪಸಂಖ್ಯಾತ, ಹಿಂದುಳಿದ, ದಲಿತವರ್ಗಗಳಲ್ಲಿ ಜಾಗೃತಿಯನ್ನುಂಟುಮಾಡುವುದರ ಜತೆಗೆ, ಎಲ್ಲ ವರ್ಗಗಳಲ್ಲಿನ ಮಹಿಳೆಯರ ಸಮಾನತೆಗಾಗಿ ಹೋರಾಟ ನಡೆಸಿತು. ಅಂದು ತೀವ್ರವಾಗಿದ್ದ ಚಳುವಳಿ ಇಂದು ತಣ್ಣಗಾದಂತೆ ಕಂಡರೂ, ಈ ಚಳುವಳಿಯ ಕೊಡುಗೆ ದೊಡ್ಡದು. ಇಂದು ಸ್ತ್ರೀವಾದಿ ಚಳುವಳಿ ಬೆಳೆದು ನಿಲ್ಲಲು, ಅಹಿಂದ ಚಟುವಟಿಕೆಗಳು ತೀವ್ರಗೊಳ್ಳಲು ಬಂಡಾಯ ಚಳುವಳಿಯೇ ಪ್ರೇರಕ ಶಕ್ತಿಯಾಗಿದೆ. ಬಂಡಾಯ ಚಳುವಳಿಯಲ್ಲಿದ್ದ ಅಲ್ಪಸಂಖ್ಯಾತರು, ಹಿಂದುಳಿದ ವರ್ಗದವರು ಹಾಗೂ ಸ್ತ್ರೀಯರು ಇಂದು ಬೇರೆ ಬೇರೆ ಹೆಸರಿನ ಪ್ರತ್ಯೇಕ ಸಂಘಟನೆಗಳನ್ನು ಕಟ್ಟಿಕೊಂಡು ಹೋರಾಟ ನಡೆಸಿದ್ದಾರೆ. ಇಂದು ಜಿಲ್ಲೆ ಜಿಲ್ಲೆಗಳಲ್ಲಿ ನಡೆಯುತ್ತಿರುವ ಅಹಿಂದ ಸಮಾವೇಶಗಳು, ಸ್ತ್ರೀವಾದಿ ಸಮಾವೇಶಗಳು, ಬಂಡಾಯದಿಂದಲೇ ಹುಟ್ಟಿದವುಗಳಾಗಿವೆ. ಹೀಗಾಗಿ ಬಂಡಾಯದ ಮೂಲ ಸಂಘಟನೆಯ ಚಟುವಟಿಕೆಗಳು ಕಡಿಮೆಯಾಗಿ, ಈ ಹೊಸ ಸಂಘಟನೆಗಳ ಮೂಲಕ ಹೊಸ ರೂಪ ಪಡೆದಿವೆ.

ಇಂದು ಸ್ತ್ರೀವಾದಿ ಚಳುವಳಿ ತೀವ್ರಗೊಂಡಿದೆ. ಹಿಂದುಳಿದ ವರ್ಗದ ಜನತೆಯಲ್ಲಿ ಜಾಗೃತಿ ಮೂಡಿದೆ; ಅಲ್ಪಸಂಖ್ಯಾತರಲ್ಲಿ ಧೈರ್ಯ ಮೂಡಿದೆ. ಇದಕ್ಕೆಲ್ಲ ಬಂಡಾಯ ಸಂಘಟನೆ ಪ್ರೇರಣೆ ನೀಡಿದೆ. ಹಿಂದೆ ಒಂದೇ ಇದ್ದ ಬಂಡಾಯ ಚಳುವಳಿ ಇಂದು ಅನೇಕ ರೂಪಗಳನ್ನು ಪಡೆದು ಹೋರಾಟವನ್ನು ಮುಂದುವರೆಸಿದೆ. ಇದು ಬಂಡಾಯದ ಸಾಧನೆಯೆಂದು ಹೆಮ್ಮೆ ಪಡಬೇಕೇ ಹೊರತು, ಚಳುವಳಿ ತಣ್ಣಗಾಯಿತೆಂದು ನಿರಾಶೆಗೊಳ್ಳಬೇಕಾಗಿಲ್ಲ. ಈ ಎಲ್ಲ ಹೊಸ ಚಳುವಳಿಗಳನ್ನು ಬೆಳೆಸುತ್ತಲೇ ಬಂಡಾಯ ಸಂಘಟನೆ ಹೊಸ ತಾತ್ವಿಕ ಪ್ರಣಾಳಿಕೆಯನ್ನು ಹೊಂದುವುದು ಇಂದಿನ ಅನಿವಾರ್ಯತೆಯಾಗಿದೆ.

ಸಾಹಿತ್ಯಕ್ಕೂ ಚಳುವಳಿಗೂ ಸಂಬಂಧವಿದೆ. ಸಾಹಿತ್ಯದಿಂದಲೇ ಸಮಾಜ ಬದಲಾವಣೆಯಾಗುತ್ತದೆ ಎಂಬುದು ಒಂದು ಅತಿರೇಕವಾದರೆ, ಸಾಹಿತ್ಯದಿಂದ ಸಮಾಜ ಬದಲಾವಣೆ ಅಸಾಧ್ಯವೆಂಬುದು ಮತ್ತೊಂದು ಅತಿರೇಕ. ಈ ಎರಡು ಅತಿರೇಕಗಳ ನಡುವೆ ಸತ್ಯದ ಕೆಲವು ಮುಖಗಳು ಕಾಣಿಸಿಕೊಳ್ಳುತ್ತವೆ. ಸಾಹಿತ್ಯ ಕೃತಿಯೊಂದು ತನ್ನಷ್ಟಕ್ಕೆ ತಾನು ಪರಿಪೂರ್ಣವಲ್ಲ. ಹೀಗಾಗಿ ಯಾವುದೇ ಸಾಹಿತ್ಯಕೃತಿಯೊಂದರಿಂದಲೇ ಕ್ರಾಂತಿ ಸಾಧ್ಯವಾಗುವುದಿಲ್ಲ. ಹಾಗೆಂದಾಕ್ಷಣ ಸಾಹಿತ್ಯ ನಿರುಪಯೋಗವಾದದ್ದೆಂದು ಅರ್ಥವಲ್ಲ. ಸಾಹಿತ್ಯಕ ಪಠ್ಯವು ಸಾಂಸ್ಕೃತಿಕ ಪಠ್ಯವಾಗಿ ಜನಸಮುದಾಯದಲ್ಲಿ ಸೇರಿದಾಗ, ಖಂಡಿತ ಜನಮನದ ಪರಿವರ್ತನೆಯಾಗುತ್ತದೆ. ಆಗ ಸಮಾಜದಲ್ಲಿ ಬದಲಾವಣೆ ಸಾಧ್ಯವಾಗುತ್ತದೆ. ಸಾಹಿತ್ಯಕೃತಿ ಯಾವುದೇ ಕಾಲದಲ್ಲಿ ರಚನೆಯಾಗಿರಲಿ, ಅದು ಆಯಾ ಕಾಲದ ಹೊಸ ಓದನ್ನು ಅವಲಂಬಿಸಿರುತ್ತದೆ. ಹತ್ತನೇ ಶತಮಾನದ ಕೃತಿಯೊಂದನ್ನು, ಇಪ್ಪತ್ತೊಂದನೇ ಶತಮಾನದಲ್ಲಿ ಓದುವಾಗ ಆ ಕೃತಿ ಪ್ರಸ್ತುತ ಸವಾಲುಗಳಿಗೆ ಹೇಗೆ ಸ್ಪಂದಿಸುತ್ತದೆ ಎಂಬುದು ಬಹುಮುಖ್ಯ. ಇಂತಹ ಸ್ಪಂದನ ಕ್ರಿಯೆಗೆ ಆ ಕೃತಿಯ ಹೊಸ ಓದು, ಹೊಸ ವ್ಯಾಖ್ಯಾನ ಬಹುಮುಖ್ಯವಾಗುತ್ತದೆ. ಇದಾಗದಿದ್ದರೆ ಅದು ಎಷ್ಟೇ ಮಹತ್ವದ ಕೃತಿಯಾಗಿದ್ದರೂ ಅಂದಂದಿನ ವರ್ತಮಾನಕ್ಕೆ ಸ್ಪಂದಿಸದೇ ಹೋಗುತ್ತದೆ. ಇದಕ್ಕೆ ಸಂಬಂಧಿಸಿದಂತೆ ಪಾಶ್ಚಾತ್ಯ ವಿಮರ್ಶಕರು ಗಂಭೀರವಾಗಿ ಚಿಂತಿಸಿದ್ದಾರೆ.

## ಜ್ಞಾನೋದಯ

ಬುದ್ಧ ಓದಿದ  
ಸಕಲ ಶಾಸ್ತ್ರಗಳನ್ನು  
ಸಿಗಲಿಲ್ಲ ಏನು  
ಆಮೇಲೆ ಓದತೊಡಗಿದ  
ಕಣಿವೆ ಬೆಟ್ಟ  
ಜೀವಸಂಕುಲದ ಉಸಿರಾಟ  
ನದಿ ಜಲಪಾತ  
ಆಕಾಶದ ಮೌನ  
ನೆಲದ ಮಾತು  
ಆಗ ಉದಯವಾಯಿತು  
ವಿಶ್ವನಿಯಮಗಳ  
ಜ್ಞಾನ

■ ಬಸವರಾಜ ವಕ್ಕುಂದ  
೧೨/೫, ವಸ್ತ್ರದ ಬಿಲ್ಡಿಂಗ್, ಬಾಲಬಳಗ ಎದುರು, ಮಹಿಷಿ ರಸ್ತೆ, ಮಾಳಮಡ್ಡಿ, ಧಾರವಾಡ - ೭

ಒಂದು ಕೃತಿಯನ್ನು ಓದಿದಾಗ ಅದು ತುಂಬ ಪರಿಣಾಮ ಬೀರಿತು ಎನ್ನುತ್ತೇವೆ. ಆದರೆ ಅದೇ ಸಮಯದಲ್ಲಿ ಅದೇ ಕೃತಿ ಇನ್ನೊಬ್ಬ ಓದುಗನಿಗೆ ಪರಿಣಾಮ ಬೀರಿರುವುದಿಲ್ಲ. ಅಂದರೆ ಪರಿಣಾಮ ಬೀರುವ ಗುಣ ಕೇವಲ ಕೃತಿಯಲ್ಲಿದೆಯೆಂಬುದು ಸುಳ್ಳು. ಹಾಗಾದರೆ ಈ ಗುಣ ಓದುಗನಲ್ಲಿದೆಯೆ, ಎಂದು ಪ್ರಶ್ನಿಸಿಕೊಂಡಾಗ ಆಗಲೂ ಉತ್ತರ ಸಿಗುವುದಿಲ್ಲ. ಏಕೆಂದರೆ ಒಬ್ಬ ಓದುಗನಿಗೆ ಒಂದು ಕೃತಿ ಪರಿಣಾಮ ಬೀರಿದ ಪ್ರಮಾಣ, ಇನ್ನೊಬ್ಬ ಓದುಗನಿಗೆ ಹೋಲಿಸಿ ನೋಡಿದಾಗ ಒಂದೇ ರೀತಿಯಾಗಿರುವುದಿಲ್ಲ. ಅಂದರೆ ಪ್ರಭಾವ ಅಥವಾ ಪರಿಣಾಮವೆಂಬುದು ಕೃತಿಯಲ್ಲಿ ಅಥವಾ ಓದುಗನಲ್ಲಿರದೆ, ಅದು ಓದುವ ಪ್ರಕ್ರಿಯೆಯಲ್ಲಿರುತ್ತದೆಂದು ಇಜರ್ ಹೇಳುತ್ತಾನೆ. ಅರ್ಥಗಳು ಕೃತಿಯಲ್ಲಿ ಅಡಗಿರುವುದಿಲ್ಲ. ಅಲ್ಲಿ ಕೇವಲ ಪದಗಳಿರುತ್ತವೆ. ಆ ಪದಗಳ ಅರ್ಥಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ, ಬೇರೆ ಬೇರೆ ಕಾಲಘಟ್ಟಗಳಲ್ಲಿ ಅಂದಂದು ನಡೆಯುವ ಓದಿನ ಪ್ರಕ್ರಿಯೆಗಳ ಮುಖಾಂತರ ಕಂಡುಕೊಳ್ಳಬೇಕಾಗುತ್ತದೆ.




"ಪದವ ಹೇಳಬಹುದಲ್ಲದೆ ಪದಾರ್ಥವ ಹೇಳಬಹುದೆ ಅಯ್ಯಾ ?" ಎಂದು ಹೇಳಿರುವ ಹನ್ನೆರಡನೇ ಶತಮಾನದ ವಚನಕಾರ ಅಲ್ಲಮಪ್ರಭುವಿನ ಮಾತೂ ಕೂಡ ಇದನ್ನೇ ಧ್ವನಿಸುತ್ತದೆ. ಒಂದು ಕೃತಿ ಪದಗಳನ್ನು ಕೊಡಬಹುದೇ ಹೊರತು, ಪದಾರ್ಥಗಳನ್ನಲ್ಲ. ತನಗೆ ಬೇಕಾದ ಪದಾರ್ಥಗಳನ್ನು ಓದುಗ ಕಂಡುಕೊಳ್ಳುತ್ತಾ ಹೋಗುತ್ತಾನೆ. ಈ ಪದಾರ್ಥಗಳನ್ನು ಅಂದರೆ ಪದದ ಅರ್ಥಗಳನ್ನು ಕಂಡುಕೊಳ್ಳಲು ಕೃತಿಯ ಹೊಸ ಓದು ಬಹುಮುಖ್ಯವಾಗುತ್ತದೆ. ಆದ್ದರಿಂದಲೇ ಕೃತಿಗೂ ಮತ್ತು ಓದುಗನಿಗೂ ಇಜರ್ ಸಮಾನ ಮಹತ್ವ ಕೊಡುತ್ತಾನೆ. ಆತ ಎರಡು ರೀತಿಯ ಓದುಗರನ್ನು ಕುರಿತು ಮಾತನಾಡುತ್ತಾನೆ. ಒಬ್ಬ ವಿವಕ್ಷಿತ ಓದುಗನಾದರೆ, ಇನ್ನೊಬ್ಬ ವಾಸ್ತವ ಓದುಗ. ವಿವಕ್ಷಿತ ಓದುಗನನ್ನು ಕೃತಿಯೇ ಕರೆದುಕೊಂಡುಹೋದರೆ, ವಾಸ್ತವ ಓದುಗನ ಹಿಂದೆ ಕೃತಿ ಹೋಗುತ್ತದೆ. ಕೃತಿ ಮುಂದೆ ಹೋಗಲಿ, ಅಥವಾ ಹಿಂದೆ ಹೋಗಲಿ ಕೃತಿಯನ್ನು ಅರ್ಥೈಸುವ ಸಂದರ್ಭ ಹಾಗೂ ಅಲ್ಲಿಯ ದೃಷ್ಟಿಕೋನ ಬಹುಮುಖ್ಯವಾಗಿರುತ್ತದೆ. ಕೃತಿಯನ್ನು ಗ್ರಹಿಸುವ ವಿಷಯಕ್ಕೆ ಸಂಬಂಧಿಸಿದಂತೆ ಇಜರ್ ಬಹುಮಹತ್ವದ ಮಾತನ್ನು ಹೇಳುತ್ತಾನೆ.

ಇಜರ್ ಹೇಳುವಂತೆ, ಒಂದು ಕೃತಿಯನ್ನು ಇಡಿಯಾಗಿ ಗ್ರಹಿಸುವುದು ಸಾಧ್ಯವೇ ಇಲ್ಲ. ಕೃತಿಯ ಗ್ರಹಿಕೆಯಲ್ಲಿ ಓದುಗರ ದೃಷ್ಟಿಕೋನಗಳು ಕಾಲದಿಂದ ಕಾಲಕ್ಕೆ ಹಾಗೂ ಓದುಗನಿಂದ ಓದುಗನಿಗೆ ಭಿನ್ನವಾಗುತ್ತಾ ಹೋಗುತ್ತವೆ. ಗ್ರಹಿಕೆಗಳು ಸದಾ ಬದಲಾಗುತ್ತಲೇ ಇರುತ್ತವೆ. ಒಂದು ಕೃತಿಯ ಪ್ರಾರಂಭದಲ್ಲಿ ಕಾಣಿಸಿಕೊಳ್ಳುವ ಖಳನಾಯಕ ಬರಬರುತ್ತ ಓದುಗನಿಗೆ ಹತ್ತಿರವಾಗುತ್ತಾನೆ. ಆತನಲ್ಲಿರುವ ಮಾನವೀಯತೆಯ – ಅಂತಃಕರಣದ ಪ್ರಸಂಗಗಳು ಕೃತಿಯ ಕೊನೆಯಲ್ಲಿ ಪ್ರಕಟವಾದಾಗ, ಆತನ ಬಗೆಗೆ ಪ್ರಾರಂಭದಲ್ಲಿ ಓದುಗನಲ್ಲಿದ್ದ ಗ್ರಹಿಕೆ ನಂತರದಲ್ಲಿ ಬದಲಾಗುತ್ತ ಹೋಗುತ್ತದೆ. ಕೃತಿ ಮತ್ತು ಓದುಗ ಇವರಲ್ಲಿ ಯಾರನ್ನು ಯಾರು ಅಂಕೆಯಲ್ಲಿಡುತ್ತಾರೆಂಬ ಪ್ರಶ್ನೆಗೆ ಇಜರ್, ಇಬ್ಬರೂ ಎಂದು ಉತ್ತರಿಸುತ್ತಾನೆ. ಆದುದರಿಂದ ಕೃತಿಯಷ್ಟೇ ಓದುಗ ಮುಖ್ಯವಾಗುತ್ತಾನೆ. ಈ ಸತ್ಯವನ್ನರಿತಾಗ ಕೃತಿಯೊಂದರ ಮಿತಿ ಅರ್ಥವಾಗುತ್ತದೆ, ಅಲ್ಲಮ ಹೇಳಿದ ಪದಾರ್ಥದ ಪರಿಕಲ್ಪನೆ ಸ್ಪಷ್ಟವಾಗುತ್ತದೆ.

ನಮ್ಮ ದೇಶದ ರಾಮಾಯಣ-ಮಹಾಭಾರತ ಕೃತಿಗಳು ಧಾರ್ಮಿಕ, ಸಾಹಿತ್ಯಕ ಪಠ್ಯಗಳಾಗಿರುವುದರ

ಜತೆಗೆ ಸಾಂಸ್ಕೃತಿಕ ಪಠ್ಯಗಳೂ ಆಗಿವೆ. ಕೋಮುವಾದಿಗಳು, ಸಂಪ್ರದಾಯವಾದಿಗಳು, ಇಂತಹ ಪಠ್ಯಗಳನ್ನು ತಪ್ಪಾಗಿ ಅರ್ಥೈಸಿ ಜನಸಮುದಾಯದ ಮುಗ್ಧತೆ ಹಾಗೂ ಮೌಢ್ಯತೆಗಳ ಮೂಲಕ ತಮ್ಮ ಅಧಿಕಾರ ಸ್ಥಾಪಿಸ ತೊಡಗಿವೆ. ಈ ದೇಶದಲ್ಲಿ ಅಕ್ಷರಸ್ಥರು ಕಡಿಮೆ, ವಿಚಾರವಂತರು ಇನ್ನೂ ಕಡಿಮೆ. ಇಂತಹ ಅಸಂಖ್ಯಾತ ಜನಸಮುದಾಯದ ಮನಸ್ಸನ್ನು ಮುಟ್ಟಲು ಸಾಧ್ಯವಾಗಿರುವುದು ಇಲ್ಲಿಯ ಆಚಾರಿಗಳಿಗೆ, ಮುಲ್ಲಾಗಳಿಗೆ, ಜ್ಯೋತಿಷಿಗಳಿಗೆ, ಸ್ವಾಮಿಗಳಿಗೆ ಹೊರತು ಪ್ರಗತಿಪರರಿಗೆ, ಚಿಂತಕರಿಗೆ ಅಲ್ಲವೆಂಬ ಸತ್ಯವನ್ನು ಮೊದಲು ಅರಿಯಬೇಕು. ಈ ಸತ್ಯವನ್ನು ನಮ್ಮ ಪ್ರಗತಿಪರ ಸಂಘಟನೆಗಳು ಗಂಭೀರವಾಗಿ ತೆಗೆದುಕೊಳ್ಳಲಿಲ್ಲ, ಹೊಸ ಸಾಂಸ್ಕೃತಿಕ ಪಠ್ಯಗಳನ್ನು ಸಿದ್ಧಪಡಿಸಿ ಜನಸಮುದಾಯವನ್ನು ತಲುಪಲಿಲ್ಲ. ಜನಮನದಲ್ಲಿ ಈಗಾಗಲೇ ಬೇರುಬಿಟ್ಟಿರುವ ಧಾರ್ಮಿಕ, ಸಾಂಸ್ಕೃತಿಕ ನಂಬಿಕೆಗಳು ಎಂತಹವು? ಅಲ್ಲಿಯ ಜನವಿರೋಧಿ ನಿಲುವುಗಳನ್ನು ತಿಳಿಸಲು ನಾವು ಏನು ಮಾಡಬೇಕು? ಎಂಬಂತಹ ಪ್ರಶ್ನೆಗಳು ಇಲ್ಲಿಯ ಎಡ ಪಂಥೀಯ ಚಳುವಳಿಗಳ ಮುಖ್ಯ ಚಿಂತನೆಯಾಗಬೇಕಾಗಿತ್ತು; ಅದಕ್ಕಾಗಿ ಪರ್ಯಾಯಮಾರ್ಗವನ್ನು ಕಂಡುಕೊಳ್ಳಬೇಕಾಗಿತ್ತು. ಆದರೆ ಅಂತಹ ಪ್ರಯತ್ನಗಳು ಹೆಚ್ಚಾಗಿ ನಡೆಯಲಿಲ್ಲ. ಈ ನಿಟ್ಟಿನಲ್ಲಿ ಬಂಡಾಯ ಲೇಖಕರು ಹೊಸ ಓದನ್ನು, ಹೊಸ ವ್ಯಾಖ್ಯಾನವನ್ನು ಪ್ರಾರಂಭಿಸಿರುವುದು ಸ್ವಾಗತಾರ್ಹ. ಆದರೆ ಅವರ ಹೊಸ ವ್ಯಾಖ್ಯಾನಗಳು ಸಾಂಸ್ಕೃತಿಕ ಪಠ್ಯಗಳಾಗಿ ಜನಪ್ರಿಯಗೊಳ್ಳುತ್ತಿಲ್ಲ. ಈ ವಿಷಯದ ಬಗೆಗೆ ನಾವಿಂದು ಗಂಭೀರವಾಗಿ ಚಿಂತಿಸಬೇಕಾಗಿದೆ. ಬರಗೂರು ರಾಮಚಂದ್ರಪ್ಪನವರು ರಾಮಾಯಣ-ಮಹಾಭಾರತ ಕೃತಿಗಳಿಗೆ ಸಂಬಂಧಿಸಿದಂತೆ ಹೊಸ ಓದನ್ನು ಕಟ್ಟಿ ಕೊಟ್ಟಿದ್ದಾರೆ, ರಂಜಾನ ದರ್ಗಾ ಅವರು ವಚನಗಳಿಗೆ ಹೊಸ ವ್ಯಾಖ್ಯಾನ ನೀಡಿದ್ದಾರೆ, ಹಿ. ಶಿ. ರಾಮಚಂದ್ರೇಗೌಡರು ಜಾನಪದವನ್ನು ವರ್ತಮಾನದ ತುರ್ತಿನಲ್ಲಿ ನೋಡುವುದು ಹೇಗೆಂದು ತಿಳಿಸಿದ್ದಾರೆ, ರಹಮತ್ ತರೀಕೆರೆಯವರು ಸೂಫಿ ಸಂತರನ್ನು ಇವತ್ತಿನ ಸಂದರ್ಭದಲ್ಲಿ ಹೇಗೆ ಅರ್ಥೈಸಬೇಕೆಂದು ವಿವರಿಸಿದ್ದಾರೆ. ಬಂಡಾಯದ ಗೆಳೆಯರ ಇಂತಹ ಅನೇಕ ಪ್ರಯತ್ನಗಳು ಧಾರ್ಮಿಕ, ಸಾಹಿತ್ಯಕ ಪಠ್ಯಗಳನ್ನು ಮುರಿದು ಕಟ್ಟಲು, ಹೊಸ ಸಾಂಸ್ಕೃತಿಕ ಪಠ್ಯಗಳನ್ನು ಸಿದ್ಧಪಡಿಸಿಕೊಳ್ಳಲು ಸಹಾಯಕವಾಗುತ್ತವೆ. ಎಡ ಪಂಥೀಯ ಹಾಗೂ ಸಮಾಜವಾದಿ ರಾಜಕೀಯ ಪಕ್ಷಗಳು ಬಂಡಾಯ ಸಾಹಿತ್ಯ ಸಂಘಟನೆಯ ಇಂತಹ ರಚನಾತ್ಮಕ ಪ್ರಯತ್ನಗಳನ್ನು ಜನಸಮುದಾಯದೆದುರು ಕೊಂಡೊಯ್ದಾಗ ಹೊಸ ಸಾಂಸ್ಕೃತಿಕ ಪಠ್ಯಗಳ ಪ್ರಸಾರ ಸುಲಭಸಾಧ್ಯವಾಗುತ್ತದೆ. ದೇವರ ಅಸ್ತಿತ್ವವನ್ನು ಅಲ್ಲಗಳೆಯುವುದರಿಂದ, ಧಾರ್ಮಿಕ ನಂಬಿಕೆಗಳನ್ನು ವಿರೋಧಿಸುವುದರಿಂದ, ಭಕ್ತಿಯ ಸಾಧ್ಯತೆಗಳನ್ನು ನಿರ್ಲಕ್ಷಿಸುವುದರಿಂದ ಏನನ್ನೂ ಸಾಧಿಸಿದಂತಾಗುವುದಿಲ್ಲ. ಇವೆಲ್ಲವುಗಳನ್ನು ಇಟ್ಟು ಕೊಂಡೇ ಹೊಸ ವ್ಯಾಖ್ಯಾನ ಮಾಡುವುದರಿಂದ ಸಮುದಾಯ ನಮ್ಮ ಕಡೆ ಬರುತ್ತದೆ, ನಮ್ಮನ್ನು ನಂಬುತ್ತದೆ. ಜನಸಮುದಾಯದ ನಂಬಿಕೆ ಗಳಿಸಲಾರದೆ ಇಲ್ಲಿ ಏನನ್ನೂ ಸಾಧಿಸಲಿಕ್ಕಾಗುವುದಿಲ್ಲ; ಇದನ್ನರಿತು ಕೊಂಡ ಹಿಂದೂ ಮೂಲಭೂತವಾದಿಗಳು ಹಾಗೂ ಕೋಮುವಾದಿ ರಾಜಕೀಯ ಪಕ್ಷಗಳು ತಮ್ಮ ಪಟ್ಟುಗಳನ್ನು ಬಿಟ್ಟುಕೊಡದೆ ಅಧಿಕಾರ ಹಿಡಿಯಲು ಪ್ರಯತ್ನಿಸುತ್ತಿದ್ದಾರೆ. ಇವರ ಸ್ವಾರ್ಥವನ್ನು, ಇವರಿಗಿರುವ ಅಧಿಕಾರದ ದಾಹವನ್ನು ಜನರೆದುರು ಸ್ಪಷ್ಟಪಡಿಸಬೇಕಾದರೆ, ನಾವು ಸಾಂಸ್ಕೃತಿಕ ಪಠ್ಯಗಳೊಂದಿಗೆ ಹೋಗಬೇಕಾಗುತ್ತದೆ.

ರಾಮ ವಾಲ್ಮೀಕಿ ಕವಿಯ ಕೂಸು. ರಾಮ ಎಲ್ಲಿ ಹುಟ್ಟಿದನೆಂಬುದು ವಾಲ್ಮೀಕಿಗೇ ಗೊತ್ತಿಲ್ಲ. ರಾಮನನ್ನು ಬಿಡಿ, ಇಂದು ನಾವೆಲ್ಲಾ ಇದ್ದೇವಲ್ಲಾ, ನಾವು ಯಾವ ಸ್ಥಳದಲ್ಲಿ ಹುಟ್ಟಿದ್ದೇವೆಂಬುದು ನೆನಪಾಗುತ್ತದೆಯೇ? ನಮ್ಮ ಮನೆಯಲ್ಲಿಯೇ ನಾವು ಜನಿಸಿದ್ದರೂ ಅದರಲ್ಲಿ ವಿಶೇಷವಾದ ಜಾಗ ಎಲ್ಲಿ? ಅಡುಗೆಮನೆಯಲ್ಲೋ, ಪಡಸಾಲೆಯಲ್ಲೋ ಅಥವಾ ಬಚ್ಚಲುಮನೆಯ ಪಕ್ಕದಲ್ಲೋ ಎಲ್ಲೆಂಬುದನ್ನು ಕೂಡಲೇ ಹೇಳೆಂದರೆ ಹೇಳಲಿಕ್ಕಾಗುವುದಿಲ್ಲ. ಇನ್ನು ನಮ್ಮ ತಂದೆ, ನಮ್ಮ ತಾತ-ಮುತ್ತಾತ ಯಾವ ಸ್ಥಳದಲ್ಲಿ ಹುಟ್ಟಿದ್ದರೆಂಬುದು ನಮಗ್ಯಾರಿಗೂ ಗೊತ್ತಿಲ್ಲ. ಈ ಹುಟ್ಟಿನ ಸ್ಥಳದ ಸಮಸ್ಯೆ ಇಷ್ಟೊಂದು ಗೋಜಲಾಗಿರುವಾಗ, ರಾಮ ಇಲ್ಲಿಯೇ ಹುಟ್ಟಿದ್ದಾನೆಂದು ಕೈಯಿಟ್ಟು ತೋರಿಸುತ್ತಾರಲ್ಲ ಇವರಿಗೇನೆನ್ನಬೇಕು? ಇಂತಹ ಅನೇಕ ಸಾಂಸ್ಕೃತಿಕ ಸತ್ಯಗಳನ್ನು ಜನತೆಯ ಎದುರು ಸ್ಪಷ್ಟಪಡಿಸುವುದು ಪ್ರಗತಿಪರ ಸಂಘಟನೆಗಳ ಮೊದಲ ಪ್ರಯತ್ನವಾಗಿದೆ. ಅಯೋಧ್ಯೆಯಲ್ಲಿ ನಡೆದ ದಾರುಣ ಘಟನೆ ಇಡೀ ದೇಶವನ್ನೇ ತಲೆ ತಗ್ಗಿಸುವಂತೆ ಮಾಡಿದೆ. ಮಂದಿರ ನಿರ್ಮಾಣಕ್ಕಾಗಿ ಮಸೀದಿಯನ್ನು ಕೆಡವಿದ್ದು ಕೋಮುದಳ್ಳುರಿಗೆ ಪ್ರಮುಖ ಕಾರಣವಾಗಿದೆ. ಅಯೋಧ್ಯೆಯಲ್ಲಿ ಅಂದು ನಡೆದ ಇಂತಹ ಕರಾಳ ಕೃತ್ಯಗಳು, ಈಗ ದತ್ತಪೀಠದ ಹೆಸರಿನಲ್ಲಿ ಚಿಕ್ಕಮಗಳೂರಿನಲ್ಲಿ, ಶರೀಫರ ಶಿಶುನಾಳದಲ್ಲಿ ನಡೆಯಲು ಹೊಂಚುಹಾಕಿವೆ. ಕೋಮುಗಲಭೆಯನ್ನು ತಪ್ಪಿಸುವುದು ಈ ದೇಶದ ಪ್ರಜೆಗಳ ಕರ್ತವ್ಯವಾಗಿದೆ.

ವಾಲ್ಮೀಕಿ ರಾಮಾಯಣದ ಜತೆಗೆ ಅನೇಕ ರಾಮಾಯಣಗಳು ಹುಟ್ಟಿಕೊಂಡಿವೆ. ಜಾನಪದ ಚಿತ್ರಪಟ ರಾಮಾಯಣ, ತೆಲುಗಿನ ಜಾನಕಮ್ಮನ ರಾಮಾಯಣ ಬಹುಮುಖ್ಯವಾದ ಸಾಂಸ್ಕೃತಿಕ ಪಠ್ಯಗಳಾಗಿವೆ. ಜಾನಕಮ್ಮನ ರಾಮಾಯಣದಲ್ಲಿ ರಾವಣ ನಾಯಕ. ಶಿವಭಕ್ತನ ಶಕ್ತಿ ಸಾಧ್ಯತೆಗಳನ್ನು ಹೇಳುವ ಇಂತಹ ಕಥಾನಕಗಳು ಜನರ ಮನಸ್ಸಿನ ಮೇಲೆ ತೀವ್ರ ಪರಿಣಾಮವುಂಟುಮಾಡುವ ಸಾಮರ್ಥ್ಯ ಹೊಂದಿವೆ. ಒಂದೇ ಪಠ್ಯವನ್ನಿಟ್ಟುಕೊಂಡು, ಒಂದೇ ಧರ್ಮದ ಮಾತು ಹೇಳಿ ಜನತೆಯನ್ನು ದಾರಿ ತಪ್ಪಿಸುತ್ತಿರುವ ಮತೀಯ ಶಕ್ತಿಗಳನ್ನು ಬಗ್ಗುಬಡಿಯಲು ಬಹುಮುಖಿ ಸಾಂಸ್ಕೃತಿಕ ಪಠ್ಯಗಳು ಬಹುಮುಖ್ಯವಾಗುತ್ತವೆ.

ಚಾತುರ್ವರ್ಣ್ಯ ವ್ಯವಸ್ಥೆ ಈ ದೇಶದಲ್ಲಿ ಅನೇಕ ಅಸಮಾನತೆಗಳ ಹುಟ್ಟಿಗೆ ಕಾರಣವಾಗಿದೆ. ಜಾತಿ-ಜಾತಿಗಳಲ್ಲಿ, ವರ್ಗ-ವರ್ಗಗಳಲ್ಲಿ, ಸ್ತ್ರೀ-ಪುರುಷರಲ್ಲಿ ಅಸಮಾನತೆ ಸಹಜವೆಂಬಂತೆ ಬೆಳೆದುನಿಂತಿದೆ. ಎರಡು ಲಿಂಗಗಳಲ್ಲಿ, ಎರಡು ಜಾತಿಗಳಲ್ಲಿ ತಾರತಮ್ಯನೀತಿ ಹುಟ್ಟುಹಾಕಿದ ಈ ವ್ಯವಸ್ಥೆ ಒಂದೇ ವ್ಯಕ್ತಿಯಲ್ಲಿಯೇ

## ಷೇಕ್ಸ್‌ಪಿಯರ್ ಹೇಳಿದ್ದು

ಷೇಕ್ಸ್‌ಪಿಯರ್ ಹೇಳಿದ್ದು ನಿಜ ಜಗವೊಂದು ನಾಟಕರಂಗ
ಎಲ್ಲರೂ ಇಲ್ಲಿ ಪಾತ್ರಧಾರಿಗಳು
ಆಡುತ್ತಲಿರಬೇಕು ಬಣ್ಣ ಕಳಚುವವರೆಗೆ
ನೋಡುತ್ತಲಿರಬೇಕು ತಾವೂ ಪ್ರೇಕ್ಷಕರಾಗಿ

ಪ್ರತಿಯೊಬ್ಬರೂ ಹುಡುಕುವುದು ತನ್ನ ಕನಸಿಗೆ ತಕ್ಕ ಪಾತ್ರ
ತನ್ನ ನಾಟಕಕ್ಕೆ ತಾನೇ ನಾಯಕ ಅದಕ್ಕೆ ತಕ್ಕಂತ ಸೂತ್ರ
ವೇಷಭೂಷಣ ಬಣ್ಣ ಸಂಭಾಷಣ ಪೂರಕ ಪಾತ್ರವರ್ಗ
ಬೇಡವೆಂದರೂ ಎದುರುಗೊಂಡು ತರುಬಿನಿಲ್ಲುವ ಖಳರ ದುರ್ಗ

ತಾನಿಷ್ಟಪಟ್ಟದ್ದು ತನಗಿಲ್ಲ ತನ್ನನಿಷ್ಟಪಟ್ಟವರಿಗೆ ತಾನಿಲ್ಲ
ಇಂಥದೇ ಆವರ್ತನ ಪರಿವರ್ತನ
ಬೇರೆಯವರಿಗೆ ತಾನು ಖಳನಾದ ಪ್ರಸಂಗದಲ್ಲೂ
ನಾಯಕನ ರೋಮಾಂಚನ ಸಮರ್ಥನ

ತಿಳಿಯದೆ ವಿಧಿಯ ಗುಟ್ಟು ಬಯಸಿದ್ದ ಪಡೆವ ಪಟ್ಟು
ಶಿಖರದ ಪಕ್ಕದಲ್ಲಿ ಪ್ರಪಾತ
ಇರಬೇಕಿಲ್ಲ ಬರಿಯ ದುರಂತ ನಡೆದೀತು ಸುಖಾಂತ
ಬೇಕಾದದ್ದು ಪಡೆವ ಪವಾಡ-ವೃತ್ತಾಂತ

ಬಣ್ಣದಂತೆಯೇ ತನಗೆ ತಾನೇ ಕರಗಿ ವೇಷ ಕಳಚಿ
ತನ್ನ ಪಾಡಿಗೆ ತಾನು ಹೊರಟಾಗ ಕತ್ತಲು
ನಾಟಕ ಮುಗಿಯದೆ ತೆರೆಬೀಳದೆ ಯಾರೂ ಕಾಣದ
ಮರಳಿಬಾರದ ನೇಪಥ್ಯದಲ್ಲಿ ಬತ್ತಲು

ಸರಿವ ಪರಿ ಕಿರಿಕಿರಿ ಆದರೂ ಆಯ್ಕೆಗಿಲ್ಲ ಅವಕಾಶ
ಹೊಸ ಪಾತ್ರಗಳಿಗೆ ಬೇಕಲ್ಲವೇ ರಂಗ ಖಾಲಿ
ಬೇಕಿದ್ದರಾಡಿಕೊಳ್ಳಲಿ ಯಾರಾದರೂ ರಂಗಮಂದಿರಗಳಲಿ
ತನ್ನ ಪಾತ್ರದಲ್ಲಿ ಬೇಕಾದದ್ದು ಕಂಡುಕೊಳ್ಳಲಿ

ನಿರ್ದೇಶಕನಿಗೆ ಕೆಲವು ಸೂಚನೆಗಳಿವೆ, ಆದರೆ ನಟ –
ಅಭಿನಯಿಸಬೇಕು ಆ ಪಾತ್ರವೇ ತಾನಾದಂತೆ
ಕಥೆಯಿರಬೇಕು ಆಯಾ ಕಾಲದೇಶದಲ್ಲಿ ಆ ಕ್ಷಣಕೆ
ನಡೆಯುತಿರುವಂತೆ
ಪ್ರೇಕ್ಷಕರು ತಾವೂ ಅದರೊಳಗೆ ಕರಗಿರುವಂತೆ.



**ಬಸವರಾಜ ವಕ್ಕುಂದ**
೧೨/೫, ವಸ್ತ್ರದ ಬಿಲ್ಡಿಂಗ್, ಬಾಲಬಳಗ ಎದುರು, ಮಹಿಷಿ ರಸ್ತೆ, ಮಾಳಮಡ್ಡಿ, ಧಾರವಾಡ - ೫೮೦ ೦೦೭

ಅಸಮಾನತೆಯ ಬೀಜ ಬಿತ್ತಿರುವುದು ಆಶ್ಚರ್ಯವನ್ನುಂಟುಮಾಡುತ್ತದೆ. ಒಬ್ಬನೇ ವ್ಯಕ್ತಿಯಲ್ಲಿ ಆತನ ಬಲಗಣ್ಣು ಶ್ರೇಷ್ಠ, ಎಡಗಣ್ಣು ಕನಿಷ್ಠ, ಬಲಗೈ ಶ್ರೇಷ್ಠ, ಎಡಗೈ ಕನಿಷ್ಠ, ಬಲಗಾಲು ಶ್ರೇಷ್ಠ, ಎಡಗಾಲು ಕನಿಷ್ಠ ಎಂಬಂತಹ ಭೇದಗಳನ್ನು ಹುಟ್ಟುಹಾಕಲಾಗಿದೆ. ಹಳ್ಳಿಗರು ಸಿಟ್ಟಿಗೆ ಬಂದಾಗ ನೋಡಬೇಕು. ''ಮಗನಾs ನಿನಗ ಎಡಗಾಲಿಲ್ಲೆ ಒದಿತೀನಿ'' ಎನ್ನುತ್ತಾರೆ. ಎಡಗಾಲು ಕನಿಷ್ಠ ಅಂತೆಯೇ ಅದರಿಂದ ಒದೆಯುತ್ತೇನೆಂದು ಹೇಳುವುದರ ಮೂಲಕ, ಈ ದೇಶವ್ಯವಸ್ಥೆಯಲ್ಲಿ ಬೇರುಬಿಟ್ಟಿರುವ ಅಸಮಾನತೆಯ ತೀವ್ರತೆ ಎಂತಹದೆಂಬುದನ್ನು ತಿಳಿಸುತ್ತಾರೆ.

ಇಲ್ಲಿಯ ಭೇದ ಸಂಸ್ಕೃತಿ ಒಂದೇ ನಾಲಿಗೆಯಿಂದ ಒಂದೇ ಮಾತಿನಲ್ಲಿ ಎರಡು ಸುಳ್ಳುಗಳನ್ನು ಹೇಳಿಸುತ್ತಿದೆ. ಸೀತೆಯನ್ನು ಪತಿವ್ರತೆಯೆಂದು ಕರೆದ ನಾಲಿಗೆಯೇ ರಾವಣನನ್ನು ಕಾಮುಕ ಎಂದು ಕರೆಯುತ್ತದೆ. ಸೀತೆ ಪತಿವ್ರತೆಯಾಗಿ ಉಳಿಯಬೇಕಾದರೆ ರಾವಣ ಕಾಮುಕನಾಗಿರುವುದಿಲ್ಲ. ರಾವಣ ಒಂದುವೇಳೆ ಕಾಮುಕನಾಗಿದ್ದರೆ, ಸೀತೆ ಪತಿವ್ರತೆಯಾಗಿ ಉಳಿಯುತ್ತಿರಲಿಲ್ಲ. ಇದು ಸಣ್ಣ ಹುಡುಗನಿಗೂ ತಿಳಿಯುವ ವಿಷಯ. ಇಂತಹ ಅನೇಕ ಹಸಿಸುಳ್ಳುಗಳನ್ನು ಶತಮಾನಗಳಿಂದ ಪ್ರಚಾರಪಡಿಸುತ್ತಲೇ ಬರಲಾಗಿದೆ. ಸೀತೆಯನ್ನು ಪತಿವ್ರತೆಯೆಂದು ಕರೆಯೋಣ, ಅಷ್ಟೇ ಏಕೆ ಸೀತೆಯನ್ನು ಮಹಾಪತಿವ್ರತೆಯೆಂದು ಕರೆಯೋಣ. ಅದರೊಂದಿಗೆ ರಾವಣನನ್ನು ಶಿವಭಕ್ತನೆಂದು ನಂಬೋಣ. ಆಗ ಮಾತ್ರ ನಾವಾಡುವ ಮಾತಿಗೆ ಅರ್ಥಬರುತ್ತದೆ. ಇಂತಹ ಅನೇಕ ವಿರೋಧಾಭಾಸಗಳನ್ನು ಹಾಗೂ ಹಸಿಸುಳ್ಳುಗಳನ್ನು ಮತೀಯ ವ್ಯವಸ್ಥೆ ಈ ದೇಶದಲ್ಲಿ ವ್ಯವಸ್ಥಿತವಾಗಿ ಉಳಿಸಿಕೊಂಡು, ಬೆಳೆಸಿಕೊಂಡು ಬಂದಿದೆ. ನಮ್ಮ ಸಾಂಸ್ಕೃತಿಕ ಪಠ್ಯಗಳು ಇಂತಹ ನಂಬಿಕೆಗಳನ್ನು ಮುರಿದು, ಜೀವಪರ, ಜನಪರ ನಂಬಿಕೆಗಳನ್ನು ಸಮುದಾಯದ ನಡುವೆ ಸ್ಥಾಪಿಸುವಂತಾಗಬೇಕು. ಜನಪದ ರಾಮಾಯಣಗಳ ಜೀವಪರ ಆಶಯಗಳನ್ನು ಹೆಚ್ಚು ಪ್ರಚಾರಪಡಿಸಬೇಕು. ಕುವೆಂಪು ರಾಮಾಯಣದರ್ಶನಂ ಮಹಾಕಾವ್ಯದ ಹೊಸ ಸಂಗತಿಗಳನ್ನು ಜನಸಾಮಾನ್ಯರಿಗೆ ತಿಳಿಸುವಂತಾಗಬೇಕು.

ವ್ಯಾಸರ 'ಮಹಾಭಾರತ' ಮಹಾಕಾವ್ಯವು, ನಂತರದ ವರ್ಷಗಳಲ್ಲಿ ಬೇರೆ ಬೇರೆ ರೂಪ ಪಡೆದು ವಿವಿಧ ಭಾಷೆಗಳಲ್ಲಿ ಪುನರ್‌ರಚನೆಗೊಂಡಿದೆ. ಈ ವಿಷಯ ಜನಸಮುದಾಯಕ್ಕೆ ತಿಳಿಯಬೇಕು. ಪಂಪನ 'ಭಾರತ'ದಲ್ಲಿ ಕರ್ಣನ ಪಾತ್ರಕ್ಕೆ ಪ್ರಾಧಾನ್ಯತೆಯಿದ್ದರೆ, ರನ್ನನ 'ಗದಾಯುದ್ಧ'ದಲ್ಲಿ ದುರ್ಯೋಧನ ಖಳನಾಯಕನಾಗಿರದೆ, ಪ್ರತಿನಾಯಕನಾಗಿದ್ದಾನೆ. ಕುಮಾರವ್ಯಾಸನ 'ಭಾರತ' ಭಕ್ತಿಗೆ ಪ್ರಾಮುಖ್ಯತೆ ನೀಡಿದರೆ, ಲಕ್ಷ್ಮೀಶನ 'ಭಾರತ' ಲವ-ಕುಶರ ಸಾಧ್ಯತೆಗಳನ್ನು ತಿಳಿಸುತ್ತದೆ. ಹೀಗೆ ಕನ್ನಡ ಭಾಷೆಯೊಂದರಲ್ಲಿಯೇ ಇಂತಹ ಅನೇಕ ರೀತಿಯ ಭಾರತದ ಪಠ್ಯಗಳಿವೆ. ಜನಪದ ಕಾವ್ಯದಲ್ಲಿ ಮಹಾಭಾರತದ ಕಥೆ ಇನ್ನೂ ಮಹತ್ವದ ಆಯಾಮಗಳನ್ನು ಪಡೆದುಕೊಂಡಿದೆ. ಕ.ರಾ.ಕೃ. ಅವರು ಸಂಗ್ರಹಿಸಿದ ಜನಪದ ಹಾಡುಗಳಲ್ಲಿ, ಬೀದರ ಜಿಲ್ಲೆಯ ಬುಲಾಯಿ ಹಾಡುಗಳಲ್ಲಿ, ದಕ್ಷಿಣ ಕನ್ನಡ ಜಿಲ್ಲೆಯ ದಲಿತ ಕಲಾವಿದೆ ಮಂಜಿ ಹಾಡಿರುವ ಹಾಡುಗಳಲ್ಲಿ ದ್ರೌಪದಿಯ ಕಥಾನಕವೊಂದು ಕುತೂಹಲ ಹುಟ್ಟಿಸುತ್ತದೆ. ಈ ಪಠ್ಯ ಬೇರೆ ಬೇರೆ ಪ್ರದೇಶಗಳಲ್ಲಿ ಹುಟ್ಟಿಕೊಂಡಿದ್ದರೂ ಅದರ ಆಶಯ ಒಂದೇ ಆಗಿದೆ. ಈ ಜನಪದ ಕಥಾನಕದಲ್ಲಿ ದ್ರೌಪದಿ ಪಾಂಡವರ ಸೋಲಿನ ನಂತರ, ದುರ್ಯೋಧನನನ್ನು ಮತ್ತೆ ಪಗಡೆಯಾಟಕ್ಕೆ ಆಹ್ವಾನಿಸುತ್ತಾಳೆ. ಈ ಪಗಡೆಯಾಟದಲ್ಲಿ ತನ್ನ ಪ್ರತಿಭೆ ಹಾಗೂ ಚಾಕಚಕ್ಯತೆಯಿಂದ ದುರ್ಯೋಧನನನ್ನು ಸೋಲಿಸಿ, ಇಡೀ ಸಾಮ್ರಾಜ್ಯವನ್ನು ಪಾಂಡವರಿಗೆ ಕೊಡಿಸುತ್ತಾಳೆ. ದ್ರೌಪದಿಯ ಸೀರೆಯನ್ನು ಸೆಳೆಯುವ ಮಹಾಭಾರತದ ಕತೆಗಳೇ ಜನಮನದಲ್ಲಿ ತುಂಬಿಕೊಂಡಿವೆ. ದುರ್ಯೋಧನನನ್ನು ಸೋಲಿಸುವ ದಿಟ್ಟ ಮಹಿಳೆ ದ್ರೌಪದಿಯ ಹೊಸ ರೂಪಗಳನ್ನು, ಹೊಸ ಸಾಂಸ್ಕೃತಿಕ ಪಠ್ಯಗಳ ಮೂಲಕ ರೂಪಿಸಬೇಕಾಗಿದೆ.

ಹೀಗೆ ಈಗಾಗಲೇ ಸ್ಥಾಪಿತವಾಗಿರುವ ಪರಸ್ಪರ ಪರ-ವಿರೋಧವಾಗಿರುವ ಪಠ್ಯಗಳ ಬದಲು, ಜನಸಮುದಾಯವನ್ನು ಕೂಡಿಸುವ, ಜನತೆ-ಜನತೆಯ ನಡುವೆ ಎದ್ದಿರುವ ಜಾತಿ- ಮತಗಳ ಗೋಡೆಗಳನ್ನು ಕೆಡವುವ ಹೊಸ ಸಾಧಕಗಳನ್ನಾಗಿ ಇಂದು ಹೊಸ ಸಾಂಸ್ಕೃತಿಕ ಪಠ್ಯಗಳನ್ನು ಕಟ್ಟಿಕೊಳ್ಳಬೇಕು. ಆಗ ಮಾತ್ರ ಸಂಸ್ಕೃತಿಗೂ-ಚಳುವಳಿಗೂ ಸಂಬಂಧ ಏರ್ಪಡುತ್ತದೆ. ಅಂದಂದಿನ ವರ್ತಮಾನದ ಹೊಸ ಸವಾಲುಗಳೇ ಹೊಸ ಸಾಂಸ್ಕೃತಿಕ ಪಠ್ಯಗಳನ್ನು ನಿರ್ಮಿಸಿಕೊಳ್ಳಬೇಕಾಗುತ್ತದೆ.

**ಡಾ|| ಬಸವರಾಜ ಸಬರದ**
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ
ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ

# ಹೆಣಕ್ಕೆ ಕೊಟ್ಟ ಹಣ

ಪಿ. ಅಶೋಕ್ ಡಿಸಲೆ

''ಬಿಡ್ ಬುಡು ಅವ ಸತ್ತದು ನಿನಗ ಅನುಕೂಲವೇ ಆಗೋಯ್ತು. ಮುಂದಲ್ ದರಬಾರು ನಿಂದೆ. ನೀನುವೆ ಇಂದ ನಾಳ್ಯಾ ಅಂತ ಅರಸ್ಕಂಡ್ ಕೂತಿದ್ದೆ. ಅದರಂತೆ ಕಾಲಮಿತ್ತು ಅವ್ನ ಬಂದ್ ಕರ್ಕಂಡೋಯ್ತು. ಇನ್ನುವೆ ಬಿಗದ್ ಮೈ ಸಳ್‌ವೇ ಆಗಿಲ್ಲ. ಸಂತೋಷ ಪಡಾಕೆ ನಿನಗೆ ಅರಸಿ ಕೂತದೆ.''

''ಅಯ್ಯೋ ಪೆಕರ್ ಮುಂಡೇ ಮಗನೆ, ಅವನು ಸತ್ತದಕ್ಕೆ ನಾನು ಯೋಚ್ನೆ ಮಾಡ್ತಿಲ್ಲ. ಅವನ್ಯಾವನೋ ಮೂರ್ನೇ ಸೂ... ಮಗ ಬಂದು ದುಡ್‌ಕೊಟ್ ಹೋದ್ನಲ್ಲ ಅದಕ್ಯಾನೇಳ್ತಿಯಾ ? ನಿನ್ ಮಾತ್ ಕೇಳಿ ನಾನ್ಯಾವತ್ ಉದ್ಧಾರ ಆಗಿದೀನಿ ಹೇಳು ? ಕುಡಿದಾಗೊಂದು ಕುಡಿದಿದ್ದಾಗೊಂದು. ಹಿಡಿದರೆ ಗಡ್ಡೆ ತರದರೆ ಮೋಟು ಅಂತಾರಲ್ಲ ಹಾಂಗೆ. ದುಡ್ ಕೊಟ್ ಹೋದ್ನಲ್ಲ ಅವ್ನ ಬಗ್ಗೆ ಹೇಳು ಅಂತಂದ್ರೆ ಹೆಣದ್ ಮುಂದೆ ಕೂತಿರೊ ಅವಳ್ ಮೈ ತುಂಬಿದ ಕೈ ತುಂಬದ ಅಂತ ಹೇಳ್ತೀಯಲ್ಲ. ಅದೋಗ್ಲಿ ನನ್ನೆಸ್‌ರರ ಹೇಳ್ಕಂಡು ಚಟ್ಟಕ್ಕೆ ಎರಡು ಬಿದುರು ಬೊಂಬಾದರು ತಂದಾಕ್‌ದ್ಯಾ ? ಆಗ್ಲಾದ್ರು ಅವಳ್ ಒಸಿ ನನ್ ಕಡೆ ನೋಡ್ತಿದ್ಲು. ಮೊದ್ಲು ಅದನ್ ಮಾಡಿ ಸಂಜೆನಾಗ ಹೆಂಡದ್ ಮನೆ ತಾವ ಸಿಕ್ಕು. ನಿನ್ನುದ್ದ ಕುಡ್ಸಿ ತೇಲಸ್ ಬುಡ್ತೀನಿ ಎದ್ದವ ಹೋಗು.''

''ಈಗಾಗ್ಲೆ ನಾನುವೆ ನಿನ್ನೆಸರ್ ಹೇಳ್ಕಂಡು ಒಂದ್ ಮೊಳುದ್ದ ಹೂವ ತಂದು ಹೆಣದ್ ಮೇಲೆ ಇಟ್ಟೀನಿ. ಹಿಂದೆ ಯಾರು ತಂದಿರ್‌ಬಾರದು. ಮುಂದೆ ಯಾರು ತರ್‌ಬಾರದು, ಅಂತಾ ಗಮ್‌ಗಮ ಗಮ್‌ಗಮ ಅನ್ನ ಗಂಧದ್ ಕಡ್ಡಿ ತಂದ್ ಕೊಟ್ಟೆ ಆಗ್ಲು ನಿನ್ನೆಸರನೇಯ ಹೇಳಿರದು. ಇದಕ್ಕೆ ನೀನು ಒಂದ್ ಪಾಕೀಟು ಸಾರಾಯಿ ಜೊತೆಗೆ ಒಂದ್ ಆಮ್ಲೇಟೂ ಕೊಡಿಸ್‌ಬೇಕು ಗೊತ್ತಾ.''

''ಇನ್ನೇನು ತಿನ್ನಾಕೆ ತಾನೇ ಹುಟ್ಟಿರೋದು ಯಾ ಕಡೆನಾರೂ ಹೋಗ್ಲಿ ಮೊದ್ಲು ನಿನ್ನಟ್ಟೆ ತುಂಬುಸದ್ನೇ ಯೋಚ್ನೆ ಮಾಡ್ತಿ ಪಾಪ್‌ಗೇಡಿ ನನ್ ಮಗ್ನೇ. ನನ್ ತಲೆ ತುಂಬಾ ಬಿಳಿ ಕೂದ್ಲು ಬಂತು. ಒಂದೆಣ್ಣು ದಿಕ್ಕಿಲ್‌ದೆ ಕೂತೀನಿ. ಅಲಾ ಸತ್ತಾಗ ಮಣ್ ಮಾಡಾಕೆ ಒಂದೈನೂರು ಆರ್‌ನೂರು ಆಯ್ತದೆ. ಅದೆಲ್ಲಾನು ನಾನೇ ಹಾಕಿ ಮಣ್ ಮಾಡ್ಬಿಟ್ರೆ ದಿನಾ ಆ ನೆಪದ್ ಮೇಲಾದ್ರುವೆ ಇವಳಟ್ಟಿತಾಕೆ ಬಂದು ಒಸಿ ಮಾತು ಕತೆ ಆಡ್ಕಂಡು ಗಂಡ್ ಸತ್ ಮುಂಡೇಗೆ ಬಾಳ್‌ಕೊಟ್ಟು ದೊಡ್ ಮನ್‌ಷಾ ಅಂತ ಊರ್ ತುಂಬಾ ಕರ್ಕಸಣವಾ ಅಂದ್ರೆ ಅವ್‌ನ್ಯಾವನೋ ಲೌಡಿ ಮಗ ಬಂದು ದುಡ್ ಕೊಟ್ ಹೋದ್ನಲ್ಲ. ಈಗ ಇದಕ್ಯಾನ್ ಮಾಡದು ಅಂತ ಯೋಚ್ನೆ ಮಾಡ್ತಿದ್ರೆ ನೀನು ಸಾರಾಯಿ, ಆಮ್ಲೇಟು ಅಂತಿದೀಯಲ್ಲ''.

''ಅಯ್ಯ ಅದು ಒಂದ್ ಇಷಿಯಾನ. ಅದಕ್ಯಾಕೆ ಆ ಪಾಟಿ ಚುಂಚಿ ನುಕ್ಕೊಂಡ್‌ವರ್ದಾಗೆ ಆಡ್ದೆ. ಇವತ್ತೊಂದಿನಕ್ಕೆ ಎಲ್ಲಾ ಆಗೋಯ್ತದ ಮಣ್ ಮಾಡೀರಾಕೆ ಅವ್ನು ಕಾಸ್ ಕೊಟ್ಟಿರಬಹುದು. ತಿಥಿ ಮಾಡಾಕಾ ನೀನ್ ಕೊಡು. ಈಗ ಜನ್ರು ಗುಂಪಾಗವ್‌ರೇ ಈ ಗಲಾಟೆಯೊಳಗೆ ಖರ್ಚು ವೆಚ್ಚ ಮಾಡ್ದೋರ್ ಯಾರು ಅಂತಾ ಅವಳಿಗ್ ಯೆಂಗ್ ಗೊತ್ತಾಯ್ತದೆ. ಅವಾಗಾದ್ರೆ ಒಬ್‌ಳೇ ಇರ್ತಾಳೆ ಕಾಸ್ ಕೊಟ್ರು ನಿನ್ನೆಸ್ರನಾದ್ರು ಗೆಪ್ತ ಮಡಿಕಂಡಿರ್‌ತಾಳೆ.''

''ನನ್ ಒಳ್‌ಮನಸು ಯಾನ ಅಂತಾ ಇಷ್ಟ್ ದಿನ ಆದ್ರೂ ನಿನಗ್ ಗೊತ್ತಾಗಿಲ್ವಾ. ಗೊತ್ತುಗುರಿ ಇಲ್ದೆ ಹೆಣಕ್ಕೆ ಕಾಸ್ ಕೊಟ್ ಹೋದ್ನಲ್ಲ ಅವನ್ಯಾರ ? ಅವಳ್‌ಗು ಇವನ್‌ಗೂ ಎಷ್ಟ್ ದಿನದಿಂದ ಸಂಬಂಧ ಅದೆ ಅಂತ ಯೋಚ್ನೆ ಮಾಡ್ತಾ ಅವ್ನಿ. ತಿಥಿಗೆ ನಾ ಕಾಸ್ ಕೊಟ್ಟು ಉಳಿದಿದ್ದೆಲ್ಲಾನು ಅವ್ನೆ ಮಾಡಿದ್ರೆ ನನಗೇನ್ ಸಿಕ್ತದು. ಸುಮ್ನೆ ದಂಡ ಅಷ್ಟೇ. ಕಾಲ್‌ದಿಂದಲೂ ಅವಳ್ ಗಂಡನ್ನ ಕಾದ್ ಕೂತಂಗಾಯ್ತು. ಈಗ್ ನೋಡ್ಯಾ ಇವ್‌ನ್ಯಾವನೋ ದುಡ್ ಕೊಟ್ಟೋದ್ರೆ, ನನ್ ತಲೆ ಸುಮ್ನೆ ಇರ್ತದ. ಕೆಟ್ಟು ಬಚ್ಚಲಾಗದೆ. ಮೊದಲೆದ್ದು ಚಟ್ಟಕ್ಕೆ ಬಿದುರು ತಂದಾಕ್ಹೋಗು'' ಎಂದಾಗ ಎದ್ದು ಹೋದ ಪಿಳ್ಳೆಕ್ಯಾತನನ್ನು ದಿಟ್ಟಿಸಿ ನೋಡುತ್ತಿದ್ದ ಮಾದೇವ ಜೇಬಿನಿಂದ ತೆಗೆದ ಬೀಡಿಗೆ ಬೆಂಕಿ ಹಚ್ಚಿದ್ದ. ಅವಳ ಸೌಂದರ್ಯದ ಮತ್ತು ಅವನ ಮನಸ್ಸನ್ನು ಹೊಕ್ಕಿದಾಗಲೆಲ್ಲ ಅದರಿಂದಾಗುವ ಹಿಂಸೆ ಅವನಿಗೆ ತಡೆಯಲಾಗುತ್ತಿರಲಿಲ್ಲ. ಸಾವು ಹೊಕ್ಕಿದ ಹಟ್ಟಿ ಎದುರಿಗಿರುವ ಕಟ್ಟೆ ಹಿಡಿದು ದುಡ್ಡು ಕೊಟ್ಟು ಹೋದವನ ಬಗ್ಗೆ ಯೋಚಿಸುತ್ತಾ ಕುಳಿತಿದ್ದ.

ಸಾವು ಹೊಕ್ಕಿದ ಮೇಲೆ ಕೆಟ್ಟ ಮೌನ ಹಟ್ಟಿಯನ್ನೆಲ್ಲ ಆವರಿಸಿತ್ತು. ಗಂಡನ ಹೆಣಕ್ಕೆ ಬೆನ್ನು ಹಾಕಿ ಕೂತವಳ ಮನದಲ್ಲಿ ಯಾವುದೇ ಒಂದು ಗೊಂದಲವಿರಲಿಲ್ಲ. ಕಣ್ಣು ನೀರನ್ನು ಕಂಡಿರಲಿಲ್ಲ. ಹುಟ್ಟುವಂತಹ ಭಾವನೆಗಳನ್ನು ಪಾಲಾಗಿ ಹಂಚಿಕೊಂಡಾಗಲೆ ಆ ಭಾವನೆಗಳು ಜೀವಂತವಾಗಿ ಇರುವುದು. ಆದರಿವಳ ನೊಂದ ಜೀವನದಲ್ಲಿ ಬೆಂದ ಮನಸ್ಸು ತನ್ನಿಂದ ತಾನೇ ಹಿಂದಿನದೆಲ್ಲ ಹೆಕ್ಕಿ ಕರುಬಲಾರಂಭಿಸಿತು.

''ಕೊನೆಗೂ ತನ್ ಹಟಾನೇ ಜಯಿಸ್‌ಕೊಂಡ್ ಹೊರಟ. ಮದುವೆಯಾದ ದಿನದಿಂದ ಸತ್ ಮಲಗೋವರ್‌ಗೂ ಕುಡ್‌ದು ತಿಂದು ಮಾಡಬಾರದ್ದನ್ನೆಲ್ಲ



ಮಾಡಿ ಹೆಣ ಎತ್ತಾಕು ನಯಾಪೈಸೆ ಇಲ್‌ದಂಗೆ ಮಲಗವನೆ. ಮದುವೆ ಮಾಡ್‌ಕತ್ತೀನಿ ಅಂತ ಅಂದು ಬಂದ್ ದರಬಾರ ನೋಡಿ ಹಿಂದುಮುಂದು ಯೋಚ್ನೆ ಮಾಡ್ದೆ, ನನ್ನ ಒಂದ್ ಮಾತ್ನೂ ಕೇಳ್ದೆ, ಅದೆಷ್ಟ್ ಭಾರ್‌ವಾಗಿದ್ನೋ ನಮ್ಮಪ್ಪನ್‌ಗೆ ವಾರ್‌ದೊಳಗೆ ಮದ್ವೆ ಒಪ್ಗೆ ಎಲ್ಲಾ ಮಾಡಿ ಮುಗುಸ್ದ. ಹಾಲ್‌ನಂಗಿದ್ದ ಬದುಕ್ನ ಹೇಲ್‌ನಂಗೆ ಮಾಡ್ದ. ನಂಟ್ರು ಇಷ್ಟ್ರು ಬಂದ್ರೆ ಅವ್ರುಗೂ ಕುಡ್ಸೀ ತಿನ್ಸಿ ಮೆಚ್‌ಗಾರಿಕೆ ಪಡ್‌ದ. ಬತ್ ಬತ್ತಾ ತಿಂದೋರ್ ಹತ್ರ ಸಾಲ ಸೋಲ ಅಂತ ಕೈ ಚಾಚಿ ಈಸ್‌ಕಂಡ್ ಮಾನ ಮರ್‍ಯಾದೆಯಲ್ಲಾ ಕಳ್‌ದ. ಸಂಪಾದ್ನೆ ಮಾಡದ್ ಹತ್ ರೂಪಾಯ್ ಆದ್ರೆ ಬಳಸೋ ದುಡ್ ನೋಡಿದ್ರೆ ನೂರಾಗಿತ್ತು. ತಲೆ ಮೇಲೆ ಹೇರಕಂಡ್ ಸಾಲ ತೀರ್‍ಸಾಕೆ ಇದ್ ಬದ್ ಆಸ್ತೀನೆಲ್ಲಾ ಇಂದೊಂದು ನಾಳೆಯೊಂದು ಅಂತ ಹೊಳೇಲಿ ಹುಣಸೇಹಣ್ ತೇಯ್ದಂಗೆ ತೇಯ್ದ. ನನ್‌ಗಿರೋ ಒಬ್ ಮಗನ್ ನೋಡಿ ಆದ್ರು ಎಲ್ಲಾ ಕೆಟ್ ಚಟಾನು ಬಿಡ್ತಾನೆ ಅಂತ ಕಾದೂ ಕಾದೂ ನನಗೂ ಸಾಕಾಗೋಯ್ತು. ರೋಸೋದ್ ನನ್ನೀ ಘಟ ನೀನ್ ತಂದಾಕು ನಾನು ತಿಂದಾಕ್ತೀನಿ ಅನ್ನ ಮಟ್ಟಕ್ಕೆ ನಾನು ನಿಂತೆ. ದಿನಾ ಹೊರಗಲ್ ಜನ ಮನೇ ಬಾಗಿಲ್‌ಗೆ ಬಂದು ಸಾಲದ್ ಇಚಾರವಾಗಿ ಮಾನ ಮರ್‍ವಾದಿ ಕಳದ್ರು. ಅಕ್‌ಪಕ್‌ದ ಜನ ಅಷ್ಟು ಇಷ್ಟು ಅಂತ ಸಹಾಯ ಮಾಡ್ತಾ ಇದ್ರು. ಜನಗಳ್ನ ಇವ್ನ ದಿನಾ ಬಯ್ಯೋದ್ನ ನೋಡಿ ಇವ್ರ ಸಹವಾಸ ಸಾಕು ಅಂತ ಅವ್ರು ನಮ್ಮಿಂದ ದೂರ ಆದ್ರು. ನನ್ ಕೂಸ್‌ಗೆ ಮೂರ್‍ನಾಲ್ಕು ತಿಂಗಳಾಗಿರೋವಾಗ ನನ್ನ ತವರ್ ಮನೆಯಿಂದ ಹಟ ಮಾಡಿ ಬಿಡ್ದೆ ಕರ್‍ಕ ಬಂದ. ಮಗಳು ಬಾಣಂತಿ ಅಂತೇಳಿ ನನ್ ತವರ್ ಮನೇವ್ರು ಅಷ್ಟು ಇಷ್ಟು ದುಡ್ನ ಅಂಬಲಿಗೋ ಗಂಜಿಗೋ ಕಳುಸ್ತಾನೇ ಇದ್ರು. ಕುಡಿದ್ ಅಮಲ್‌ನಲ್ಲಿ ಅನ್‌ಬಾರದ್ ಕಳಗೆಟ್ಟ ಮಾತ್ನೆಲ್ಲಾ ಅವ್ರುಗೂ ಆಡ್‌ದ. ತವರ್ ಮನೇರು ನಮಗೊಬ್ಬಳು ಮಗಳು ಸತ್ಲು ಅಂತ ತಿಳಿದು ನನ್ ಅಪ್ಪ ಅಮ್ಮ ಸಂಬಂಧಿಕರೆಲ್ಲಾ ಹಟ್ಟಿ ಹೊಸ್ತಿಲ್ ಮೆಟ್‌ದಾಗೆ ದೂರ ಉಳಿದ್ರು.

''ಮದ್ವೆಗೂ ಮುನ್ನ ಏನೇನ್ ಕನಸ್ ಕಟ್ಟಿದ್ನೋ ಅದಕ್ಕೆಲ್ಲ ಮಸಿ ಬಿತ್ತು. ನನ್ ಹೊಟ್ಟೆ ಒಂದೇ ಒಂದು ವಂಶದ್ ಕುಡಿಗೇ ಬಂಜರಾಯ್ತು. ಇರೋದೊಂದ್ ಮಗನ್‌ಗೆ ಅಂಗೈಯಗಲ ಜಾಗಾನು ಬಿಡ್‌ದೆ ಎಲ್ಲಾನು ನೆಕ್‌ದ. ಇಂದು ಸತ್ ಮಲಗಿದ್ರೆ ಜನ ಅನ್ನಿಸ್ಕೊಂಡೋರು ಮುಖ ತಿರುಗ್ಸ್ಕೊಂಡು ಹೊಯ್ತಾರೆ. ಹೆಣ್ ಹೆಂಗಸು ನಾ ತಾನೆ ಯಾನ್ ಮಾಡಾಕಾಯ್ತದೆ. ಊತ್ ಹಾಕ ಹೆಣದ್ ಮಕ್ಕಿಗೆ ಒಂದ್ ಸರ ಅಕ್ಕಿ ತಂದು ಮಗ್ಗಿಗಾಕವಾ ಅಂದ್ರೆ ಅದಕ್ಕೂ ದಿಕ್ಕಿಲ್ಲ. ಊರಿನ್ ಜನ ದೊಡ್ ಮನಸ್ ಮಾಡಿ ಮಣ್ ಮಾಡಾಕೆ ಬರೋರಿದ್ರು. ಸಾಯುವರ್‍ಗೂ ಅವ್ರಾಗೆ ಇವ್ರೀಗೆ ಅಂತ ಕುಡದ್ ಅಮುಲ್‌ನಲ್ಲಿ ಊರ್ ಜನಗಳನ್ನೆಲ್ಲ ನಿಷ್ಠುರ ಮಾಡ್ಕಂಡಿದ್ದ. ಸತ್ ಮೇಲೆ ಹೆಣಾನ ಯಾರು ಮುಟ್ಟಲ್‌ವೇನೋ ಅಂತ ಭಯ ಆಗಿತ್ತು. ಆದ್ರೆ ಯಾವ ಪುಣ್ಯಾತ್ಮನೋ ಏನೊ ದೇವ್ರ ಹಾಗೆ ಬಂದು ಹೆಣಾ ಎತ್ತಾಕೆ ದುಡ್ಡು ಅಂತ ಕೊಟ್ಟೋದ. ನನ್ ಗಂಡನ್ ಜತೇಲಿ ಕುಡ್ದು ತೇಗ್‌ತಿದ್ ಯಾವೋನು ತಿರಗ್ ಕೂಡ ನೋಡ್ಲಿಲ್ಲ. ಹಣ ಕಂಡ್ ಮೇಲೆ ಅದೇ ಹಣದಾಗೆ ಹೆಣಕ್ಕೆ ಬಟ್ಟೆ ತಂದು ಮಣ್ ಮಾಡೋದಿಕ್ಕೆ ನಾ ಮುಂದು ತಾ ಮುಂದು ಅಂತ ಓಡಾಡ್ತ ಅವ್ರೆ. ಹಣ ಕೊಡೊ ಪುಣ್ಯಾತ್ಮ ಕೊಡದೇ ಇದ್ದಿದ್ರೆ ಅಂಗೈ ಅಗಲ ಹೆಣದ್ ಬಟ್ಟೆಗೂ ಗತಿ ಇಲ್ದೆ ಹಾಗೆನೇ ಮಣ್ ಮಾಡ್‌ಬೇಕಾಗಿತ್ತೋ ಏನೋ? ಇವನ್ ಮಾಡ್ಕಂಡಿರೋ ಸಾಲಕ್ಕೆ ಹೆಣಾನು ಎತ್ತಾಕೆ ಬಿಡೋಲ್‌ವೇನೋ ಅಂತ ಗಾಬ್ರಿಯಾಗಿತ್ತು. ವಿಷ್ಯ ಗೊತ್ತಿದ್ರು ಯಾರು ನನಗಿಷ್ಟ್ ಸಾಲ ಕೊಡ್‌ಬೇಕು ಅಂತೇಳಿ ಸತ್ ಗಳಿಗೆಯಿಂದ್ಲು ಬಂದಿಲ್ಲ. ಮುಂದೂ ಹೀಗೆ ಇದ್ಬಿಟ್ರೆ ನನ್ ಕೈಲಾಗೋಷ್ಟು ದುಡ್‌ದು ನಾ ಬದ್‌ಕಿರವರ್‍ಗೂ ಇರ ನನ್ ಕಂದನ್ ಜೊತೆ ಗಂಜೀನೋ ಅಂಬ್ಲಿನೋ ಕುಡ್‌ದು ಬದಕಾನ ಅಂತ. ಆದ್ರೆ ಆ ನನ್ ಶಿವನ್ ಲೆಕ್‌ದಾಗೆ ಯಾನೈತೋ ಯಾನೋ,'' ಎಂದಲಬುತ್ತಾ ಅಂಚಿಕಡ್ಡಿನಾಗೆ ಸೆಗಣಿ ನೆಲ ಗೀರ್‌ತಿದ್ರೆ ಅತ್ತ ಹೆಣತೊಳೆದು ಚಟ್ಟ ಕಟ್ಟುವ ಕಾರ್ಯವನ್ನು ಮುಗಿಸಿದ್ದರು. ಇದಾಗಿ ಗಂಟೆ ಕಳೆದಿರಬಹುದು. ಅಲ್ಲೇ ಇದ್ದ ಹಿರಿಯ ಹೊಸ್ತಿಲೊಳಗೆ ಹೊಕ್ಕು ಹೊರಬಂದು ಹೊತ್ತೊಯ್ಯಲು ಹೇಳಿದ್ದ. ಮಗ ಎನಿಸಿಕೊಂಡವನನ್ನು ಕರೆದು ಕೈಯಲ್ಲಿ ಕಡಕೊಳ್ಳಿ ಕೊಟ್ಟು ಮುಂದೆ ನಿಲ್ಲಿಸಿದ್ದರು. ಹೆಣಕ್ಕೆ ಪೂಜೆಯಾದ ಬಳಿಕ ನಾಲ್ಕು ಜನ ಒಟ್ಟಿಗೆ ಚಟ್ಟಕ್ಕೆ ಹೆಗಲು ಕೊಡುತ್ತಿದ್ದಂತೆ ಅಳುವ ಆಕ್ರಂದನ ಹೆಂಗಳೆಯರ ನಡುವಿಂದ ಮುಗಿಲು ಮುಟ್ಟಿತ್ತು. ಮನಸಿತ್ತೋ ಇಲ್ಲವೋ ಅಂತೂ ತಮ್ಮ ಶಕ್ತ್ಯಾನುಸಾರ ಅತ್ತು ಹೌದೆನಿಸಿಕೊಂಡಿದ್ದರು. ಹೆಣ ಬಿದ್ದಾಗಿನಿಂದಲೂ ಹಟ್ಟಿಯ ಸುತ್ತಮುತ್ತಲಿನ ಕಟ್ಟೆ ಹಿಡಿದು ಕುಳಿತವರೆಲ್ಲಾ ಅರಿವೆ ಕೊಡವಿಕೊಂಡು ಎದ್ದು ಹೊರಟರು.



ಸರೆ ಕುಡಿದು ಹಲಗೆ ಬಡಿಯುತ್ತಿದ್ದವರು ಮನಸೋ ಇಚ್ಛೆ ಬಡಿಯುತ್ತಿದ್ದರು. ಹೆಣದ ಮೇಲೆರೆಚುತ್ತಿದ್ದ ಪುರಿ ಕಡಕೊಳ್ಳಿ ಹಿಡಿದ ಮಗನ ಮೇಲೂ ಬೀಳುತ್ತಿದ್ದುದನ್ನು ಕಂಡು, ''ಲೇ ಪುರಿನಾ ವಸಿ ನಿಧಾನಕ್ಕೆ ಎಸಿರಿ. ದಿಕ್ಕುದೆಸೆ ಇಲ್ದೆ ಸಿಕ್ ಸಿಕ್‌ದಾಗೆ ಎಲ್ಲೋ ನಿಂತಿದ್ದೋರೆಲ್ಲಾ ಬಂದು ಪುರಿ ಎರಚ್‌ತೀರಿ. ಮುಂದೋಗ್ತಿರೊ ಅವನ್ ಮಗನ್ ಮೇಲೆ, ಅಕ್‌ಪಕ್ಕ ಬದುಕಿರೋರ್ ಮೇಲೆಲ್ಲಾ ಬೀಳ್ತಾ ಐತೆ'' ಎಂಬ ದನಿ ಗುಂಪಿನಿಂದ ಜೋರಾಗಿಯೇ ಕೇಳಿಬಂದದ್ದನ್ನು ಕಂಡು ಕಡಕೊಳ್ಳಿ ಹಿಡಿದು ನಡೆಯುತ್ತಿದ್ದ ಹುಡುಗ ಮನಸ್ಸಿನಲ್ಲೇ ನಕ್ಕಿದ್ದ. ಸುಖದ ಅಂಬಲಿಯನ್ನು ಕಾಣದ ದಿನಗಳನ್ನು ನೆನಸಿಕೊಂಡಾಗ ಆ ಸಣ್ಣ ಮನಸ್ಸಿನಲ್ಲಿ ವಾಸ್ತವಕ್ಕೆ ಸತ್ಯವಾಗಿರುವಂತಹ ಅನೇಕ ವಿಚಾರಗಳು ಪುಟಿದೇಳಲಾರಂಭಿಸಿದವು.

''ತಲೆ ಮ್ಯಾಲೆ ಪುರಿ ಬಿದ್ರೇನಂತೆ ಬದ್‌ಕಿರುವಾಗ್ಲೇ ನಮ್ಮಪ್ಪ ನನ್ನ ಸತ್ತಂಗೆ ಮಾಡೋನೆ. ಇಷ್ಟು ವರ್ಷ ಅನುಭವಿಸಿದ ಕಷ್ಟದ್ ಮುಂದೆ ಇದ್ಯಾನು ? ಹೆಣ ಎತ್ತಾಕು ನಯಾಪೈಸೆ ಇಲ್ದೆ ತನ್ ತೀಟೆ ತೀರ್‍ಸ್ಕಂಡ್ ಹೆಣವಾಗಿ ಹೋದ. ಈಗ ಬದುಕಿರೋ ನಮ್ಮವ್ವ ನಾನು ಜೀವನ ನಡಸದ್ಯಾಗೆ ? ಇವತ್ತಿನ್‌ದು ಹ್ಯಾಗೋ ಮುಗುದೋಗುತ್ತೆ. ನಾಳೆಯಿಂದ ನಮ್ ಗತಿ ? ನನ್ನ ಮೂರ್ ಕಾಸಿನ್ ವಿದ್ಯೆ ಕಲಿಸ್‌ದಾಂಗೆ ದರ್ಬೆಸಿ ಮಾಡಿಟ್ಟ. ನಮ್ಮೌನ ಬಲವಂತಕ್ಕೆ ಇಸ್ಕೂಲ್‌ಗೋದ್ರೆ ನಿಮ್ಮಪ್ಪ ಕುಡ್‌ದು ಅಲ್ ಬಿದ್ದವನೆ ಇಲ್ ಬಿದ್ದವನೆ ಅಂತ ಹಂಗಿಸಿ ಮಾತಾಡೋರು. ದಿನ್‌ದಿಂದ ದಿನಕ್ಕೆ ನನ್ ಮನಸ್ಸಿನ್ ಸ್ಥಿತಿ ಅಲ್ಲೋಲ್ ಕಲ್ಲೋಲ್‌ವಾಯಿತು. ಓದೋದೆ ಬ್ಯಾಡ ಅಂತ ನಿರ್ಧಾರ ಮಾಡಿ ಕೊನೆಗೂ ಇಸ್ಕೂಲ್ ಬಿಟ್ಟೆ. ಮನೆ ಕಷ್ಟಕ್ಕೆ ಆಗವ ಅಂತ ಅಲ್ಲಿ ಇಲ್ಲಿ ಕೂಲಿಗ್ ಸುತ್ತುದ್ರೆ ದೊಡ್ ಆಳು ಗೇಯ್ಯೋ ಹಾಗೆ ಕೆಲ್ಸ ಮಾಡ್ಸೋರು, ಹುಡುಗ ಅಂತೇಳಿ ಕಮ್ಮಿ ಸಂಬಳ ಕೊಟ್ಟು ಕಳ್‌ಸೋರು. ಬಂದಿದ್‌ರಲ್ಲಿ ಅವ್ವ ಮಾಡ್ ಹಾಕಿದ್ ತಿನ್‌ದೆ ಕುಡಿದ್ ಅಮಲ್‌ನಲ್ಲಿ ದಿನಾ ಒಂದೇ ತರದ್ ಅಡಿಗೆ ಅಂತೇಳಿ ನಯಾ ಪೈಸೆ ತಂದ್ ಹಟ್ಟಿಗ್ ಕೊಡ್‌ದೇ ಇದ್ರು ಮೈ ತುಂಬಾ ಬಾಸುಂಡೆ ಬರೋ ಹಾಗೆ ಹೊಡೀತಿದ್ದ. ದಿನಾ ನೋಡಿ ನೋಡಿ ಅಪ್ಪ ಅನ್ನಿಸ್ಕೊಂಡೋನು ಯಾಕ್ ಬೇಕು, ಅವ್ನಿಲ್ದೆ ಇದ್ರು ನಾವ್ ಬದುಕ್‌ಬೋದಲ್ಲ ಅನಸ್‌ತಿತ್ತು. ನಮೌಂಗೆ ಮಗನಾಗಿ ನಾನಿರಬೋದು. ಆದ್ರೆ ಪರಪಂಚದ ಲೆಕ್ಕದಾಗೆ ಗಂಡ ಅನ್ನಿಸ್ಕೊಂಡೋನು ಇರಬೇಕಲ್ಲ. ಇಲ್ದೇ ಇದ್ರೆ ಊರು ಕೇರಿ ಜನ ಹಂಗ್ಸಿ ಮಾತಾಡೋದ್ನ ಸತ್ ಮಣ್‌ಗೆ ಹೋಗೋವರ್‍ಗೂ ಕೇಳ್‌ಬೇಕಲ್ಲ. ಕುಡುಕ್ನೋ ಕುಂಟ್ನೋ ಗಂಡ ಅನ್ನಿಸ್ಕೊಂಡೋನು ಮನೇಲಿ ಬಿದ್ದಿದ್ರೆ ನಮೌವ್ವ ಮುತ್ತೈದೆ. ಇಲ್ಲಾಂದ್ರೆ ಮುಂಡೆ.

''ನಾಳೆಯಿಂದ ನಮೌವ್ವನ ಹಣೆಮ್ಯಾಗೆ ಚಂದ್ರ ಇರಾಕಿಲ್ಲ. ತಲೇಲಿ ಹೂವಿಲ್ಲ. ನಮ್ಮಪ್ಪ ಇರುವಾಗ್ಲಂತೂ ಸುಖ ಕಾಣ್ಲಿಲ್ಲ. ಸತ್ ಮೇಲಾದ್ರು ಹಿಟ್ಟು ಬಟ್ಟೆಗೆ ನೇರಕ್ಕಿಕ್‌ತೀವಿ ಅಂತಂದ್ರೆ ಈ ಒಂದ್ ಕೊರಗು. ನಮೌವ್ವ ಈ ಜನರ್ ಮಧ್ಯೆ ಬದಕದ್ ಹ್ಯಾಗೆ ? ನಾನಂತು ನಮೌಂಗೆ ಏನು ಬಲವಂತ ಮಾಡಲಾರೆ. ನನ್‌ಕೈಲಿ ಆಗೋ ಅಷ್ಟು ಸಂಬಳ ಮಾಡಿ ತಂದ್ ಹಾಕ್ತಿನಿ. ಆದ್ರೀ ಜನಕ್ಕೆ ಹೆದ್ರಿ ಇರ ಈ ಮನೇನ ಮಾರಿ ದೇಸಾಂತರ ಹೋಗಿ ಎಲ್ಲೋ ನೀರು ನೆಳ್ಳು ಇರ ಕಡೆ ಇರವ ನಡಿ ಅಂತಂದ್ರೆ ಏನು ಮಾಡಾಕಾಗಕಿಲ್ಲ. ಕಷ್ಟ ಆಗ್ಲಿ ಸುಖ ಆಗ್ಲಿ ನಾನಂತು ನಮ್ಮೌನ ಇಷ್ಟದಂತೆ ನಡ್ಕಬೇಕು. ಜೀವನಪೂರ್ತಿ ನಮ್ಮಪ್ಪನ್ ಕೋಟ್ಲೆಯಿಂದ ಬೆಂದು ಬರಡಾಗಿರೋ ಅವ್ವಂಗೆ ಆಸ್ರೆಯಾಗಿ ನಿಲ್‌ತೀನಿ. ಇಲ್ಲಾ ಅಂದ್ರೆ ಇದೇ ಊರ್‌ನಾಗೆ ಯಾರ್ ಮನೇಲಾದ್ರು ಜೀತಕ್ಕಿದ್ದು ಹ್ಯಾಗೋ ಜೀವನ ನಡಸ್ಕಂಡು ಹೋಗೋದು. ಈ ಜನಾನು ಅಷ್ಟೇಯ ನಮ್ಮಪ್ಪನ್ ಹೆಣದ್ ಕೆಲಸ ಮಾಡಾಕೆ ಹಣ ಸಿಗೋವರ್‍ಗೂನುವೆ ಮುಖ್ ಮುಖ ನೋಡ್ತಾ ಇದ್ರು. ಹಣ ಕೊಟ್ಟೋನು ಸುಮ್ನೆ ಕೊಟ್ನೋ ಇಲ್ಲ ನಮ್ಮಪ್ಪನ್ ಹತ್ರ ಸಾಲ ಅಂತ ಇಸ್ಕಂಡಿದ್ನೋ ಯಾರಿಗ್ಗೊತ್ತು? ಅಂತು ಜನರ್ ಕಣ್ಣಿಗ್ ಹಣಕೊಟ್ಟು ಪುಣ್ಯಾತ್ಮನಾದ. ಅವುನ್ ಸಂದಾಕಿರ್‍ಲಿ.''




**ಪಿ. ಅಶೋಕ್ ಡಿಸಲೆ**

ನಂ. ೫೮, ೮ನೇ ಮುಖ್ಯರಸ್ತೆ, ೪ನೇ ಬ್ಲಾಕ್, ವೆಂಕಟೇಶ್ವರ ಲೇಔಟ್, ಆದರ್ಶನಗರ
ಅರಿಸಿನಕುಂಟೆ ಅಂಚೆ, ಬೆಂಗಳೂರು - ೫೬೦ ೦೯೭

# ಸರ್ದಾರ್ ಸರೋವರ್ ಪ್ರಾಯೋಜನೆಯು ಜನಹಿತಕ್ಕೆ ವಿರೋಧಿಯೇ?




ಇತ್ತೀಚೆಗೆ 'ಹಿಂದೂ' ಪತ್ರಿಕೆಯಲ್ಲಿ ಶೋಮಾ ಚೌಧುರಿಯವರು ಶ್ರೀಮತಿ ಅರುಂಧತಿ ರಾಯ್ ಅವರೊಂದಿಗೆ ನಡೆಸಿದ ಒಂದು ಸಂದರ್ಶನ ಪ್ರಕಟವಾಗಿದ್ದಿತು. 'ದೇಶಾದ್ಯಂತ ಕ್ರೋಧದ ಜ್ವಾಲೆ ಭುಗಿಲೇಳುತ್ತಿದೆ' ಎಂದು ಈ ಸಂದರ್ಶನಕ್ಕೆ ಶಿರೋನಾಮೆ ನೀಡಲಾಗಿದ್ದಿತು. ಸರ್ದಾರ್ ಸರೋವರ್ ಪ್ರಾಯೋಜನೆಯು ಈ ಸಂದರ್ಶನದ ಮುಖ್ಯ ವಿಷಯವಾಗಿದ್ದಿತು. ಆದರೆ ದೇಶ ಎದುರಿಸುತ್ತಿರುವ ಸಮಸ್ಯೆ ಇದೊಂದೆಯೆ? ನಕ್ಸಲ್‌ವಾದಿ ಸಮಸ್ಯೆ ಇದಕ್ಕಿಂತ ಹೆಚ್ಚು ಮುಖ್ಯ ಹಾಗೂ ಬೃಹತ್ ಆದುದಲ್ಲವೇ? ಸ್ವಾತಂತ್ರ್ಯ ಬಂದು ಅರ್ಧಶತಮಾನಕ್ಕೂ ಹೆಚ್ಚು ಕಾಲವಾದರೂ ದೇಶದ ಬಹುಭಾಗ ಜನರು ಬಡತನದ ಬೇಗೆಯಲ್ಲಿ ಬೇಯುತ್ತಿಲ್ಲವೇ? ದೇಶದ ಅರ್ಧಭಾಗಕ್ಕೂ ಹೆಚ್ಚಿನ ಹಳ್ಳಿಗಳು ಕುಡಿಯುವ ನೀರಿನ ಅಭಾವದಿಂದ ಪರಿತಪಿಸುತ್ತಿಲ್ಲವೇ? ಲಭ್ಯವಿರುವ ಜಲಮೂಲಗಳು ಮಾಲಿನ್ಯ ಭರಿತವಾಗಿ ಹೆಚ್ಚು ಹೆಚ್ಚು ಜನ ಕ್ಯಾನ್ಸರ್, ಡಯಾಬಿಟಸ್, ಪಾರ್ಕಿನ್ಸನ್ ರೋಗ ಇತ್ಯಾದಿ ಮಾರಕ ರೋಗಗಳಿಗೆ ತುತ್ತಾಗುತ್ತಿಲ್ಲವೇ? ಮಕ್ಕಳು ದೊಡ್ಡವರಾಗಿ ಬೆಳೆಯುವುದಕ್ಕೂ ಮುನ್ನವೇ ಅಪೌಷ್ಟಿಕತೆಯಿಂದ ಹೆಚ್ಚುಹೆಚ್ಚಾಗಿ ಅಕಾಲ ಮೃತ್ಯುವಿಗೊಳಗಾಗುತ್ತಿಲ್ಲವೆ? ಇಷ್ಟೆಲ್ಲ ಗಂಭೀರ ಸಮಸ್ಯೆಗಳು ಕಾಡುತ್ತಿರುವಾಗಲೇ ಸರ್ದಾರ್ ಸರೋವರ್ ಪ್ರಾಯೋಜನೆಯ ಸಮಸ್ಯೆಯನ್ನೇ ಬೃಹತ್ತನ್ನಾಗಿ ಪರಿಗಣಿಸಿ ದೇಶಾದ್ಯಂತ ಎಲ್ಲರೂ ಅದರತ್ತಲೇ ಗಮನ ನೀಡಬೇಕೆನ್ನುವುದು ತರವೇ?

ಅಲ್ಲದೆ, ಈ ಪ್ರಾಯೋಜನೆಯ ಲಕ್ಷಣಗಳನ್ನು ವಿವರಿಸುವಾಗ ಅನೇಕ ತಪ್ಪುಗಳು ನುಸುಳಿವೆ. ಉದಾಹರಣೆಗೆ, ನದಿಯ ನೀರೆಲ್ಲವನ್ನೂ ಕಾಲುವೆಯತ್ತ ತಿರುಗಿಸಿ ಕೆಳಕ್ಕೆ ನೀರು ಹರಿಯದಿದ್ದಾಗ ನದಿಯ ಕೆಳಬದಿಯಲ್ಲಿ ನಿರ್ಮಿತವಾದ ೧,೪೫೦ ಮೆಗಾವ್ಯಾಟ್ ಸಾಮರ್ಥ್ಯದ ವಿದ್ಯುದಾಗಾರದಲ್ಲಿ ವಿದ್ಯುದುತ್ಪಾದನೆ ಶೂನ್ಯವಾಗುವುದು ಎಂದು ಹೇಳಲಾಗಿದೆ. ಇದು ನಿಜವಲ್ಲ. ಈ ವಿದ್ಯುದಾಗಾರವನ್ನು 'ಪಂಪ್ಡ್ ಸ್ಟೋರೇಜ್ ಸ್ಕೀಮ್' ಎಂಬ ವಿಶೇಷ ಮಾದರಿಗೆ ಅನುಗುಣವಾಗಿ ನಿರ್ಮಿಸಲಾಗಿದೆ. ಇದರಲ್ಲಿನ ಹಿಮ್ಮುಖ ಚಾಲನೆ ಯಂತ್ರಗಳು ಹಗಲು ಹೊತ್ತಿನಲ್ಲಿ, ನದಿಯ ನೀರು ಪೂರ್ಣ ಪ್ರಮಾಣದಲ್ಲಿ ಕಾಲುವೆಗೆ ಹರಿದು ಹೋಗುತ್ತಿರುವಾಗಲೂ, ಪರಮಾವಧಿ ವಿದ್ಯುದುತ್ಪಾದನೆ ಮಾಡಬಲ್ಲವಾಗಿವೆ. ಅಣೆಕಟ್ಟೆಯ ತಳನೀರು ಹರಿವಿನ ಸ್ಥಳದಲ್ಲಿ, ಗರುಡೇಶ್ವರ ಎಂಬಲ್ಲಿ, ಒಂದು ಒಡ್ಡನ್ನು ನಿರ್ಮಿಸಲಾಗಿದೆ. ಇದರಲ್ಲಿನ ಪೂರ್ಣ ನೀರಿನ ಮಟ್ಟ ಸರ್ದಾರ್ ಸರೋವರ್ ವಿದ್ಯುದಾಗಾರದ ಟೈಲ್‌ರೇಸ್ (ನೀರುಗಿರಣಿ ಚಕ್ರ)ವರೆಗೂ ಚಾಚಿಕೊಂಡಿದೆ. ಈ ವಿದ್ಯುದಾಗಾರವು ರಾತ್ರಿವೇಳೆಯಲ್ಲಿ ಮಿಗುತಾಯ ವಿದ್ಯುಚ್ಛಕ್ತಿಯನ್ನು ಬಳಸಿಕೊಂಡು, ತಾನು ಬಳಸಿದ ನೀರನ್ನು ಮತ್ತೆ ಅಣೆಕಟ್ಟೆಯ ಹಿಂದಿರುವ ಜಲಾಶಯಕ್ಕೆ ಪಂಪ್ ಮಾಡುತ್ತದೆ. ಹಗಲಿನಲ್ಲಿ ಇದು ರೈತರಿಗೂ ಕೈಗಾರಿಕೆಗಳಿಗೂ ಗೃಹೋಪಯೋಗಿಗಳಿಗೂ ಅತ್ಯವಶ್ಯವಾದ ವಿದ್ಯುಚ್ಛಕ್ತಿಯನ್ನು ಪೂರ್ಣಪ್ರಮಾಣದಲ್ಲಿ ಉತ್ಪಾದಿಸುವುದು. ಹಾಗಾಗಿ ನೀರಿನ ನಷ್ಟ ಅಥವಾ ವಿದ್ಯುದುತ್ಪಾದನೆ ಶೂನ್ಯವಾಗುವ ಪ್ರಶ್ನೆ ಉದ್ಭವಿಸುವುದೇ ಇಲ್ಲ.

ಈ ಪ್ರಾಯೋಜನೆಯಿಂದಾಗಿ ಸ್ಥಳಾಂತರಿತವಾದ ಹಾಗೂ ಭೂಮಿ-ಮನೆ ಕಳೆದುಕೊಂಡ ಜನರನ್ನಷ್ಟೆ 'ಬಾಧಿತ' ರಾದವರು ಎಂದು ಪ್ರಾಯೋಜನಾಧಿಕಾರಿಗಳು ಪರಿಗಣಿಸಿದ್ದಾರೆ, ಮನೆ ಅಥವಾ ಭೂಮಿ ಇಲ್ಲದವರನ್ನು ಗಣನೆಗೆ ತಂದುಕೊಂಡೇ ಇಲ್ಲ,

ಈ ಪ್ರಾಯೋಜನೆಯನ್ನು ವಿರೋಧಿಸುತ್ತಿರುವವರು ತಮ್ಮಲ್ಲಿರುವ ವಾಗಾಡಂಬರದ ಆಯುಧವನ್ನು ಹೆಚ್ಚು ತಿಳಿವಳಿಕೆಯಿಂದ ಬಳಸಿಕೊಂಡು ಜನರ ಮತ್ತು ಅಧಿಕಾರಿಗಳ ನಡುವೆ ಉಂಟಾಗಿರುವ ಅಂತರವನ್ನು ತೊಡೆದುಹಾಕಲು ಯತ್ನಿಸಿದ್ದಲ್ಲಿ ಹೆಚ್ಚು ಉಪಯುಕ್ತವಾಗುತ್ತಿತ್ತು. ಅವರು ಅಧಿಕಾರಿಗಳ ಕಾರ್ಯದಲ್ಲಿನ ನ್ಯೂನತೆಗಳನ್ನು ಎತ್ತಿ ತೋರಿಸಿ ಪರಿಣಾಮಕಾರಿಯಾದ ಹಾಗೂ ಕಾರ್ಯಸಾಧುವಾದ ಬದಲಿ ವಿಧಾನಗಳನ್ನು ಸಲಹೆ ಮಾಡಿದ್ದಲ್ಲಿ, ಜನರ ಜೀವನದ ಗುಣಮಟ್ಟ ಸುಧಾರಿಸುವ ಧ್ಯೇಯಕ್ಕೆ, ಅದರಲ್ಲೂ ವಿಶೇಷವಾಗಿ ಅಭಿವೃದ್ಧಿಶೀಲ ದೇಶಗಳಲ್ಲಿನ ಜನರ ಜೀವನಮಟ್ಟ ಸುಧಾರಿಸುವುದಕ್ಕೆ, ಹೆಚ್ಚಿನ ಸೇವೆ ಸಲ್ಲಿಸಿದಂತಾಗುತ್ತಿತ್ತು.

ಎಂದೂ ಆಪಾದನೆ ಮಾಡಲಾಗುತ್ತಿದೆ. ನಿಜ, ನರ್ಮದಾ ನ್ಯಾಯಮಂಡಲಿಯು ಈ ಅಂಶವನ್ನು ಪರಿಗಣಿಸಿಲ್ಲ, ಆದರೆ ವಿಶ್ವ ಬ್ಯಾಂಕಿನ ನೆರವಿಗಾಗಿ ಮಾಡಿಕೊಂಡಿರುವ ಒಪ್ಪಂದದಲ್ಲಿ ನ್ಯಾಯಮಂಡಲಿಯ ನಿಬಂಧನೆಗಳನ್ನು ವಿಸ್ತರಿಸಲಾಗಿದೆ. ಭೂರಹಿತರನ್ನೂ ಗ್ರಾಮ ಸಮುದಾಯವನ್ನವಲಂಬಿಸಿ ಜೀವನೋಪಾಯ ನಡೆಸುತ್ತಿರುವವರೆಲ್ಲರನ್ನೂ ಈ ಪ್ರಾಯೋಜನೆಯಿಂದ ಬಾಧಿತರಾದವರನ್ನಾಗಿ ಪರಿಗಣಿಸಲಾಗಿದೆ. ಅಷ್ಟೇ ಅಲ್ಲ, ಕಾಲುವೆ ನಿರ್ಮಾಣಕ್ಕಾಗಿ ಹಾಗೂ ವಿಸ್ತರಣ ನಿರ್ಮಾಣಗಳಿಗಾಗಿ ಭೂಮಿ ಕಳೆದುಕೊಂಡವರನ್ನೂ ಬಾಧಿತರೆಂದು ಲೆಕ್ಕಕ್ಕೆ ತೆಗೆದುಕೊಳ್ಳಲಾಗಿದೆ. ವಿಶ್ವ ಬ್ಯಾಂಕಿನೊಂದಿಗೆ ಮಾಡಿಕೊಂಡಿರುವ ಈ ಒಪ್ಪಂದವನ್ನು 'ನರ್ಮದಾ ಕಂಟ್ರೋಲ್ ಅಥಾರಿಟಿ' ಹಾಗೂ 'ಸರ್ದಾರ್ ಸರೋವರ್ ನಿರ್ಮಾಣ ಸಲಹಾ ಸಮಿತಿ'ಯೂ ಅಂಗೀಕರಿಸಿ ಮೇಲೆ ನಮೂದಿಸಿದ ಜನರನ್ನು ಸ್ಥಳಾಂತರಿತವಾದವರಂತೆಯೇ, 'ಬಾಧಿತ'ರನ್ನಾಗಿ ಪರಿಗಣಿಸಿವೆ. ವಾಸ್ತವವಾಗಿ ಅವು ಕಾಡಿನಲ್ಲಿ ಯಾವುದೇ ಭೂಮಿ ಹೊಂದಿರದ, ಆದರೆ ಅಲ್ಲಿ ಪಾರಂಪರಿಕವಾಗಿ ವಾಸಿಸಿಕೊಂಡುಬಂದಿರುವ, ಬುಡಕಟ್ಟಿನ ಜನರನ್ನೂ 'ಬಾಧಿತ'ರನ್ನಾಗಿ ಪರಿಗಣಿಸಿವೆ. ಇದು, ಭಾರತವೂ ಸಹಿಹಾಕಿರುವ ಐಎಲ್ಓ (ಅಂತಾರಾಷ್ಟ್ರೀಯ ಶ್ರಮಜೀವಿ ಸಂಘಟನೆ) ರೀತಿ ನೀತಿಗಳಿಗೆ ಅನುಗುಣವಾಗಿಯೇ ಇದೆ. ಅಣೆಕಟ್ಟು ನಿರ್ಮಿತವಾದ ಸ್ಥಳದಲ್ಲಿನ ಗ್ರಾಮಗಳನ್ನೂ ಜನವಸಾಹತುಗಳನ್ನೂ 'ಬಾಧಿತ' ಎಂದು ಪರಿಗಣಿಸಲಾಗಿಲ್ಲ ಎಂದೂ ಹೇಳಲಾಗಿದೆ. ಆದರೆ ಇದೂ ನಿಜವಲ್ಲ. ಆರಂಭ ಘಟ್ಟದಲ್ಲಿ ಈ ಪ್ರಾಯೋಜನೆಯೊಂದಿಗೆ ಸಂಬಂಧ ಪಡೆದಿದ್ದ ನಾನು ಈ ಎಲ್ಲ ಅಂಶಗಳನ್ನೂ ವೈಯಕ್ತಿಕವಾಗಿ ತನಿಖೆ ಮಾಡಿದ್ದೇನೆ, ಮೇಲಿನ ಆಪಾದನೆಗಳೆಲ್ಲ ಸತ್ಯದೂರವಾದವುಗಳೆಂದು ನಾನು ಪೂರ್ಣ ವಿಶ್ವಾಸದಿಂದ ಹೇಳಬಲ್ಲೆ.

ಈ ಪ್ರಾಯೋಜನೆಯಿಂದ ಸ್ಥಳಾಂತರಿತವಾದ ಹಾಗೂ ಬಾಧಿತರಾದ ಜನರ ಪುನರ್‌ವಸತಿಗಾಗಿ ಅನೇಕ ಅತ್ಯುತ್ತಮ ಕ್ರಮಗಳನ್ನು ಸಲಹೆ ಮಾಡಿರಲಾಗಿದ್ದರೂ ಸಂಬಂಧಿತ ಸರಕಾರಗಳು ಅವನ್ನು ಯಥಾವತ್ತಾಗಿ ಹಾಗೂ ಶ್ರದ್ಧೆಯಿಂದ ಈಡೇರಿಸುತ್ತಿಲ್ಲವೆಂಬುದು ನಿಜ. ಒದಗಿಸಲಾದ ಹಾಗೂ ಸಾಧಿತವಾದ ಕಾರ್ಯಗಳ ನಡುವೆ ಭಾರಿ ಅಂತರವಿದೆ. ಮಧ್ಯಪ್ರದೇಶ ಸರಕಾರವಂತೂ ಆ ಕಾರ್ಯಗಳನ್ನು ಈಡೇರಿಸುವಲ್ಲಿ ತುಂಬ ಲೋಪವೆಸಗಿರುವಂತೆ ಕಂಡುಬರುತ್ತದೆ. ಸರಕಾರಗಳು ಬಾಧಿತರಾದವರಿಗೆ ಪರಿಹಾರವಾಗಿ ಹಣ ನೀಡುತ್ತಿವೆ. ಈ ಹಣದಿಂದ ಸೂಕ್ತ ಭೂಮಿಯನ್ನು ಕೊಳ್ಳುವ ಭಾರ ಬಾಧಿತರಾದವರ ಮೇಲೆಯೇ ಬಿದ್ದಂತಾಗಿದೆ. ಸರಕಾರವೇ ಸೂಕ್ತ ಭೂಮಿ ಪತ್ತೆಹಚ್ಚಿ ಬಾಧಿತರಿಗೆ ನೀಡಲು ಅಶಕ್ತವಾಯಿತೆಂದರೆ, ಬಾಧಿತ ಜನರು ಸೂಕ್ತ ಭೂಮಿ ಪತ್ತೆಹಚ್ಚಿ ಅವನ್ನು ಕೊಳ್ಳಲು ಸಮರ್ಥರಾಗುವರೆಂದು ನಿರೀಕ್ಷಿಸುವುದು ನಂಬಲಸಾಧ್ಯವಾದುದು. ಪುನರ್‌ವಸತಿ ಕಾರ್ಯಕ್ರಮದಲ್ಲಿನ ನ್ಯೂನತೆಗಳನ್ನು ಎತ್ತಿತೋರಿಸುತ್ತ ಅರುಂಧತಿ ರಾಯ್ ಹಾಗೂ ಮೇಧಾ ಪಾಟ್ಕರ್‌ರವರು ನಡೆಸುತ್ತಿರುವ ಚಳವಳಿ ತುಂಬ ಸಮರ್ಪಕವಾದುದೇ. ಪ್ರತಿ ಘಟ್ಟದಲ್ಲೂ ಅಣೆಕಟ್ಟು ನಿರ್ಮಾಣ ಕಾರ್ಯವು ಪುನರ್‌ವಸತಿ ನಿರ್ಮಿಸಿದ ನಂತರವಷ್ಟೆ ಮುಂದುವರಿಯಬೇಕೆಂದು ನ್ಯಾಯಮಂಡಲಿಯೇ ತಿಳಿಸಿದೆ. ವಾಸ್ತವವಾಗಿ ನಿರ್ಮಾಣ ಕಾರ್ಯ ಹಾಗೂ ಪುನರ್‌ವಸತಿ ಕಾರ್ಯಗಳ ನಡುವೆ ಒಂದು ವರ್ಷದ ಅಂತರವಿರಬೇಕು. ಹಾಗಾಗಿ ಪುನರ್‌ವಸತಿ ಕಾರ್ಯ ಮುಗಿಯುವವರೆಗೂ ಅಣೆಕಟ್ಟೆ ನಿರ್ಮಾಣ ಕಾರ್ಯ ನಿಲ್ಲಬೇಕು, ಪುನರ್‌ವಸತಿ ಕಾರ್ಯವು ಪ್ರತಿ ಘಟ್ಟದಲ್ಲೂ ಅಣೆಕಟ್ಟೆ ನಿರ್ಮಾಣ ಕಾರ್ಯಕ್ಕಿಂತ ಮುಂದಾಗಿರಬೇಕು ಎಂಬ ಅವರ ಹೇಳಿಕೆ ಶಾಸನಬದ್ಧವಾಗಿಯೂ ತುಂಬ ಸರಿಯಾದುದು.

ಸರ್ದಾರ್ ಸರೋವರ್ ಪ್ರಾಯೋಜನೆಯಿಂದಾಗಿ ಮಧ್ಯಪ್ರದೇಶದಲ್ಲಿ ೧೯೩ ಗ್ರಾಮಗಳು ಬಾಧಿತವಾಗಿವೆ. ಆದರೆ ಇವುಗಳಲ್ಲಿ ಯಾವೊಂದೂ ಪೂರ್ಣವಾಗಿ ಮುಳುಗಿಲ್ಲ – ಶೇ. ೧೦ರಿಂದ ಶೇ. ೮೦ರವರೆಗೆ ನಾನಾ ಪ್ರಮಾಣಗಳಲ್ಲಿ ಮುಳುಗಿವೆ. ಈ ಗ್ರಾಮಗಳನ್ನು ಸ್ಥಳೀಯವಾಗಿ ಹತ್ತಿರದ ಸ್ಥಳಗಳಿಗೆ ವರ್ಗಾಯಿಸಬೇಕಿದ್ದಿತು. ದಕ್ಷಿಣದಲ್ಲಿ ಸತ್ಪುರ ಬೆಟ್ಟ ಸಾಲಿನ ಬುಡದಿಂದ ಹಿಡಿದು ನದಿಯ ಎಡದಂಡೆಯ ಅಂಚಿನವರೆಗೆ, ಹಾಗೆಯೇ ಬಲದಂಡೆಯಲ್ಲಿ ವಿಂಧ್ಯಪರ್ವತಗಳ ಬುಡದಿಂದ ನದಿಯ ಬಲದಂಡೆಯ ಅಂಚಿನವರೆಗೆ ಇರುವ ಎಲ್ಲ ಭೂಮಿಗಳಿಗೂ ನೀರಾವರಿ ಒದಗಿಸುವ ಲಿಫ್ಟ್ ನೀರಾವರಿ ಯೋಜನೆಗಳನ್ನು ಆದಷ್ಟು ಆರಂಭದಲ್ಲೇ ಈಡೇರಿಸಬೇಕಿದ್ದಿತು. ಸುಮಾರು ೩,೦೦೦ ಸಣ್ಣ ನೀರಾವರಿ ಯೋಜನೆಗಳ ಪೈಕಿ ಕೇವಲ ೧೦೦೦. ಯೋಜನೆಗಳಷ್ಟೆ ಅಸ್ತಿತ್ವದಲ್ಲಿವೆ ಇಲ್ಲವೇ ನಿರ್ಮಿಸಲ್ಪಡುತ್ತಿವೆ. ಬೆಟ್ಟದ ಬುಡದ ಬಳಿಯ ಈ ಹಳ್ಳಿಗಳ ಸಮೀಪ ಕೊನೆಯ ಪಕ್ಷ ಕೆಲವು ನೂರು ಸಣ್ಣ ನೀರಾವರಿ ಯೋಜನೆಗಳನ್ನು ಆದಷ್ಟು ಮುಂದಾಗಿಯೇ ನಿರ್ಮಾಣಗೊಳಿಸಬಹುದಿದ್ದಿತು ಮತ್ತು ಅವುಗಳಿಗೆ ಹಾಗೆ ನೀರಾವರಿ ಸೌಲಭ್ಯ ಒದಗಿಸಿ ಪ್ರಾಯೋಜನೆಯಿಂದ ಸ್ಥಳೀಯವಾಗಿ ಬಾಧಿತರಾದ ಹಾಗೂ ಸ್ಥಳಾಂತರಿಸಲ್ಪಟ್ಟ ಜನರಿಗೆ ಅವನ್ನು ಒದಗಿಸಬಹುದಿದ್ದಿತು. ಇದರಿಂದ ಭೂಮಿಯ ಉಪಯುಕ್ತತೆ ಹಿಗ್ಗಿದಂತಾಗುತ್ತಿದ್ದಿತು. ಏಕೆಂದರೆ ಕಣಿವೆಯಲ್ಲಿ ನೀರಾವರಿ ಸೌಲಭ್ಯ ಒದಗಿಸಿದ ಭೂಮಿಯು ಮಳೆನೀರಿನ ಸೌಲಭ್ಯವಿರುವ ಭೂಮಿಗಿಂತ ಕೊನೆಯ ಪಕ್ಷ ಮೂರು ಪಟ್ಟು ಹೆಚ್ಚು ಉತ್ಪಾದಕವಾಗಿರುತ್ತದೆ. ಮಳೆನೀರಿನ ಬಳಕೆಯಿಂದ ಕೃಷಿ ಸಾಗಿಸುತ್ತಿರುವ ದೊಡ್ಡ ಕೃಷಿಕರಿಗೆ ನೀರಾವರಿ ಸೌಲಭ್ಯದ ಭೂಮಿ ಒದಗಿಸುವ ಮೂಲಕ ಅವರಿಂದ ಪ್ರಾಯೋಜನೆಗೆ ಬೇಕಾದ ಭೂಮಿ ಪಡೆದುಕೊಳ್ಳುವುದು ಹೆಚ್ಚು ಸುಲಭವಾಗುತ್ತಿದ್ದಿತು. ಪ್ರಾಯೋಜನೆಯಿಂದ ಬಾಧಿತರಾದ ಹಾಗೂ ಸ್ಥಳಾಂತರಿಸಲ್ಪಟ್ಟ ಜನರ ನಡುವೆ ಪುನರ್‌ಹಂಚಿಕೆ ಮಾಡಲೆಂದು ನೀರಾವರೀಕೃತ ಭೂಮಿಗಳ ಒಂದು ಸಂಚಯವನ್ನೇ ನಿರ್ಮಿಸಬಹುದಿದ್ದಿತು. ಇದು ಸಮಸ್ಯೆಯನ್ನು ಸಾಕಷ್ಟು ಹಿಂದೆಯೇ ಹಾಗೂ ಕಡಿಮೆ ಖರ್ಚಿನಲ್ಲಿ ಬಗೆಹರಿಸುತ್ತಿದ್ದಿತು. ಇದಕ್ಕಾಗಿ ತಗಲುತ್ತಿದ್ದ ಖರ್ಚನ್ನು ಪ್ರಾಯೋಜನೆಯ ಪುನರ್‌ವಸತಿ ಯೋಜನೆಯ ಹಣದಿಂದ ಪಡೆಯಬಹುದಿದ್ದಿತು. ಈಗಲೂ ಈ ಸಮಸ್ಯೆಯ ಪರಿಹಾರಕ್ಕೆ ಇಂತಹ ಕಾರ್ಯ ಕೈಗೊಳ್ಳಬಹುದಾಗಿದೆ. ಪ್ರತಿಯೊಂದು ಸಾಮಾಜಿಕ-ಆರ್ಥಿಕ ಸಮಸ್ಯೆಗೂ ಜನರೊಂದಿಗೆ ಸಮಾಲೋಚಿಸುವ ಮೂಲಕ ಒಂದು ತಾಂತ್ರಿಕ ಪರಿಹಾರ ಕಂಡುಹಿಡಿಯುವ ಸಾಧ್ಯತೆ ಯಾವತ್ತೂ ಇದ್ದೇ ಇದೆ.

ಆದರೆ, ಹೀಗೆ ಪರ್ಯಾಯ ಕ್ರಿಯೆಗಳನ್ನು ಸಲಹೆ ಮಾಡದೆ ಅಧಿಕಾರಿಗಳ ಮೇಲೆ ವಾಗಾಡಂಬರದ ದಾಳಿ ನಡೆಸುವುದು ಯಾರಿಗೂ ಎಷ್ಟು ಮಾತ್ರವೂ ನೆರವಾಗದು – ಪ್ರಾಯೋಜನೆಯಿಂದ ಬಾಧಿತರಾದ ಅಥವಾ ಸ್ಥಳಾಂತರಿಸಲ್ಪಟ್ಟ ಜನರಿಗಂತೂ ಎಷ್ಟು ಮಾತ್ರವೂ ನೆರವಾಗದು. ತೊಂದರೆಗಳು ಆಗುತ್ತವೆ ಎಂಬ ಕಾರಣದಿಂದ ಅಣೆಕಟ್ಟೆಗಳನ್ನು ನಿರ್ಮಿಸಲೇಬಾರದು. ಸರ್ದಾರ್ ಸರೋವರ ಪ್ರಾಯೋಜನೆಯನ್ನಂತೂ ನಿರ್ಮಿಸಲೇಬಾರದಿದ್ದಿತು. ಎಂದು ಹೇಳುವುದು ಪೂರ್ವಗ್ರಹ ಚಿಂತನೆಯ ಫಲವಷ್ಟೆ. ಅಣೆಕಟ್ಟೆಗಳನ್ನು ಈಗಷ್ಟೆ ಕಟ್ಟಲಾಗುತ್ತಿಲ್ಲ, ಯುಗಯುಗಾಂತರಗಳಿಂದ ಈ ಪರಿಪಾಠ ಬೆಳೆದುಕೊಂಡುಬಂದಿದೆ. ನೀರು ಸಾಗಿಸುವ ಸಾಧನಗಳು, ನೀರಾವರಿ ಕೆರೆ ವ್ಯವಸ್ಥೆಗಳು ಇವುಗಳೊಂದಿಗೆ ಮಧ್ಯಮ ಗಾತ್ರದ ಹಾಗೂ ಭಾರಿ ಪ್ರಮಾಣಗಳ ಅಣೆಕಟ್ಟುಗಳನ್ನು



ತಾರೀಖು ೨೮.೫.೨೦೦೬ರಂದು ಬೆಂಗಳೂರಿನ ನಯನ ಸಭಾಂಗಣದಲ್ಲಿ ನವಕರ್ನಾಟಕ ಪ್ರಕಟಿಸಿರುವ ಮಕ್ಸಿಂ ಗೋರ್ಕಿಯವರ 'ತಾಯಿ', ಐ. ಲಾವ್ರೆತ್‌ಸ್ಕಿಯವರ 'ಅರ್ನೆಸ್ಟೊ ಚೆ ಗುವಾರ' ಮತ್ತು ಪ್ರೊ॥ ಎ. ಎಸ್. ಮೂರ್ತಿರಾಯರ 'ಗಾಡ್' – ಈ ಮೂರು ಅನುವಾದಿತ ಕೃತಿಗಳ ಲೋಕಾರ್ಪಣೆ ಸಮಾರಂಭ ಜರುಗಿತು. ಪ್ರೊ॥ ಬರಗೂರು ರಾಮಚಂದ್ರಪ್ಪ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. 'ಹೊಸತು' ಸಂಪಾದಕ ಡಾ॥ ಜಿ. ರಾಮಕೃಷ್ಣ ಪುಸ್ತಕಗಳ ಅನಾವರಣ ಮಾಡಿದರು. ಈ ಕೃತಿಗಳ ಸಾರ್ವಕಾಲಿಕ ಪ್ರಸ್ತುತತೆ ಕುರಿತು ಡಾ॥ ಸಿದ್ದನಗೌಡ ಪಾಟೀಲರು ಭಾಷಣ ಮಾಡಿದರು. 'ಗಾಡ್' ಕೃತಿಯ ಅನುವಾದಕ ಶ್ರೀ ಎ. ಎಸ್. ಸುಬ್ಬರಾಮಯ್ಯ ಹಾಗೂ ಇತರರು ಭಾಗವಹಿಸಿದ್ದರು.

ತಲೆತಲಾಂತರಗಳಿಂದ ನಿರ್ಮಿಸಿಕೊಂಡು ಬರಲಾಗುತ್ತಿದೆ. ಸುಮಾರು ೨೦೦೦ ವರ್ಷಗಳ ಹಿಂದೆಯೇ ಭಾರಿ ಅಣೆಕಟ್ಟೆಯನ್ನು ನಿರ್ಮಿಸಲಾಯಿತು. ಈಜಿಪ್ಟಿನಲ್ಲಿ ಫಾರೋಗಳ ದಿನದಿಂದಲೂ ನೈಲ್ ನದಿಗೆ ಅಣೆಕಟ್ಟೆಗಳನ್ನು ಕಟ್ಟಿ ನದಿಯ ನೀರಿನ ಸದ್ಬಳಕೆ ಮಾಡಲಾಗುತ್ತಿದ್ದಿತು. ಅಣೆಕಟ್ಟೆಯು ಒಂದು ಸಾಧನವಷ್ಟೆ. ಅದರ ಗಾತ್ರ ಕಣಿವೆಯ ಅಥವಾ ಹೊಳೆಯ ಗಾತ್ರವನ್ನು ಅವಲಂಬಿಸಿರುತ್ತದೆ. ಸಣ್ಣ ನೀರು ಸಂಗ್ರಾಹಕ ರಚನೆಯೂ ಒಂದು ಅಣೆಕಟ್ಟೆಯೇ. ಗಾತ್ರ ರೀತ್ಯ ಭಾರಿ ಅಣೆಕಟ್ಟೆಗಳು ನೀರನ್ನು ಸಂಗ್ರಹಿಸಲಾಗುವ ಜಲಾನಯನ ಪ್ರದೇಶ ಅಥವಾ ನದಿಯ ಗಾತ್ರವನ್ನು ಅವಲಂಬಿಸಿ ದೊಡ್ಡವಾಗಿರುತ್ತವಷ್ಟೆ. ಇದೆಲ್ಲ ಪ್ರಮಾಣ ಅಥವಾ ದರ್ಜೆಯ ಪ್ರಶ್ನೆ. ಭಾರಿ ನದಿಗೆ ಅಡ್ಡಲಾಗಿ ಒಂದು ನೀರು ಸಂಗ್ರಾಹಕ ರಚನೆಯನ್ನು ನಿರ್ಮಿಸಲಾಗುವುದಿಲ್ಲ. ಹಾಗೆಯೇ ಸಣ್ಣ ಹೊಳೆಗೆ ಅಡ್ಡಲಾಗಿ ಒಂದು ದೊಡ್ಡ ಅಣೆಕಟ್ಟೆಯನ್ನು ನಿರ್ಮಿಸಲಾಗುವುದಿಲ್ಲ. ನೈಸರ್ಗಿಕ ಸ್ಥಳಲಕ್ಷಣ, ಭೌತಿಕ ವೈಶಿಷ್ಟ್ಯ, ಮಳೆ ಪ್ರಮಾಣ, ಜಲಾನಯನ ಪ್ರದೇಶದ ಗಾತ್ರ – ಇವು ಯಾವುದೇ ಪ್ರದೇಶದಲ್ಲಿ ನೀರು ಸಂಗ್ರಹಣ ರಚನೆ ನಿರ್ಮಿಸಬೇಕೋ ಅಥವಾ ನಿರ್ದಿಷ್ಟ ಪರಿಸ್ಥಿತಿಯಲ್ಲಿ ಭಾರಿ ಅಣೆಕಟ್ಟೆ ನಿರ್ಮಿಸುವುದು ಸೂಕ್ತವೋ ಎಂಬುದನ್ನು ನಿರ್ಧರಿಸುತ್ತವೆ. ಎಲ್ಲೆಡೆಗಳಲ್ಲೂ ಜಲ ಸಂಗ್ರಹಣ ರಚನೆಯನ್ನಾಗಲೀ ಅಥವಾ ಭಾರಿ ಅಣೆಕಟ್ಟೆಯನ್ನಾಗಲೀ ನಿರ್ಮಿಸುವುದು ಸಾಧ್ಯವಿಲ್ಲ. ಇವೆರಡೂ ಪರಸ್ಪರ ಪೂರಕವಾದುವು, ಆದರೆ ಒಂದು ಇನ್ನೊಂದರ ಬದಲಿ ಅಲ್ಲ. ಅಣೆಕಟ್ಟೆಯು ನದಿಯನ್ನಾಗಲೀ ಹೊಳೆಯನ್ನಾಗಲೀ ನಿರ್ನಾಮಗೊಳಿಸುವಂತಹುದಲ್ಲ, ಆದರೆ ಪ್ರವಾಹ ಬಂದಾಗ ಹೆಚ್ಚಿನ ನೀರನ್ನು ಹಿಡಿದಿಟ್ಟು ಅನಂತರ ಇಡೀ ವರ್ಷ ಜನಜೀವನ, ಸಸ್ಯಸಂಪತ್ತು ಹಾಗೂ ಪ್ರಾಣಿಕುಲಕ್ಕೆ ಜೀವನಾಧಾರವಾಗಿ ನೀರನ್ನು ನಿರಂತರವಾಗಿ ಹಾಗೂ ಕ್ರಮಬದ್ಧವಾಗಿ ಹರಿಬಿಡುತ್ತ ಆ ನದಿ ಅಥವಾ ಹೊಳೆಯನ್ನು ಚಿರಂತನಗೊಳಿಸುತ್ತದೆ. ಆದರೆ ದುರದೃಷ್ಟವಶಾತ್ ಅಣೆಕಟ್ಟೆಗಳನ್ನು ರಚನೆ ಹಾಗೂ ಯೋಜನೆಗನುಗುಣವಾಗಿ ಸೂಕ್ತ ರೀತಿಯಲ್ಲಿ ನಿರ್ವಹಿಸಲಾಗುತ್ತಿಲ್ಲ. ಈ ಕಾರ್ಯವನ್ನು ರಾಜಕೀಯ ನಾಯಕರ ಮರ್ಜಿಗೆ ಬಿಡಲಾಗಿದೆ. ಹಾಗಾಗಿ ಅಣೆಕಟ್ಟೆಗಳಿಗೆ, ಅದರಲ್ಲೂ ವಿಶೇಷವಾಗಿ ಬೃಹತ್ ಪ್ರಮಾಣದ ಅಣೆಕಟ್ಟೆಗಳಿಗೆ, ಕೆಟ್ಟ ಹೆಸರು ಬಂದಿದೆ. ಯಾವುದೇ ಯಂತ್ರಮುಟ್ಟನ್ನು ಕೆಟ್ಟದಾಗಿ ನಿರ್ವಹಿಸಿದಲ್ಲಿ ಅದು ಯಂತ್ರಮುಟ್ಟನ್ನೇನೂ ಕೆಟ್ಟುದನ್ನಾಗಿ ಮಾಡುವುದಿಲ್ಲ, ಆದರೆ ನಿರ್ವಹಣಕಾರರೇ ಕೆಟ್ಟವರಾಗುತ್ತಾರೆ. ಅಣೆಕಟ್ಟೆಗಳ ವಿಷಯದಲ್ಲಿ ಆಗುತ್ತಿರುವುದು ಇದೇ. ಬೆಂಕಿ, ಚಾಕು ಸ್ವತಃ ಕೆಟ್ಟವೇನೂ ಅಲ್ಲ. ಅವು ಕೇವಲ ಯಂತ್ರಮುಟ್ಟುಗಳು. ಅವುಗಳ ಸ್ವರೂಪವು ಅವನ್ನು ಹೇಗೆ ಬಳಸಲಾಗುತ್ತಿದೆ, ವಿಕಾಸಕ್ಕಾಗಿ ಬಳಸಲಾಗುತ್ತಿದೆಯೇ ಇಲ್ಲವೇ ವಿನಾಶಕ್ಕಾಗಿ ಬಳಸಲಾಗುತ್ತಿದೆಯೇ, ಎಂಬುದನ್ನು ಅವಲಂಬಿಸಿರುತ್ತದೆ. ಅವನ್ನು ಬಳಸಲಾಗುತ್ತಿರುವ ಮಾನವರೇ ಬಳಕೆಯ ರೀತಿಯನ್ನು ಅವಲಂಬಿಸಿ ಕೆಟ್ಟವರು ಅಥವಾ ಒಳ್ಳೆಯವರಾಗಿರುತ್ತಾರೆಯೇ ಹೊರತು ಯಂತ್ರಮುಟ್ಟುಗಳಲ್ಲ. ಪುನರ್‌ವಸತಿ ಕಾರ್ಯವನ್ನು ಅಧಿಕಾರಿಗಳು ಮಾನವೀಯತೆಯನ್ನು ಗಮನದಲ್ಲಿಟ್ಟುಕೊಂಡು ಮಾಡಿದಲ್ಲಿ, ಸರ್ದಾರ್ ಸರೋವರ ಪ್ರಾಯೋಜನೆಯಲ್ಲಿ ಕಂಡುಬರುತ್ತಿರುವಂಥ ಸಮಸ್ಯೆಗಳು ಉದ್ಭವಿಸುವುದೇ ಇಲ್ಲ. ಉದಾಹರಣೆಗೆ, ಐವತ್ತರ ದಶಕದಲ್ಲಿ ನಿರ್ಮಿತವಾದ ಗಾಂಧಿ ಸಾಗರ್ ಅಣೆಕಟ್ಟೆಯ ವಿಷಯದಲ್ಲಿ ಇದು ಎದ್ದು ಕಾಣುತ್ತಿದೆ. ಆಗ ಅಧಿಕಾರಿಗಳು ಮಾನವೀಯತೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಪರಿಹಾರ-ಪುನರ್‌ವಸತಿ ಕಾರ್ಯ ನಿರ್ವಹಿಸುವುದು ಸಾಧ್ಯ ಎಂದು ತೋರಿಸಿಕೊಟ್ಟರು. ಹಾಗಾಗಿಯೇ ಅಲ್ಲಿ ಸರ್ದಾರ್ ಸರೋವರ ಪ್ರಾಯೋಜನೆಯಲ್ಲಿ ಕಾಣಬರುತ್ತಿರುವಂಥ ಸಮಸ್ಯೆಗಳು ಕಾಣಬರಲೇ ಇಲ್ಲ.

ಈ ಪ್ರಾಯೋಜನೆಯನ್ನು ವಿರೋಧಿಸುತ್ತಿರುವವರು ತಮ್ಮಲ್ಲಿರುವ ವಾಗಾಡಂಬರದ ಆಯುಧವನ್ನು ಹೆಚ್ಚು ತಿಳಿವಳಿಕೆಯಿಂದ ಬಳಸಿಕೊಂಡು ಜನರ ಮತ್ತು ಅಧಿಕಾರಿಗಳ ನಡುವೆ ಉಂಟಾಗಿರುವ ಅಂತರವನ್ನು ತೊಡೆದುಹಾಕಲು ಯತ್ನಿಸಿದ್ದಲ್ಲಿ ಹೆಚ್ಚು ಉಪಯುಕ್ತವಾಗುತ್ತಿತ್ತು. ಅವರು ಅಧಿಕಾರಿಗಳ ಕಾರ್ಯದಲ್ಲಿನ ನ್ಯೂನತೆಗಳನ್ನು ಎತ್ತಿ ತೋರಿಸಿ ಪರಿಣಾಮಕಾರಿಯಾದ ಹಾಗೂ ಕಾರ್ಯಸಾಧುವಾದ ಬದಲಿ ವಿಧಾನಗಳನ್ನು ಸಲಹೆ ಮಾಡಿದ್ದಲ್ಲಿ, ಜನರ ಜೀವನದ ಗುಣಮಟ್ಟ ಸುಧಾರಿಸುವ ಧ್ಯೇಯಕ್ಕೆ, ಅದರಲ್ಲೂ ವಿಶೇಷವಾಗಿ ಅಭಿವೃದ್ಧಿಶೀಲ ದೇಶಗಳಲ್ಲಿನ ಜನರ ಜೀವನಮಟ್ಟ ಸುಧಾರಿಸುವುದಕ್ಕೆ, ಹೆಚ್ಚಿನ ಸೇವೆ ಸಲ್ಲಿಸಿದಂತಾಗುತ್ತಿತ್ತು.

ಮೂಲ : ಭವಾನಿ ಶಂಕರ್ ಬೆಂಕಿಪುರ್
ಅನುವಾದ : **ಕೆ. ಎಲ್. ಗೋಪಾಲಕೃಷ್ಣ ರಾವ್**
ನಂ. ೨೬೧, ೨ನೇ ಅಡ್ಡರಸ್ತೆ, ಸಿ.ಟಿ. ಬೆಡ್, ಬನಶಂಕರಿ ೨ನೇ ಹಂತ
೩ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

# ನಾನು, ಅವಳು ಮತ್ತು ಕಡಲು



**ಅ**ಣಕಿಸುವಂತಿರುವ ಅವಳ ಕಪ್ಪು ಬುರ್ಕಾವನ್ನು ಲೆಕ್ಕಿಸದೆ
ನಾನು, ಅವಳೊಂದಿಗೆ ಎಷ್ಟೋ ಬಾರಿ
ಕಡಲಂಚಿನಲ್ಲಿ ವಿಹರಿಸಿದ್ದೇನೆ;
ಮನಸ್ಸು ಆರ್ದ್ರಗೊಂಡಾಗಲೆಲ್ಲಾ
ಕಣ್ಣ ಸಂಜ್ಞೆಯಲ್ಲೇ ಸುಖಿಸಿದ್ದೇನೆ...

ಈ ಭೂಮಿ, ಮುಗಿಲು, ಮನುಷ್ಯ, ಪ್ರೀತಿ,
ಸಂಬಂಧಗಳೆಂದರೆ ಅವಳಿಗೀಗ ಅಲರ್ಜಿ...

ಈಗೀಗ ಕಡಲು ಕೂಡ ಅವಳ ಗುಲಾಮನಂತೆ
ತನ್ನೊಡಲ ಅಲೆಗಳ ನಿಯಂತ್ರಣ ಮರೆತು
ಸದಾ ಅವಳನ್ನೇ ಕನವರಿಸುತ್ತದೆ;
ಪಾದಗಳಡಿಗೆ ಮೃದು ಅಲೆಗಳ ನೂಕಿ
ಅವಳನ್ನು ಹೊತ್ತು ಮೆರೆದಂತೆ ಭ್ರಮಿಸುತ್ತದೆ...

ಮೊನ್ನೆ, ಅವಳು ಒಂಟಿಯಾಗಿ ದಡದಲ್ಲಿ ವಿರಮಿಸುತ್ತಿದ್ದಳು
ದುತ್ತನೆ ಎರಗಿದ ಸುನಾಮಿಯ ಆಲಿಂಗನಕ್ಕೆ
ಅವಳೂ ಅಲೆಯಾದಳು
ಕಡಲು ಕಪ್ಪಾಯಿತು
ನಾನೋ ಕಥೆಯಾದೆ...

**ಮಂಜು ಶೆಟ್ಟರ್**
ಕೇರಾಫ್ ಈರಪ್ಪ ಎಂ. ಕಂಬಳಿ, ಡಿ-೧೫೪, ಜೀವನಬೀಮಾ ನಗರ
ಬೆಂಗಳೂರು - ೫೬೦ ೦೭೫

# ಮನೋಲೈಂಗಿಕ ಬೆಳವಣಿಗೆ

ಡಾ|| ಸಿ. ಆರ್. ಚಂದ್ರಶೇಖರ್

**ಹು**ಟ್ಟುವ ಮಗು ಗಂಡೋ-ಹೆಣ್ಣೋ ಎಂಬುದು ಗರ್ಭಧಾರಣೆಯ ಕ್ಷಣದಲ್ಲೇ ನಿರ್ಧಾರವಾಗಿ ಬಿಡುತ್ತದೆ. ಪುರುಷನ ವೀರ್ಯಾಣುವಿನಲ್ಲಿ x ವರ್ಣ ತಂತುವಿದ್ದರೆ ಹುಟ್ಟುವ ಮಗು ಹೆಣ್ಣು, y ವರ್ಣ ತಂತುವಿದ್ದರೆ ಮಗು ಗಂಡು. ಅದಕ್ಕೆ ತಕ್ಕಂತೆ ಗಂಡಿನಲ್ಲಿ ಪುರುಷತನದ ಲಕ್ಷಣಗಳೂ, ಹೆಣ್ಣಿನಲ್ಲಿ ಸ್ತ್ರೀತನದ ಲಕ್ಷಣಗಳೂ ಕಾಣಿಸಿಕೊಳ್ಳುತ್ತವೆ. ಹುಟ್ಟಿದ ಎರಡು ವರ್ಷಗಳ ತನಕ, ಮಗುವಿಗೆ ತಾನು ಗಂಡೋ ಅಥವಾ ತಾನು ಹೆಣ್ಣೋ ಎಂಬುದು ಗೊತ್ತಿರುವುದಿಲ್ಲ. ಆಮೇಲೆ ಕ್ರಮೇಣ, ಇತರರ ಹೇಳಿಕೆ-ಮಾತುಕತೆಯಿಂದ, ಮಗುವಿಗೆ ತನ್ನ ಲಿಂಗ ಯಾವುದು ಎಂಬುದು ಅರ್ಥವಾಗತೊಡಗುತ್ತದೆ. ತಾನು ಗಂಡು – ತನಗೆ ಶಿಶ್ನವಿದೆ. ತಾನು ಹೆಣ್ಣು – ತನಗೆ ಶಿಶ್ನವಿಲ್ಲ ಎಂದು ತಿಳಿಯತೊಡಗುತ್ತದೆ. ತನ್ನ ತಂದೆ, ತನ್ನ ಅಣ್ಣ, ತನ್ನ ದೊಡ್ಡಪ್ಪ ತನ್ನ ತಾತನಂತೆ ತಾನು ಗಂಡಸು ಎಂದು ಗಂಡು ಮಗು ಅರ್ಥಮಾಡಿಕೊಂಡರೆ; ತನ್ನ ತಾಯಿ, ಅಕ್ಕ, ದೊಡ್ಡಮ್ಮ, ಅಜ್ಜಿಯಂತೆ ತಾನು ಹೆಂಗಸು ಎಂದು ಹೆಣ್ಣು ಮಗು ಅರ್ಥಮಾಡಿಕೊಳ್ಳುತ್ತದೆ. 'ನೀನು ಹುಡುಗ, ಪ್ಯಾಂಟು ಷರ್ಟು ಹಾಕಿಕೋ. ಹುಡುಗರ ಜೊತೆ ಆಟವಾಡು. ಬ್ಯಾಟು, ಚೆಂಡು, ಪಿಸ್ತೂಲು, ಕ್ರಿಕೆಟ್, ಫುಟ್‌ಬಾಲ್ ಇಂತಹ ಗಂಡಸರ ಆಟವನ್ನು ಆಡು', 'ನೀನು ಹುಡುಗಿ, ಲಂಗ-ಫ್ರಾಕ್ ಹಾಕಿಕೋ. ಕುಂಟೇಬಿಲ್ಲೆ, ಅಡುಗೆ ಮಾಡುವ, ಮಗುವಿನ ಪಾಲನೆ ಮಾಡುವಂತೆ, ಗೊಂಬೆಗಳನ್ನಿಟ್ಟುಕೊಂಡು ಆಡು' ಎಂದು ಮಗುವಿಗೆ ಲಿಂಗ-ನಿರ್ದಿಷ್ಟ ಉಡುಪು-ಚಟುವಟಿಕೆಗಳನ್ನು ಮಾಡಲು ಪ್ರೋತ್ಸಾಹಿಸುತ್ತೇವೆ. ಜೊತೆಗೆ ಲಿಂಗ-ನಿರ್ದಿಷ್ಟ ಭಾವನೆಗಳನ್ನು, ಪಾತ್ರ ಲಕ್ಷಣಗಳನ್ನು ಹೇಳಿಕೊಡುತ್ತೇವೆ. 'ನೀನು ಹುಡುಗ, ಧೈರ್ಯವಾಗಿರಬೇಕು. ಮುನ್ನುಗ್ಗಬೇಕು. ಅನ್ಯಾಯ ಕಂಡರೆ ಪ್ರತಿಭಟಿಸಬೇಕು. ಆಕ್ರಮಣ ಮಾಡಲು ಹಿಂಜರಿಯಬಾರದು. ಅಳಬಾರದು, ನಾಚಿಕೊಳ್ಳಬಾರದು, ಗಟ್ಟಿ ಧ್ವನಿಯಲ್ಲಿ ಜೋರಾಗಿ ಮಾತಾಡಬೇಕು, ದೊಡ್ಡವನಾಗಿ, ಹಣ ಸಂಪಾದಿಸಿ, ಅಪ್ಪ ಅಮ್ಮನನ್ನು ಸಾಕಬೇಕು' ಇತ್ಯಾದಿ. 'ನೀನು ಹುಡುಗಿ. ಮೃದುವಾಗಿ ಮಾತನಾಡಬೇಕು. ಪ್ರೀತಿಯಿಂದ ಇತರರ ಸೇವೆ ಮಾಡಬೇಕು. ಅಡುಗೆ ಮಾಡುವುದನ್ನು, ಮನೆಯನ್ನು ಒಪ್ಪ ಓರಣವಾಗಿ ಇಡುವುದನ್ನು ಕಲಿಯಬೇಕು. ಗಟ್ಟಿಯಾಗಿ ಮಾತನಾಡಬಾರದು, ಕೋಪಿಸಿಕೊಂಡು ಕಿರುಚಬಾರದು. ಅನ್ಯಾಯವಾದರೂ, ಮೌನವಾಗಿ ಸಹಿಸಿಕೊಳ್ಳಬೇಕು. ಮನೆಯವರ ಸುಖ-ಸಂತೋಷಕ್ಕಾಗಿ ನಿನ್ನ ಸುಖವನ್ನು ತ್ಯಾಗಮಾಡಬೇಕು' ಇತ್ಯಾದಿ.

ಭಯಪಡುವ, ನಾಚಿಕೊಳ್ಳುವ, ಅಳುವ ಹುಡುಗನನ್ನು 'ಹೆಣ್ಣಿಗ' ಎಂದೂ, ಧೈರ್ಯದಿಂದ ಮುನ್ನುಗ್ಗುವ, ಜೋರುದನಿಯಲ್ಲಿ ಮಾತನಾಡಿ ಪ್ರತಿಭಟಿಸುವ ಹುಡುಗಿಯನ್ನು ಗಂಡುಬೀರಿ ಎಂದೂ ಟೀಕಿಸುತ್ತೇವೆ. ಗಂಡು ಎಂದರೆ 'ನಾಯಕ', ಹೆಣ್ಣು ಎಂದರೆ ನಾಯಕಿ ಅಲ್ಲ, 'ಅನುಯಾಯಿ' ಎಂಬ ಲಿಂಗ ನಿರ್ದಿಷ್ಟ ಲಕ್ಷಣ/ಪಾತ್ರವನ್ನು ಮಕ್ಕಳ ಮುಂದೆ ಇಡುತ್ತೇವೆ. ಹೀಗಾಗಿ ಮಕ್ಕಳು ಹರೆಯಕ್ಕೆ ಕಾಲಿಡುವ ವೇಳೆಗೆ, ಹುಡುಗ-ಪುರುಷನ ಗುಣಲಕ್ಷಣಗಳನ್ನು, ಹುಡುಗಿ-ಸ್ತ್ರೀಯ ಗುಣಲಕ್ಷಣ ನಡೆವಳಿಕೆಗಳನ್ನೂ ಮೈಗೂಡಿಸಿಕೊಳ್ಳುತ್ತಾರೆ.

ಹರೆಯದಲ್ಲಿ ಲೈಂಗಿಕ ಹಾರ್ಮೋನುಗಳ ಸ್ರಾವದಿಂದ, ಲಿಂಗನಿರ್ದಿಷ್ಟ ದೈಹಿಕ ಬದಲಾವಣೆಗಳು ವೇಗವಾಗಿ ನಡೆಯುತ್ತವೆ. ಹಾಗೆಯೇ ಮನಸ್ಸಿನಲ್ಲಿ ಲೈಂಗಿಕ ಆಸೆ-ಭಾವನೆಗಳೂ ಕಾಣಿಸಿಕೊಳ್ಳುತ್ತವೆ. ಹುಡುಗನಿಗೆ ಹುಡುಗಿಯರನ್ನು ಕಾಣಲು, ಅವರೊಡನೆ ಮಾತನಾಡಲು, ಅವರ ಅಂಗಾಂಗಗಳನ್ನು ನೋಡಲು ಹಾಗೂ ಅವರಲ್ಲಿ 'ಲೈಂಗಿಕ ಅಥವಾ ಜೀವನ ಸಂಗಾತಿಯನ್ನು ಅರಸಲು' ಆಸೆಗಳು ಮೂಡುತ್ತವೆ. ಹಾಗೆಯೇ ಹುಡುಗಿಗೆ ಹುಡುಗರನ್ನು ನೋಡಲು, ಅವರೊಡನೆ ಮಾತನಾಡಲು ಭಯವಾಗತೊಡಗುತ್ತದೆ. ಆದರೆ ಮನಸ್ಸಿನಲ್ಲಿ ತನ್ನನ್ನು ಪ್ರೀತಿಸುವ, ತನಗೆ ಆಸರೆ ನೀಡಬಲ್ಲ 'ಜೀವನ ಸಂಗಾತಿ'ಯನ್ನು ಆಯ್ದುಕೊಳ್ಳಲು ಬಯಕೆ ಮೂಡುತ್ತದೆ. 'ಹುಡುಗರು ಹುಷಾರು. ಹುಡುಗಿಯರನ್ನು ಕೆಡಿಸಲು ಕಾಯುತ್ತಿರುತ್ತಾರೆ. ಹುಡುಗರಿಂದ ದೂರ ಇರು. ಅವರೊಡನೆ ಹೆಚ್ಚು ಮಾತು ಸಲಿಗೆ ಬೇಡ' ಎಂಬ ತಾಯಿ, ಅಕ್ಕ, ಅಜ್ಜಿಯರ ಎಚ್ಚರಿಕೆ ಮಾತುಗಳು ಅಥವಾ ಸಹ ವಯಸ್ಕರ ಅನುಭವಗಳು ಹುಡುಗಿಗೆ ಹುಡುಗರನ್ನು ಕಂಡರೆ ಭಯವನ್ನುಂಟುಮಾಡುತ್ತವೆ.

'ಹುಡುಗ ಎಂದ ಮೇಲೆ ಹುಡುಗಿಯರನ್ನು ಕೀಟಲೆ ಮಾಡಬೇಕು. ಆಗಲೇ ಹುಡುಗ – ನಿಜವಾದ ಗಂಡು' ಎಂಬ ಪಾಠ ಜೊತೆ ವಯಸ್ಕರಿಂದ ಹುಡುಗನಿಗೆ ಸಿಗುತ್ತದೆ. ಜೊತೆಗೆ ನಮ್ಮ 'ಸಿನೆಮಾ'ಗಳು ಈ ಪಾಠವನ್ನು ಬಹಳ ಚೆನ್ನಾಗಿ ಹರೆಯದವರಿಗೆ ಕಲಿಸುತ್ತವೆ. ಹೀರೋ-ವಿಲನ್‌ಗಳು ಹುಡುಗಿಯರನ್ನು ಚುಡಾಯಿಸುವುದನ್ನು ನೋಡಿದ ಹುಡುಗರಿಗೆ ತಾವೂ ಹಾಗೆಯೇ ಮಾಡಬೇಕೆನಿಸುತ್ತದೆ. 'ಈವ್ ಟೀಸಿಂಗ್' ಈ ರೀತಿ ಶುರುವಾಗುತ್ತದೆ. ಹುಡುಗಿಯರ ಕಾಲೇಜು ಬಳಿ ಹುಡುಗರ ಗುಂಪೇ ನೆರೆದಿರುತ್ತದೆ!

ಹುಡುಗ ಹುಡುಗಿಯರನ್ನು ಆಕರ್ಷಿಸಲು, ಅವರ ಗಮನ ಸೆಳೆಯಲು ಹಾಗೆಯೇ ಹುಡುಗಿ, ಹುಡುಗರಿಗೆ ಆಕರ್ಷಣೀಯವಾಗಿ ಕಾಣಲು ಪ್ರಯತ್ನ ಮಾಡುತ್ತಾರೆ. ಅಲಂಕಾರ, ಫ್ಯಾಶನ್, ಹಾವ, ಭಾವ, ಮಾತು, ನಡೆವಳಿಕೆಗಳು ಇದಕ್ಕೆ ಪೂರಕವಾಗಿರುತ್ತವೆ. ಪ್ರಸಕ್ತ ಕಾಲದಲ್ಲಿ ಹುಡುಗರು 'ಗರ್ಲ್‌ಫ್ರೆಂಡ್'ಗಳಿಗಾಗಿ ಹುಡುಗಿಯರು 'ಬಾಯ್‌ಫ್ರೆಂಡ್'ಗಳಿಗಾಗಿ ಹಾತೊರೆಯುತ್ತಾರೆ. ಪಕ್ಕಪಕ್ಕ ಕುಳಿತು ಮಾತನಾಡಲು, ಹೋಟೆಲು, ಪಾರ್ಕು, ಸಿನೆಮಾ, ಪಿಕ್‌ನಿಕ್‌ಗಳಲ್ಲಿ ಹುಡುಗ-ಹುಡುಗಿಯರು ಜೊತೆಯಾಗಿದ್ದು 'ಎಂಜಾಯ್' ಮಾಡಲು ಇಷ್ಟಪಡುತ್ತಾರೆ. ಹರೆಯದ ಪ್ರೇಮ – Teenage Love – ಜೀವನ ಸಂಗಾತಿಗಾಗಿ ಹುಡುಕಾಟ ಪ್ರಾರಂಭಗೊಳ್ಳುತ್ತದೆ. ರೋಮಿಯೋ ಜೂಲಿಯೆಟ್, ಲೈಲಾ ಮಜ್ನು ಅಥವಾ ಯಾವುದೇ ಜನಪ್ರಿಯ ಚಲನಚಿತ್ರಗಳ ಹೀರೋ-ಹೀರೋಯಿನ್‌ಗಳನ್ನು ಅನುಕರಿಸಲು, ಅವರಂತೆ 'ಅಮರ ಪ್ರೇಮಿ'ಗಳಾಗಲು ಸಿದ್ಧರಾಗುತ್ತಾರೆ. ಈ ಆಸೆ ಅವಸರದಲ್ಲಿ, ಕಣ್ಣಿದ್ದೂ ಕುರುಡರಂತೆ, ಕಿವಿ ಇದ್ದೂ ಕಿವುಡರಂತೆ, ಬುದ್ಧಿ ಇದ್ದರೂ ಬುದ್ಧಿಹೀನರಂತೆ, ಯೋಗ್ಯರಲ್ಲದ ವ್ಯಕ್ತಿಯನ್ನು 'ಜೀವ

ಮಾಡಿ, ಅಪಾಯಕ್ಕೆ ಸಿಕ್ಕಿಹಾಕಿಕೊಳ್ಳುತ್ತಾರೆ. ಇಂತಹ ಜೋಡಿಗಳು ಮನೆಯಿಂದ ಓಡಿಹೋಗಿ, ಅವಸರದಲ್ಲಿ ಮದುವೆಯಾಗಿ ಅಥವಾ ವಿವಾಹಪೂರ್ವ ಲೈಂಗಿಕ ಸಂಪರ್ಕ ಮಾಡಿ, ಸಂಸಾರ ಹೂಡಿ ಅತ್ಯಲ್ಪ ಕಾಲದಲ್ಲೇ ಭ್ರಮನಿರಸನಗೊಂಡು, ತಮ್ಮ ಜೀವನವನ್ನು ಹಾಳು ಮಾಡಿಕೊಳ್ಳುತ್ತಾರೆ.

ಹರೆಯದಲ್ಲಿ ಜನನಾಂಗಗಳು ಅಥವಾ ಲೈಂಗಿಕ ಬಯಕೆಯನ್ನು ಪ್ರಚೋದಿಸುವ ಅಂಗಾಂಗಗಳು, ಹರೆಯದವರ ಮನಸ್ಸನ್ನು ಸೆಳೆಯುತ್ತವೆ. ಹುಡುಗಿಯ ತುಟಿ, ಕೆನ್ನೆಗಳು, ಸ್ತನಗಳು, ಪೃಷ್ಠ, ತೊಡೆಗಳು; ಹುಡುಗನ ಎತ್ತರದ ನಿಲುವು, ವಿಶಾಲವಾದ ರೋಮ ಯುಕ್ತ ಎದೆ, ಹುರಿಗೊಂಡ ಸ್ನಾಯುಗಳು ಪರಸ್ಪರ ಆಕರ್ಷಣೆಯ ಕೇಂದ್ರಗಳಾಗುತ್ತವೆ. ಅವುಗಳನ್ನು ನೋಡಲು, ಮುಟ್ಟಲು ಅವರ ಮನಸ್ಸು ಹಾತೊರೆಯ ತೊಡಗುತ್ತವೆ, ಹೀಗಾಗಿ ನಗ್ನ ಚಿತ್ರಗಳು, ಫೋಟೋ ವಿಡಿಯೋಗಳನ್ನು ಕದ್ದುಮುಚ್ಚಿ ನೋಡಲು ಹರೆಯದವರು ಪ್ರಾರಂಭಿಸುತ್ತಾರೆ. ಹುಡುಗ ತನ್ನ ತಾಯಿ, ಅಕ್ಕ, ತಂಗಿ ಅಥವಾ ಪರಿಚಯದ ಸ್ತ್ರೀಯರ ಅಂಗಾಂಗಗಳನ್ನು ನೋಡಲು ತವಕಿಸಬಹುದು. ಬಚ್ಚಲುಮನೆ, ಮಲಗುವ ಕೋಣೆಗಳನ್ನು ಇಣುಕಿ ನೋಡಬಹುದು ಅಥವಾ ಸುಂದರವಾದ ಸ್ತ್ರೀಯರನ್ನು ಸ್ಪರ್ಶಿಸಿದಂತೆ ಕಲ್ಪಿಸಿಕೊಂಡು ಸುಖಪಡಬಹುದು. ಜೊತೆಗೇ ತಪ್ಪಿತಸ್ಥಭಾವನೆ/ಪಾಪಪ್ರಜ್ಞೆಯಿಂದಲೂ ಬಳಲಬಹುದು. ಇದು ಹುಡುಗಿಯರಲ್ಲೂ ಆಗ ಬಹುದು. ಲೈಂಗಿಕ 'ಫ್ಯಾಂಟಸಿ' ಈ ವಯಸ್ಸಿನಲ್ಲಿ ಬಹಳ ಸಾಮಾನ್ಯ. ಇದು ಕನಸಿನಲ್ಲಿ ಇನ್ನೂ ಮುಕ್ತವಾಗಿ ಕಾಣಿಸಿಕೊಳ್ಳಬಹುದು.

ಈ ಬಗೆಯ ಲೈಂಗಿಕ ನಡೆವಳಿಕೆ, ಕಲ್ಪನೆಗಳು, ಜೊತೆಗೆ ಹಸ್ತಮೈಥುನ ಮನೋಲೈಂಗಿಕ ಬೆಳವಣಿಗೆ ಯಲ್ಲಿ ಸಹಜವಾದ ನೈಸರ್ಗಿಕವಾದ ಹಂತಗಳೆಂದು ಮನಶ್ಶಾಸ್ತ್ರಜ್ಞರು ಹೇಳುತ್ತಾರೆ. ''ಏಕಾಂತದಲ್ಲಿ, ಬಟ್ಟೆ ಕಳಚಿ ಕನ್ನಡಿಯ ಮುಂದೆ ನಿಂತು ತನ್ನ ದೇಹವನ್ನು ನೋಡಿಕೊಳ್ಳುವುದು, ಸ್ನಾನಮಾಡುವಾಗ, ಹಾಸಿಗೆ ಯಲ್ಲಿದ್ದಾಗ ತನ್ನ ಜನನಾಂಗವನ್ನು ಸ್ಪರ್ಶಿಸಿ ಸಂತೋಷ ಪಡುವುದು. ಜನನಾಂಗವನ್ನು ಕೈನಿಂದ ಅಥವಾ ಇತರ ವಸ್ತುವಿನಿಂದ ಪ್ರಚೋದಿಸಿ ಸ್ಪರ್ಶಸುಖವನ್ನು ಅನಂದಿಸುವುದು ಅಥವಾ ಲೈಂಗಿಕ ಕ್ರಿಯೆಯನ್ನು ನಡೆಸಿದಂತೆ ಕಲ್ಪಿಸಿಕೊಳ್ಳುವುದು, ಕಲ್ಪನೆಯಲ್ಲೇ ಲೈಂಗಿಕ ಸಂಗಾತಿಯೊಂದಿಗೆ ಕಾಮಕೇಳಿ ಮಾಡಿದಂತೆ ಊಹಿಸಿ ಕೊಂಡು ಸಂತೋಷಪಡುವುದು'' ಹರೆಯದಲ್ಲಿ ಅತ್ಯಂತ ಸಾಮಾನ್ಯ ಲೈಂಗಿಕ ಅಭಿವ್ಯಕ್ತಿ. ನೂರಕ್ಕೆ ನೂರು ಹುಡುಗರು, ನೂರಕ್ಕೆ ಮೂವತ್ತು ಹುಡುಗಿಯರು ಹಸ್ತ ಮೈಥುನ ಮಾಡಿಕೊಳ್ಳುತ್ತಾರೆ. ಆದರೆ ನಮ್ಮಲ್ಲಿ ಹಸ್ತ ಮೈಥುನದ ಬಗ್ಗೆ ಬಹಳ ಭಯವಿದೆ. ಅದು ಅಪಾಯಕಾರಿ, ದೇಹ ಮತ್ತು ಲೈಂಗಿಕ ಶಕ್ತಿಯನ್ನು ಅದು ಕುಗ್ಗಿಸಿಬಿಡುತ್ತದೆ ಎಂದು ಜನ ತಪ್ಪಾಗಿ ತಿಳಿಯುತ್ತಾರೆ. ಹಸ್ತಮೈಥುನ ಮಾಡಿಕೊಂಡ ಪ್ರತಿಯೊಬ್ಬ ಹುಡುಗ-ಹುಡುಗಿ ಭಯ, ನಾಚಿಕೆ, ಪಾಪಪ್ರಜ್ಞೆಯಿಂದ ಬಳಲುತ್ತಾರೆ. ಇದು ಸಲ್ಲದು. ಹಸ್ತಮೈಥುನ ಮನೋಲೈಂಗಿಕ ಬೆಳವಣಿಗೆಗೆ ಸಹಾಯಕಾರಿ. ಅದೊಂದು ಸುರಕ್ಷಿತ ಲೈಂಗಿಕ ಅಭಿವ್ಯಕ್ತಿ ಎನ್ನುವುದನ್ನು ಎಲ್ಲರೂ ಗಮನಿಸಬೇಕು. ಗಂಡು-ಹೆಣ್ಣಿನ ನಡುವಿನ ಲೈಂಗಿಕ ಆಕರ್ಷಣೆ, ಲೈಂಗಿಕ ಕ್ರಿಯೆಯ ವಿಧಿ ವಿಧಾನ, ಅದರಿಂದ ದೊರಕುವ ಆನಂದ-ಸುಖದ ಬಗ್ಗೆ ಹರೆಯದವರು ಉತ್ಪ್ರೇಕ್ಷಿತ ಕಲ್ಪನೆ ಮಾಡಿಕೊಳ್ಳುತ್ತಾರೆ. ಮುದ್ರಣ ಮತ್ತು ದೃಶ್ಯಮಾಧ್ಯಮ ಜೊತೆಗೆ ಸಹವಯಸ್ಕರ ಅನುಭವ/ಹೇಳಿಕೆಗಳಿಂದ ಪ್ರಚೋದಿತರಾಗುತ್ತಾರೆ. ಯಾವುದು ಸರಿ – ಸಹಜ, ಯಾವುದು ತಪ್ಪು – ಅಸಹಜ ತಿಳಿಯದೇ ಗೊಂದಲಕ್ಕೀಡಾಗುತ್ತಾರೆ. ಇದರ ಬಗ್ಗೆ ವೈಜ್ಞಾನಿಕ ಮಾಹಿತಿ ಹಾಗೂ ತಿಳುವಳಿಕೆ – ಶಿಕ್ಷಣ ಅತ್ಯಗತ್ಯ.

ಹಾಗೆಯೇ ಮನೋಲೈಂಗಿಕ ಬೆಳವಣಿಗೆಯಲ್ಲಿ ತಾತ್ಕಾಲಿಕವಾಗಿ ಬರುವ ಅಥವಾ ಅಸಹಜ/ದುರದೃಷ್ಟದ ಘಟನೆ-ಅನುಭವದಿಂದಾಗಿ ಬರುವ ಅಸಾಮಾನ್ಯ ಲೈಂಗಿಕ ಅಭಿವ್ಯಕ್ತಿ – ಸಲಿಂಗಕಾಮ, ಪ್ರಾಣಿಕಾಮ, ವಸ್ತುಕಾಮ, ಗುದ ಅಥವಾ ಮುಖರತಿಗಳು ಹರೆಯ ದವರನ್ನು ಕಂಗೆಡಿಸುತ್ತವೆ. ಅವರನ್ನು ಅಪಾಯಕಾರಿ ವರ್ತನೆಗಳತ್ತ ತಳ್ಳುತ್ತವೆ.

ಈ ಮನೋಲೈಂಗಿಕ ಬೆಳವಣಿಗೆಯಲ್ಲಿ ತಂದೆ ತಾಯಿಗಳು ಮತ್ತು ಅವರ ಲೈಂಗಿಕ ಸಂಬಂಧ ಮತ್ತು ಧೋರಣೆ ಬಾಲ್ಯದ ಲೈಂಗಿಕ ಅಪಚಾರಗಳು, ಕುಟುಂಬದ ಪರಿಸರ, ಶಾಲೆ-ಶಿಕ್ಷಣ-ಪರಿಸರ, ಹರೆಯಕ್ಕೆ ಬಂದಾಗ ದೊರಕುವ ಲೈಂಗಿಕ ಪ್ರಚೋದನೆ-ಮಾದರಿಗಳು, ಮುದ್ರಣ, ದೃಶ್ಯ ಮಾಧ್ಯಮಗಳು, ನೆರೆ ಹೊರೆ-ಪರಿಸರ -ಸಮಾಜ ಎಲ್ಲವೂ ತಮ್ಮ ತಮ್ಮ ಕೊಡುಗೆ ನೀಡುತ್ತವೆ, ಪರಿಣಾಮಗಳನ್ನು ಬೀರುತ್ತವೆ. ಅನೇಕ ಕುಟುಂಬಗಳಲ್ಲಿ ಪ್ರೈವೆಸಿ ಇಲ್ಲದೆ ತಂದೆ ತಾಯಿಯ ಅಥವಾ ಕುಟುಂಬದ ಇತರರ ಲೈಂಗಿಕ ಚಟುವಟಿಕೆಗಳನ್ನು ಬೆಳೆಯುವ ಮಕ್ಕಳು ನೋಡುತ್ತಾರೆ. ಮನೆಯವರೋ, ಬಂಧುಮಿತ್ರ -ಪರಿಚಿತರೋ ಗಂಡು ಅಥವಾ ಹೆಣ್ಣು ಮಗುವನ್ನು ಲೈಂಗಿಕ ಆಸೆ ಬಯಕೆಗೆ ಬಳಸಿಕೊಳ್ಳುತ್ತಾರೆ. ಲೈಂಗಿಕ ಕ್ರಿಯೆ ಏನು ಎಂದು ಗೊತ್ತಾಗುವುದರ ಮೊದಲೇ ಈ ರೀತಿ ಲೈಂಗಿಕ ಕ್ರಿಯೆಯನ್ನು ನೋಡುವ ಅಥವಾ ಅನುಭವಿಸುವ ಮಗುವಿನ ಲೈಂಗಿಕ ಬೆಳವಣಿಗೆ ಅಸ್ತವ್ಯಸ್ತಗೊಳ್ಳುತ್ತದೆ. ಲೈಂಗಿಕ ಕ್ರಿಯೆ ಬಗ್ಗೆ ಪ್ರಿ-ಮೆಚೂರ್ ಆಸಕ್ತಿಯನ್ನು ಬೆಳೆಸಿಕೊಳ್ಳಬಹುದು ಅಥವಾ ಅದರ ಬಗ್ಗೆ ಅಸಹ್ಯ, ಭಯವನ್ನು ಬೆಳೆಸಿಕೊಳ್ಳಬಹುದು. ಎರಡೂ ಮಗುವಿನ ಭವಿಷ್ಯದ ಲೈಂಗಿಕ ಜೀವನ ದೃಷ್ಟಿ ಯಿಂದ ಅಪಾಯಕಾರಿಯೇ. ಸ್ವಾಭಾವಿಕವಾಗಿ ಅರಳಿದ ಹೂವಿನ ಸೌಂದರ್ಯ ಮತ್ತು ಪರಿಮಳದಂತೆ ಆಹ್ಲಾದಕರವಾಗಿರಬೇಕಾದ ಲೈಂಗಿಕ ಆಸೆ, ಕೊಳೆತು ನಾರತೊಡಗುತ್ತದೆ. ಅತ್ಯಂತ ಮಡಿವಂತ ಹಾಗೂ ಲೈಂಗಿಕತೆ ಬಗ್ಗೆ ತೀವ್ರ ಪಾಪಪ್ರಜ್ಞೆ ಅಥವಾ ಅದೊಂದು ಕತ್ತಲಲ್ಲಿ ಮಾಡಿ ಮುಗಿಸಬೇಕಾದ ಅನಿಷ್ಟ ಕ್ರಿಯೆ ಎಂಬ ಧೋರಣೆಯನ್ನು ಹೊಂದಿರುವ ಹಿರಿಯರ ಮನೆಯಲ್ಲಿ ಬೆಳೆದ ಮಕ್ಕಳಲ್ಲಿ ಲೈಂಗಿಕ ಬೆಳವಣಿಗೆ ಸರಿಯಾಗಿರು ವುದಿಲ್ಲ. ಲೈಂಗಿಕ ಕ್ರಿಯೆ ಬಗ್ಗೆ ಕೆಟ್ಟ ಕುತೂಹಲವೋ ಅಥವಾ ಅದರ ಬಗ್ಗೆ ಅಸಹ್ಯ-ಜಿಗುಪ್ಸೆಗಳೋ ಬೆಳೆಯ ಬಹುದು ಈ ವ್ಯಕ್ತಿ ಮುಂದೆ ದೊಡ್ಡವಳಾಗಿ ದಾಂಪತ್ಯ ಜೀವನಕ್ಕೆ ಕಾಲಿಟ್ಟಾಗ ಲೈಂಗಿಕ ಕ್ರಿಯೆ ಬಗ್ಗೆ ವಿಪರೀತ ಹಿಂಜರಿಕೆ. ಭಯವನ್ನು ವ್ಯಕ್ತಪಡಿಸಬಹುದು ಅಥವಾ ಲೈಂಗಿಕ ಕ್ರಿಯೆಯಲ್ಲಿ ಭಾಗವಹಿಸಲು ನಿರಾಕರಿಸ ಬಹುದು. 'ನನ್ನ ಹೆಂಡತಿಗೆ ದಾಂಪತ್ಯ ಜೀವನದಲ್ಲಿ ಆಸಕ್ತಿಯೇ ಇಲ್ಲ, ಹತ್ತಿರ ಹೋದರೆ ಮೈಮುಟ್ಟಿದರೆ ಭಯದಿಂದ ನಡುಗುತ್ತಾಳೆ. ಪ್ರಜ್ಞೆತಪ್ಪಿ ಬೀಳುತ್ತಾಳೆ ಅಥವಾ ಕೊರಡಿನಂತೆ ಬಿದ್ದಿರುತ್ತಾಳೆ. ಫ್ರಿಜಿಡಿಟಿ ಯಿಂದಾಗಿ ನಾವು ದಾಂಪತ್ಯಸುಖವನ್ನು ಅನುಭವಿಸಿಯೇ ಇಲ್ಲ' ಎಂದು ಗಂಡ ದೂರಬಹುದು. ಅಥವಾ ಇದೇ ರೀತಿ ಗಂಡನ ಬಗ್ಗೆ ಹೆಂಡತಿ ದೂರಬಹುದು.

ಹರೆಯದಲ್ಲಿ ಹುಡುಗ ಹುಡುಗಿಯರು ದೂರ ವಿದ್ದಷ್ಟೂ, ಅಥವಾ ನಾವು-ದೊಡ್ಡವರು ಅವರನ್ನು ಪ್ರತ್ಯೇಕವಾಗಿಟ್ಟಷ್ಟೂ, ಅವರ ಲೈಂಗಿಕತೆಯ ಬೆಳವಣಿಗೆ ಕುಂಠಿತವಾಗುತ್ತದೆ ಅಥವಾ ದಾರಿತಪ್ಪುತ್ತದೆ. ಅವರು ಜೊತೆಯಲ್ಲೇ ವಿದ್ಯಾಭ್ಯಾಸಮಾಡಬೇಕು, ಜೊತೆಯಲ್ಲೇ ಆಟಗಳನ್ನೂ ಆಡಬೇಕು. ಸಂಗೀತ, ನೃತ್ಯ, ನಾಟಕ, ಚರ್ಚಾಸ್ಪರ್ಧೆ, ಲೇಖನ ಸ್ಪರ್ಧೆ, ಮತ್ತಿತರ ಸಾಂಸ್ಕೃತಿಕ-ಕ್ರೀಡಾ ಚಟುವಟಿಕೆಗಳಲ್ಲಿ ಭಾಗವಹಿಸಬೇಕು. ಎನ್‌ಸಿಸಿ ಅಥವಾ ಎನ್‌ಎಸ್‌ಎಸ್ ಕ್ಯಾಂಪ್‌ಗಳಲ್ಲಿ ಭಾಗವಹಿಸ ಬೇಕು. ಇದರಿಂದ ಅವರ ನಡುವೆ ಕೆಟ್ಟ ಕುತೂಹಲ ನಾಶವಾಗಿ ಸೌಹಾರ್ದ ಹಾಗೂ ಆರೋಗ್ಯಕರ ನಿಲುವು, ಧೋರಣೆ ಮತ್ತು ಪ್ರೀತಿ, ಗೌರವಗಳು ಬೆಳೆಯುತ್ತವೆ. ತಂದೆ ತಾಯಿಗಳು, ಶಿಕ್ಷಕರು ಮತ್ತು ಕುಟುಂಬವೈದ್ಯರು ಈ ಮನೋಲೈಂಗಿಕ ಬೆಳವಣಿಗೆಯನ್ನು ಸದಾ ಗಮನಿಸ ಬೇಕು. ಹರೆಯದವರ ವರ್ತನೆಗಳನ್ನು ನೋಡಿ, ಅವರೊಡನೆ ಮುಕ್ತವಾಗಿ ಮಾತನಾಡಿ ಅವರ ಸಂಶಯ ಅನುಮಾನ ಗಳನ್ನು ಪರಿಹರಿಸಬೇಕು. ಪುರುಷತನ, ಸ್ತ್ರೀತನದ ಬಗ್ಗೆ ಅವರಿಗಿರುವ ತಪ್ಪು/ಉತ್ಪ್ರೇಕ್ಷಿತ ನಂಬಿಕೆ, ಧೋರಣೆಗಳು, ಅಜ್ಞಾನ, ಹಸ್ತಮೈಥುನ, ಲೈಂಗಿಕ ಫ್ಯಾಂಟಸಿ, ಲೈಂಗಿಕ ಬಯಕೆಗಳ ಪೂರೈಕೆ ವಿಧಾನಗಳ ಬಗ್ಗೆ ಅವರಿಗಿರುವ ಆತಂಕ ಭಯಗಳನ್ನು ನಿವಾರಿಸಬೇಕು. ಲೈಂಗಿಕ ಅಭಿವ್ಯಕ್ತಿಯಲ್ಲಿ ಯಾವುದು ಸರಿ, ಯಾವುದು ಸರಿ ಅಲ್ಲ, ಯಾವುದು ಅಪಾಯಕಾರಿ, ಲೈಂಗಿಕ ಬಯಕೆಗಳನ್ನು ಹತೋಟಿಯಲ್ಲಿಡುವುದು ಹೇಗೆ, ಈಗಾಗಲೇ ಲೈಂಗಿಕ ಚಟುವಟಿಕೆಗಳನ್ನು ಮಾಡಿದ್ದರೆ, ಅದರ ದುಷ್ಪರಿಣಾಮಗಳು, ಎಚ್‌ಐವಿ ಸೋಂಕು ಇತ್ಯಾದಿಗಳ ಬಗ್ಗೆ ಸಲಹೆ-ಮಾಹಿತಿಯನ್ನು ನೀಡಬೇಕು. ಲೈಂಗಿಕತೆ ಬಗ್ಗೆ ಹಾಗೂ ತಮ್ಮ ಲೈಂಗಿಕ ಬೆಳವಣಿಗೆ ಮತ್ತು ವಿಕಾಸದ ಬಗ್ಗೆ ಅವರಿಗೆ ಮಾರ್ಗ ದರ್ಶನ ಮಾಡುವ ಕೆಲಸವನ್ನು ಮಾಡಬೇಕು.

ಇದರಿಂದ ಲೈಂಗಿಕ ಚೇಷ್ಟೆಗಳು ದುರ್ವರ್ತನೆ ಗಳು, ಲೈಂಗಿಕ ಅಪರಾಧಗಳು ಹರೆಯದವರಲ್ಲಿ ಮತ್ತು ಪ್ರೌಢವಯಸ್ಕರಲ್ಲಿ ಕಡಿಮೆಯಾಗುತ್ತದೆ. ಸಮಾಜ, ಕಾನೂನು ಮತ್ತು ನೈತಿಕ ಪ್ರಜ್ಞೆಗೆ ಅನುಗುಣವಾಗಿ, ಆರೋಗ್ಯಕಾರಿ ವಿಧಾನದಲ್ಲಿ ಲೈಂಗಿಕ ಅಭಿವ್ಯಕ್ತಿ ಮತ್ತು ಲೈಂಗಿಕ ಚಟುವಟಿಕೆಗಳನ್ನು ನಡೆಸಲು ಅವರಿಗೆ ಸಾಧ್ಯವಾಗುತ್ತದೆ.

ಡಾ|| ಸಿ. ಆರ್. ಚಂದ್ರಶೇಖರ್
ನಂ. ೩೮, ೨ನೇ ಅಡ್ಡರಸ್ತೆ, ಸಿಂಡಿಕೇಟ್ ಬ್ಯಾಂಕ್ ಕಾಲೋನಿ
ಅರಕೆರೆ, ಬನ್ನೇರುಘಟ್ಟ ರಸ್ತೆ, ಬೆಂಗಳೂರು - ೫೬೦ ೦೭೬



# ಕಸಾಯಿಖಾನೆಯ ಸುತ್ತಮುತ್ತ

ಅತ್ಯಂತ ಸೂಕ್ಷ್ಮವೂ ಭಾವನಾತ್ಮಕವೂ ಆದ ವಿಷಯವಾದದ್ದು ಎಂದು ನನಗೆ ಅನ್ನಿಸುತ್ತಿರುವುದರಿಂದ ಮೊದಲಲ್ಲೇ ಪೀಠಿಕೆಯಾಗಿ ಕೆಲವು ಮಾಹಿತಿಗಳನ್ನು ನೀಡಲು ಬಯಸುತ್ತೇನೆ. ಉದ್ದಿಶ್ಯ ಇಷ್ಟೆ: ಈ ಮಾಹಿತಿಗಳು ನಮ್ಮ ಮನಸ್ಸಿನಲ್ಲಿದ್ದರೆ ಈ ಲೇಖನದಲ್ಲಿ ಚರ್ಚಿಸುತ್ತಿರುವ ವಿಷಯದ ಕುರಿತು ನಾವು ಆದಷ್ಟು ವಸ್ತುನಿಷ್ಠವಾಗಿರಬಹುದು ಎಂಬುದಕ್ಕಾಗಿ.

ಕರ್ನಾಟಕ ಸರಕಾರದ ಕಾಯಿದೆಯ ಪ್ರಕಾರ ಗೋಮಾಂಸ ಮಾರಾಟ ನಿಷಿದ್ಧವಲ್ಲ. ಆದರೆ ಜಾನುವಾರನ್ನು ಕಸಾಯಿಖಾನೆಗೆ ಮಾರಾಟ ಮಾಡುವಾಗ ಪಾಲಿಸಬೇಕಾದ ಕೆಲವು ಕಾನೂನುಗಳನ್ನು ಸರಕಾರ ರಚಿಸಿದೆ. ಹಸುವಿಗೆ ಹನ್ನೆರಡು ವರ್ಷಗಳಾಗಿರಬೇಕು. ಹಾಲು ನೀಡುವ ಹಂತವನ್ನು ದಾಟಿಬಿಟ್ಟಿರಬೇಕು. ಆರೋಗ್ಯವಾಗಿರಬೇಕು, ಮತ್ತು ಮಾರುವವನು ಸ್ವಯಿಚ್ಛೆಯಿಂದ ಮಾರಾಟ ಮಾಡಬೇಕು. ಇಷ್ಟಲ್ಲದೆ ಕೊಂಡಮೇಲೆ ಅವನ್ನು ಜಾಗದಿಂದ ಜಾಗಕ್ಕೆ ಸಾಗಿಸಲು ಬಳಸಬೇಕಾದ ವಾಹನಗಳು ಎಂತಿರಬೇಕು ಎಂಬುದರ ಕುರಿತಾಗಿ ಕೂಡ ಕಾನೂನಿನಲ್ಲಿ ಸ್ಪಷ್ಟಪಡಿಸಲಾಗಿದೆ.

ಗೋಮಾಂಸವನ್ನು ಕೇವಲ ಮುಸಲ್ಮಾನರು ಮಾತ್ರ ಆಹಾರಕ್ಕಾಗಿ ಬಳಸುತ್ತಾರೆ ಎಂದು ಭಾವಿಸುವುದು ತಪ್ಪು. ಕ್ರಿಶ್ಚಿಯನರು, ದಲಿತರು ಮತ್ತು ಇನ್ನೂ ಇತರರು ಬಳಸುತ್ತಾರೆ. ಕರ್ನಾಟಕದಲ್ಲಿ ಸಹ ಈ ಆಹಾರಪದ್ಧತಿ ಪ್ರಚಲಿತದಲ್ಲಿದೆ. ಮತ್ತು ಗೋಮಾಂಸ ಅತ್ಯಂತ ಅಗ್ಗದ ಬೆಲೆಯದು. ಹಾಗೂ ಮತ್ತು ಮುಖ್ಯವಾಗಿ ಅನೇಕ ವರ್ಗಗಳ ಆಹಾರಪದ್ಧತಿಯಲ್ಲಿ ಮುಖ್ಯ ಭಾಗ ಕೂಡ.

ಆದರೆ ಸುಮಾರು ಒಂದೂವರೆ ವರ್ಷಗಳಿಂದ ಈಚೆಗೆ ದಕ್ಷಿಣಕನ್ನಡದ ಪಶ್ಚಿಮ ಕರಾವಳಿ ಪ್ರದೇಶದಲ್ಲಿ –ಉಡುಪಿಯಿಂದ ಸುಳ್ಯದವರೆಗೆ– ಈ ಗೋಮಾಂಸ ಮಾರಾಟ, ಗೋಸಾಗಾಟ, ಹಾಗೂ ಇತರ ಸಂಬಂಧಪಟ್ಟ ವಿಷಯಗಳ ಕುರಿತಾಗಿ ಸಂಘ ಪರಿವಾರದ ಎರಡು ಸಂಘಟನೆಗಳು ಬಹಳಷ್ಟು ದಾಂಧಲೆ ಮಾಡಲಾರಂಭಿಸಿವೆ. ಅನೇಕವೇಳೆ ಇದು ಹಿಂಸಾ ಸ್ವರೂಪವನ್ನೂ ಪಡೆದುಕೊಂಡಿದೆ.

ಸುಮಾರು ಒಂದು ವರ್ಷದ ಕೆಳಗೆ ಆದಿ ಉಡುಪಿಯಲ್ಲಿ ಅಕ್ರಮವಾಗಿ ಗೋಸಾಗಾಟ ಮಾಡುತ್ತಿದ್ದಾರೆ ಎಂಬ ಆರೋಪ ಹೊರಿಸಿ ಇಬ್ಬರು ವಯಸ್ಕ ಮುಸ್ಲಿಮರನ್ನು ಬೆತ್ತಲೆಗೊಳಿಸಿ ಥಳಿಸಿ ಗಂಟೆಗಟ್ಟಲೆಗಳ ಕಾಲ ತಮ್ಮ ವಶದಲ್ಲಿರಿಸಿಕೊಂಡು ಹಿಂಸಿಸಿದರು. ಕೊನೆಗೊಮ್ಮೆ ಸುದ್ದಿ ತಿಳಿದ ಪೊಲೀಸಿನವರು ಸ್ಥಳಕ್ಕೆ ಧಾವಿಸುವ ವೇಳೆಗೆ ಅಲ್ಲಿಂದ ಪರಾರಿಯಾದರು. ಈ ಸುದ್ದಿ ಕರ್ನಾಟಕಾದ್ಯಂತ ಹಬ್ಬಿ ನಾಗರಿಕ ಸಮಾಜ ಅವಮಾನದಿಂದ ತಲೆತಗ್ಗಿಸುವಂತಾಯಿತು.

ಮೊನ್ನೆ ಮೊನ್ನೆ ಮುಲ್ಕಿ ವ್ಯಾಪ್ತಿಯ ಪಾವಂಜೆ ಸೇತುವೆಯ ಬಳಿ ಇಬ್ಬರು ಯುವಕರು ನ್ಯಾಯವಾಗಿ ಜಾನುವಾರನ್ನು ಕೊಂಡು ಮಂಗಳೂರಿನತ್ತ ಸಾಗಿಸುತ್ತಿದ್ದರು. ಅವರ ವಾಹನ ಟಾಟಾ ಸುಮೋವನ್ನು ಅಟ್ಟಿ ಬಂದು ತಡೆದು ನಿಲ್ಲಿಸಿ ಚಾಲಕನನ್ನೂ ಸೇರಿದಹಾಗೆ ಆ ಇಬ್ಬರು ಯುವಕರುಗಳ ಮೇಲೆ ಮಾರಕಾಸ್ತ್ರಗಳಿಂದ ಘೋರವಾಗಿ ಹಲ್ಲೆ ನಡೆಸಿ, ಟಾಟಾ ಸುಮೋ ವಾಹನಕ್ಕೆ ಸೀಮೆಎಣ್ಣೆ ಸುರಿದು ಬೆಂಕಿಹಚ್ಚಿದ್ದು ಕೂಡ ಈ ಪರಿವಾರದ ಕಾರ್ಯಕರ್ತರೆ. ಇಷ್ಟು ನಡೆದದ್ದು ಬೆಳಗಿನ ಜಾವ ನಾಲ್ಕು ಗಂಟೆಯ ವೇಳೆಗೆ. ತಲೆಗೆ ಭಾರೀ ಪೆಟ್ಟು ತಿಂದಿದ್ದ ಚಾಲಕ ಕೆಳಗೆ ಬಿದ್ದದ್ದು ನೋಡಿ ಸತ್ತನೆಂದು ಭಾವಿಸಿ ಇನ್ನಿಬ್ಬರ ಕಡೆ ತಿರುಗುವ ವೇಳೆಗೆ ಆವರು ಸೇತುವೆಯಿಂದ ಹಾರಿ ಮರಳ ಮೇಲೆ ಬಿದ್ದು, ತಪ್ಪಿಸಿಕೊಂಡು ಊರು ತಲುಪಿದರು. ಈಗ ಮೂರೂ ಜನ ಮಂಗಳೂರಿನ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾರೆ. ಪೊಲೀಸಿನವರು ಹದಿನೇಳು ಜನ ಭಜರಂಗದಳದವರನ್ನು ದಸ್ತಗಿರಿ ಮಾಡಿ ಕೇಸು ದಾಖಲು ಮಾಡಿದ್ದಾರೆ. ಜಾನುವಾರು ಕೊಂಡವರ ಮೇಲೂ - ಅಕ್ರಮ ಸಾಗಾಣಿಕೆ ಎಂದು ಭಜರಂಗದಳದವರು ದೂರು ಹೊರೆಸಿರುವುದರಿಂದ – ಅಪಾದನೆ ಪಟ್ಟಿ ತಯಾರುಮಾಡಿದ್ದಾರೆ.

**ಜಿ. ಕೆ. ಗೋವಿಂದರಾವ್**

ಸರಕಾರದ ಕಾನೂನಿನ ಒಂದು ವಿಚಿತ್ರ ಅಂಶವೆಂದರೆ ಜಾನುವಾರು ಮಾರುವವನು ಅಪರಾಧಿಯೆನಿಸುವುದೇ ಇಲ್ಲ; ಕೊಳ್ಳುವವನು ಮಾತ್ರ ಅಪರಾಧಿ. ಹೀಗಾಗಿಯೇ ಅನೇಕವೇಳೆ ಗಂಡು ಕರುಗಳುಳ್ಳವರು ಅವುಗಳು ನಿಷ್ಪ್ರಯೋಜಕವೂ, ಮತ್ತು ಆರ್ಥಿಕವಾಗಿ ತಮಗೆ ಹೊರೆಯೂ ಎಂದು ಕಂಡು ಬಿಡುವುದರಿಂದ ಕದ್ದುಮುಚ್ಚಿ ಮಾರಿಬಿಡುತ್ತಾರೆ. ಆದರೆ ಕಾನೂನಿನ ಪ್ರಕಾರ ಅವರು ಅಪರಾಧಿಗಳಲ್ಲ. ದುರಾಸೆಯಿಂದ ಕೊಂಡವನು ಅಪರಾಧಿಯಾಗುತ್ತಾನೆ. ಜಾನುವಾರು ಕೊಂಡದ್ದಕ್ಕೆ ರಸೀದಿ ಹೊಂದಿರಬೇಕು. ಮಾರುವವರು ರಸೀದಿ ಕೊಡುವುದಿಲ್ಲ. ಏನಿದ್ದರೂ ಅದು ದಳ್ಳಾಳಿಯ ಜವಾಬ್ದಾರಿ. ಆದರೆ ಹೀಗೊಮ್ಮೆ ರಸೀದಿ ದಕ್ಕಿದರೂ ರಸ್ತೆಗೆ ಅಡ್ಡಗಟ್ಟಿ ಹಲ್ಲೆ ಮಾಡುವವರು ಮೊದಲು ಮಾಡುವುದೆಂದರೆ ಈ ರಸೀದಿಗಳನ್ನು ಹರಿದು ಬಿಸುಡುವುದು.

ಏಪ್ರಿಲ್ ತಿಂಗಳಲ್ಲಿ ಮಂಗಳೂರಿನಲ್ಲಿ ಇನ್ನೊಂದು ವಿಚಿತ್ರ ಪ್ರಸಂಗ ನಡೆಯಿತು. ನಗರ ಸಭೆಯವರು ಪ್ರತಿ ವರ್ಷ ಕಸಾಯಿಖಾನೆಯನ್ನು ಗುತ್ತಿಗೆ ಕೊಡಲು ಹರಾಜು ಹಾಕುತ್ತಾರೆ. ಈ ಬಾರಿ ಭಜರಂಗದಳದ ಒಬ್ಬ ಪ್ರಮುಖ ಕಾರ್ಯಕರ್ತ ಎಂಟೂವರೆ ಲಕ್ಷ ರೂ.ಗಳಿಗೆ ಕಸಾಯಿಖಾನೆ ಗುತ್ತಿಗೆಗೆ ಪಡೆದ. ಆದರೆ ಹೀಗೆ ಗುತ್ತಿಗೆ ಪಡೆದಮೇಲೆ ಅನೇಕ ರೀತಿಯ ಪ್ರಭಾವಗಳು, – ರಾಜಕೀಯದ್ದು ಸೇರಿದ ಹಾಗೆ – ಚಿತಾವಣೆಗಳು ಎಲ್ಲವನ್ನೂ ಬಳಸಿಕೊಂಡು ಕಸಾಯಿಖಾನೆ 'ಪರಿಸರ ಮಾಲಿನ್ಯ ನಿಯಂತ್ರಣ ಮಂಡಲಿ' ವಿಧಿಸಿರುವ ನಿಬಂಧನೆಗಳಿಗೆ ಅನುಗುಣವಾಗಿಲ್ಲ ಎಂದು ಮಂಡಲಿಯಿಂದ ಆದೇಶಪತ್ರವನ್ನು ದಕ್ಕಿಸಿಕೊಂಡು ಕಸಾಯಿಖಾನೆಯನ್ನು ಬಂದುಮಾಡಿಬಿಟ್ಟ. ಆ ಸ್ಥಳದಲ್ಲಿ ಗೋಶಾಲೆಯನ್ನು ಆರಂಭಿಸುವುದಾಗಿಯೂ ಮುದಿ ಜಾನುವಾರುಗಳ ಯೋಗಕ್ಷೇಮವನ್ನು ನೋಡಿಕೊಳ್ಳುವುದಾಗಿಯೂ ಘೋಷಿಸಿದ. (ಸರ್ಕಾರದ ಜಾಗದಲ್ಲಿ ತನಗೆ ಬೇಕಾದಂತೆ ಹೀಗೆ ಪರಿವರ್ತನೆ ಮಾಡಿಕೊಳ್ಳಲು ಕಾನೂನು ಒಪ್ಪುವುದಿಲ್ಲ. ಬೇಕಾದರೆ ಬೇರೆಡೆ ಅದನ್ನು ಮಾಡಿಕೊಳ್ಳಬಹುದು.) ಹೀಗಾಗಿ ಇಡೀ ಮಂಗಳೂರು ಜಿಲ್ಲೆಯಲ್ಲಿ ಎರಡು ಮೂರು ವಾರಗಳ ಕಾಲ ಈ ಗೋಮಾಂಸದ ವಹಿವಾಟೇ ಸಂಪೂರ್ಣ ನಿಂತು ಹೋಯಿತು. ಆದರೆ ಅವನ ಮತ್ತು ಅವನ ಹಿಂದೆ ಇದ್ದ ಶಕ್ತಿಗಳಿಗೆ ಇದ್ದ ಉದ್ದಿಶ್ಯವೇ ಬೇರೆ. ಹೀಗೆ ಕಸಾಯಿಖಾನೆ ಮುಚ್ಚಿಸಿಬಿಟ್ಟರೆ ಗೋಮಾಂಸವನ್ನು ಅಕ್ರಮವಾಗಿಯಾದರೂ ಮಾರಾಟ ಮಾಡುವುದು ಖಂಡಿತವೇ ಆದ್ದರಿಂದ ಆಗ ಕಾನೂನುರೀತ್ಯ [illegible] ಗಳ

[illegible]

# ಶ್ರೀರಂಗರ ಹರಟೆಗಳು

# ವೈಚಾರಿಕ ಪ್ರಜ್ಞೆಯ ಶಿಖರ

ಹರಟೆ, ಪ್ರಬಂಧ, ಲಲಿತ ಪ್ರಬಂಧ ಎಂದಕೂಡಲೇ ನಮ್ಮ ಮೂರನೇ ದರ್ಜೆ ಸಿನಿಮಾಗಳಲ್ಲಿ ಬರುವ ತಮಾಷೆಯ ಹಾಗೆ ಇಲ್ಲಿಯ ಧಾಟಿ ಇರುತ್ತದೆ ಎಂದು ಭಾವಿಸಲಾಗುತ್ತದೆ. ಕೀಳುದರ್ಜೆಯ ಅಭಿರುಚಿಯನ್ನು ಬೆಳೆಸುವಂತಹದ್ದು, ಬರೀ 'ಅಸಂಗತತೆ' ಅಥವಾ ವಕ್ರವಾಗಿ ಬರೆದರಷ್ಟೆ ಸಾಕು, ಅದು ಹರಟೆ ಇಲ್ಲವೆ ಲಘು ಪ್ರಬಂಧವಾಗಿಬಿಡುತ್ತದೆ ಎಂಬ ಭಾವನೆ ಹಲವರಲ್ಲಿದೆ. ಆದರೆ ಶ್ರೇಷ್ಠ ಹರಟೆಯು ನಗಿಸುವುದರ ಜೊತೆಗೆ ನಗುವುದಕ್ಕೆ ಕಾರಣವಾದ ಸನ್ನಿವೇಶಗಳ ಬಗ್ಗೆಯೂ ಹೇಳುತ್ತದೆ. ಅಷ್ಟೇ ಅಲ್ಲ, ಶ್ರೇಷ್ಠವೆನಿಸಿದ ಉತ್ತಮವಾದ ಹರಟೆಯಲ್ಲಿ ಹಾಸ್ಯ ಮತ್ತು ವಿಡಂಬನೆಯಿದ್ದು ಆಳವಾದ ವಿಷಾದವೂ ಇರುತ್ತದೆ. ಇದು ಬಹಳ ಮುಖ್ಯವಾದದ್ದು. ಈ ವಿಷಾದವೇ ಬದುಕಿನ ಸಮಾಜದ ವಿವಿಧ ಆಯಾಮಗಳನ್ನು ಮಗ್ಗುಲುಗಳನ್ನು ತೆರೆದಿಡುತ್ತದೆ.

ಹರಟೆ, ಲಘುಪ್ರಬಂಧ ಇಂದು ಹುಟ್ಟಿಕೊಳ್ಳುತ್ತಿರುವುದು ಜನಪ್ರಿಯ ಪತ್ರಿಕೆಗಳಿಗಾಗಿ. ಇದನ್ನು ಓದುಗ ವರ್ಗ ತನ್ನದೇ ಆದ ಅನಾರೋಗ್ಯಕರ ಸೀಮಿತತೆಯನ್ನು ಬೆಳೆಸಿಕೊಂಡಿರುತ್ತದೆ. ಇಂತಹ ಸೀಮಿತತೆಯನ್ನು ಬೆಳೆಸಿಕೊಂಡಿರುವ ಓದುಗ ವರ್ಗವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಹೊಸೆಯಲ್ಪಡುವ ಪ್ರಬಂಧಗಳಲ್ಲಿ ಗಾಢವಾದದ್ದನ್ನು ಆಳವಾದದ್ದನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಏಕೆಂದರೆ ಜನಪ್ರಿಯ ಪತ್ರಿಕೆಯ ಓದುಗರ ಮನಃಸ್ಥಿತಿಯು light reading ನ್ನು ಬಯಸುವಂತದ್ದಾಗಿರುತ್ತದೆ. ದಿನನಿತ್ಯ ದೂರದರ್ಶನದಲ್ಲಿ ಹಾಸ್ಯದ ಹಣೆಪಟ್ಟಿ ಹೊತ್ತು ಬರುವ ಧಾರಾವಾಹಿಗಳು, ಸಿನಿಮಾ ದೃಶ್ಯಗಳು, ಹಾಡುಗಳು, ಕಾದಂಬರಿಗಳು ಇಂತಹ ಓದುಗ ವರ್ಗವನ್ನು ಅವಲಂಬಿಸಿರುತ್ತವೆ. ಈ ವರ್ಗದವರಿಗಾಗಿ ಬರೆಯುವ ಲೇಖಕರು ಬದುಕು ಅಥವಾ ಸಮಾಜದ ಬಗ್ಗೆ ಆಳವಾದ ಒಳನೋಟಗಳನ್ನು ಒದಗಿಸುವುದರಲ್ಲಿ ಸಂಪೂರ್ಣವಾಗಿ ವಿಫಲರಾಗಿರುತ್ತಾರೆ. ಆದರೆ ನಮ್ಮಲ್ಲಿನ ಕೆಲವು ಗಂಭೀರ ಬರಹಗಾರರು ಹರಟೆ, ಲಘು ಪ್ರಬಂಧಗಳನ್ನು ಜನಪ್ರಿಯ ಪತ್ರಿಕೆಗಳ ಪೂರ್ವನಿಶ್ಚಿತ ಚೌಕಟ್ಟಿಗೆ ಮಿತಿಗೊಳಿಸದೆ ತಮ್ಮ ಸ್ವಂತ ದೃಷ್ಟಿಯ ಕಡೆಗೆ ಓದುಗವರ್ಗವನ್ನು ಸೆಳೆಯುವ ಹರಟೆಗಳನ್ನು ಬರೆದಿದ್ದಾರೆ. ಇಂತಹ ಬರಹಗಾರರ ಸಂಖ್ಯೆ ಕಡಿಮೆಯೆನಿಸಿದರೂ ಇವರ ಸಾಧನೆ ಅನನ್ಯವಾದದ್ದು.

ಅಂತಹ ಬರಹಗಾರರಲ್ಲಿ ಶ್ರೀರಂಗರೂ ಒಬ್ಬರು. ಶ್ರೀರಂಗರ ಬರಹಗಳಲ್ಲಿ ತೀಕ್ಷ್ಣ ಬುದ್ಧಿವಂತಿಕೆಯಿದೆ. ಆಳವಾದ ಓದಿನಿಂದ ಕೂಡಿದ, ಆಕರ್ಷಕ ಶೈಲಿಯಿದೆ. ಜೀವನದ ಬಗ್ಗೆ ಸಮಗ್ರವಾದ ನಿಲುವುಳ್ಳ ಮನಸ್ಸಿದೆ. ವಿಚಾರ ಪ್ರಚೋದನೆಯನ್ನುಂಟುಮಾಡುವ ಕೇಂದ್ರ, ಕಾಳಜಿ ಇವರ ಹರಟೆಗಳಲ್ಲಿದೆ.

ಮನುಷ್ಯ ಸ್ವಭಾವ, ವರ್ತನೆ, ಭಾಷೆ ಮತ್ತು ವೇಷಭೂಷಣಗಳ ಅಸಾಮಂಜಸ್ಯವಿದ್ದು, ಮನುಷ್ಯನ ಬಗ್ಗೆ ದ್ವಂದ್ವದೃಷ್ಟಿಕೋನವನ್ನು ಶ್ರೀರಂಗರ ಹರಟೆಗಳಲ್ಲಿ ಕಾಣಬಹುದು. ಶ್ರೀರಂಗರ ಹರಟೆಗಳು ಮನುಷ್ಯನು ನಂಬಿರುವ ಅಥವಾ ನಂಬಿದ್ದೇನೆ ಎಂದು ಭ್ರಮಿಸಿರುವ ಆದರ್ಶಗಳಿಗೂ ಆಚರಣೆಗಳಿಗೂ ಇರುವ ವೈರುಧ್ಯಗಳನ್ನು ಮುಖ್ಯವಾಗಿ ಎತ್ತಿತೋರಿಸುತ್ತವೆ. ವಿಡಂಬನೆ ಹಾಸ್ಯಗಳ ಮೂಲಕ ಅಸಮಂಜಸತೆ ಮತ್ತು ವೈರುಧ್ಯಗಳನ್ನು ವಿಮರ್ಶಿಸುವ, ತಿದ್ದುವ ಪ್ರಯತ್ನವನ್ನು ಮಾಡುತ್ತವೆ. ಇದಕ್ಕೆ ಉದಾಹರಣೆಯಾಗಿ, ಸಾಹಿತ್ಯ ಪರಿಷತ್ತಿನ ಬಗ್ಗೆ ಬರೆದಿರುವ ಪ್ರಬಂಧವನ್ನು ಗಮನಿಸಬಹುದು. ಸಾಹಿತ್ಯ ಸಮ್ಮೇಳನದ ಅರ್ಥಹೀನತೆಯನ್ನು ವ್ಯಂಗ್ಯ, ಹಾಸ್ಯ ವಿಡಂಬನೆಯ ಮೂಲಕ ಮನವರಿಕೆ ಮಾಡಿಕೊಡುವ ಕ್ರಮ ಅನನ್ಯವಾದದ್ದು.

ಗಂಭೀರ ಹಾಗೂ ನೈತಿಕ ಸಮಸ್ಯೆಗಳ ಚಿಂತನೆಯನ್ನಾಗಲಿ, ಒಳಿತು ಕೆಡುಕುಗಳ ಘರ್ಷಣೆಯನ್ನಾಗಲಿ ಪ್ರಬಂಧದ ವ್ಯಾಪ್ತಿಗೆ ಒಳಪಡಿಸಿಕೊಳ್ಳುವುದಿಲ್ಲ ಎಂಬಂತೆ ಮೇಲುನೋಟಕ್ಕೆ ಕಂಡುಬಂದರೂ ತತ್ಕಾಲೀನ ಸಮಾಜದೊಡನೆ ವ್ಯಕ್ತಿಯ ಸಂಬಂಧವನ್ನು ಗಮನಿಸುತ್ತಾ ರಾಜಿ ಮಾಡಿಕೊಳ್ಳುವುದರಲ್ಲಿ ಸಮಾಜದ ತೀರ್ಮಾನಗಳನ್ನು ಒಪ್ಪಿಕೊಳ್ಳುವುದರಲ್ಲಿ, ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳುವ ವಿಧಾನಗಳು ಈ ಪ್ರಬಂಧಗಳಲ್ಲಿವೆ.

ಚಿಂತನಶೀಲ ಹಾಸ್ಯವನ್ನು ಶ್ರೀರಂಗರ ಹರಟೆಗಳಲ್ಲಿ ಕಾಣಬಹುದು. ಕೆಲವು ಸಾಮಾಜಿಕ ಸಂಪ್ರದಾಯಗಳ ಅಸಂಬದ್ಧತೆ ಮತ್ತು ಮನುಷ್ಯ ಸ್ವಭಾವದ ಅಸಮಂಜಸತೆಯನ್ನು ಚಿತ್ರಿಸುತ್ತವೆ. ವಿದಗ್ಧತೆ (wit) ಮತ್ತು ವ್ಯಂಗ್ಯದಿಂದ (irony) ಕೂಡಿದ ಇಲ್ಲಿನ ವಾಕ್ಯಗಳನ್ನು ಅರ್ಥಮಾಡಿಕೊಳ್ಳುವ ಶಕ್ತಿ ಓದುಗನಿಗಿದ್ದಾಗ ಮಾತ್ರ ಶ್ರೀರಂಗರ ಈ ಹರಟೆಗಳ ಮಹತ್ವ ತಿಳಿಯುತ್ತದೆ. ದೈಹಿಕ ವಿಕೃತಿ, ಅಪಹಾಸ್ಯ, ಚೆಲ್ಲಾಟ ಭಾವುಕತೆಗಳಿಗೆ ಇಲ್ಲಿ ಅವಕಾಶವಿಲ್ಲ.

ಶ್ರೀರಂಗರ ಹರಟೆಗಳಲ್ಲಿ ಲೇಖಕ ಓದುಗರೊಂದಿಗೆ ಆತ್ಮೀಯತೆಯ ಧೋರಣೆಯನ್ನು ಹೊಂದಿರುತ್ತಾನೆ. ವಿಶಿಷ್ಟ ವಿಷಯಗಳ ಬದಲಿಗೆ ದಿನನಿತ್ಯದ ಸಂಗತಿಗಳನ್ನು ಕುರಿತು ಆರಾಮವಾಗಿ ಬರೆದಿರುವ ಬರಹವಿದು. ''ಸ್ವಲ್ಪದರಲ್ಲಿ ಸ್ವಾರಸ್ಯ'' ಎಂಬ ಪ್ರಬಂಧವನ್ನು ಈ ದೃಷ್ಟಿಯಿಂದ ಗಮನಿಸಬಹುದು. ಇಲ್ಲಿ ಲೇಖಕನ ವೈಯಕ್ತಿಕತೆಗೆ ಪ್ರಾಮುಖ್ಯವಿದೆ ಎನಿಸಿದರೂ ಪ್ರಬಂಧವು ಸಾರ್ವತ್ರಿಕವಾಗಿದೆ. ಲೇಖಕನ ಪೂರ್ವಗ್ರಹಗಳು, ಇಷ್ಟ ಅನಿಷ್ಟಗಳು ಸ್ಪಷ್ಟ; ತೀರ್ಮಾನಗಳು ಅಪೂರ್ಣ ಮತ್ತು ತಾತ್ಕಾಲಿಕ; ಬಂಧ ಸಡಿಲವಾದದ್ದು; ಉಲ್ಲಾಸಮಯವಾದ ಸಂಭಾಷಣೆಯ ಶೈಲಿಯ ಬಳಕೆ, ವಿವರಣೆ; ನಿರೂಪಣೆ ಮತ್ತು ಹಾಸ್ಯದ ಬಳಕೆ; ಲೇಖಕನಿಗೆ ಇರುವ ಮನುಷ್ಯ ಸ್ವಭಾವದ ಅರಿವು; ಆದರ್ಶಗಳು ತಿಳುವಳಿಕೆಗಳಿಂದ ಶ್ರೀರಂಗರ ಇತರ ಬರಹಗಳಂತೆ ಹೆಚ್ಚು ಕಲಾತ್ಮಕತೆಯನ್ನೊಳಗೊಂಡಿರುವ ಇಲ್ಲಿನ ಪ್ರಬಂಧಗಳು ಕನ್ನಡ ಸಾಹಿತ್ಯಕ್ಕೆ ಅಪೂರ್ವವಾದ ಕೊಡುಗೆ ಎಂಬುದರಲ್ಲಿ ಅನುಮಾನವಿಲ್ಲ. ಮೇಲಿನ ಮಾತುಗಳಿಗೆ ಪೂರಕವಾಗಿ ಈ ಸಾಲುಗಳನ್ನು ಗಮನಿಸಿ :

''ವಾಚಕರೆ ನಗಬೇಡಿರಿ. ನಾನು ಈ ಸಂದರ್ಭದಲ್ಲಿ ಆಚಾರ್ಯರ ಕುರಿತ ಉದಾಹರಣೆಯನ್ನು ಯಾಕೆ ಕೊಡುತ್ತಿರುವೆನೆಂಬುದರ ರಹಸ್ಯ ಹೊಳೆದಿದೆಯೆ, ನಿಮಗೆ ? ಯಾವ ಮಾತೇ ಆಗಲಿ, ಸ್ವಲ್ಪದರಲ್ಲಿ ಅದರ ಸ್ವಾರಸ್ಯವನ್ನು ತಿಳುಹಿಸಿಕೊಡುವ ಕೌಶಲ್ಯ ಅವರಲ್ಲಿದೆ. ನಾವು – ಲೇಖಕರು – ಅವರಿಂದ ಈ ಗುಣವನ್ನು ಕಲಿತುಕೊಳ್ಳಬೇಕಾಗಿದೆ. ಈಗ ನೋಡಿರಿ. ಈಗ



ನಡೆದಿರುವ ಯುದ್ಧದ ವಿಷಯ ನಮಗೆ ಯಾರಿಗೂ ತಿಳಿದಿರಲಿಲ್ಲ. ಸಂದರ್ಭಾನುಸಾರವಾಗಿ ಆಚಾರ್ಯರನ್ನು ಕೇಳಿದೆವು. ಅವರು ಬಂದರೆ ನಿಮಿಷ ಧ್ಯಾನ ಮಗ್ನರಾದವರಂತೆ ಸುಮ್ಮನಿದ್ದು ಆಮೇಲೆ ಒಮ್ಮೆಲೆ ತಮ್ಮ ಸುತ್ತಮುತ್ತಲಿನ ಸಂಸಾರಬಂಧನವನ್ನೇ ಮರೆತವರಂತೆ ನಮ್ಮ ಪ್ರಶ್ನೆಯನ್ನೇ ಅಲಕ್ಷ್ಯಮಾಡಿ – 'ನನ್ನ ಮಾತನ್ನೇ ನೋಡಿರಿ' ಎಂದರು. ಇದೇನು ! ಎಷ್ಟು ನೋಡಿದರೂ ಕನಕಾಚಾರ್ಯರ ಸಂಸಾರಕ್ಕೂ ಹಿಟ್ಲರನ ಸಾಹಸಕ್ಕೂ ಯಾವ ಸಂಬಂಧವಿದೆ ಎಂಬುದು ನಮಗೆ ತಿಳಿಯದಂತಾಯಿತು. ನಕ್ಕರು ಆಚಾರ್ಯರು. ಮೊದಲು ಶ್ರೋತೃಗಳನ್ನು ಬೆರಗುಗೊಳಿಸಿ ಅವರ ಕುತೂಹಲ

---

ಎಚ್. ದಂಡಪ್ಪ

ವನ್ನು ಹೆಚ್ಚಿಸುವ ತಮ್ಮ ಕಲೆಗಾಗಿ ಹೆಮ್ಮೆಯಿಂದ ನಕ್ಕರು ಮತ್ತು ಹೇಳತೊಡಗಿದರು: ''ನನ್ನ ಮಾತನ್ನೇ ನೋಡಿರಿ. ಅದೆ ಅಡಿಗೆಯ ಮನೆ ನನ್ನದು. ಅದರೊಳಗ ನೀವು ಕೈಹಾಕ ಬೇಡಿರಿ, ಕಾರಬಾರ ಮಾಡಬೇಡಿರಿ ಅಂತಾಳೆ ನಮ್ಮ ಮನೆಯಾಕೆ. ಆಕೆಯ ಮಾತೇನೊ ಯಥಾರ್ಥ ಅಂತ ನಿಮಗ ಅನ್ನಿಸಬಹುದು. ನನಗೂ ಅನಿಸಿತ್ತು. ಆದರೆ ಮುಂದೆ ಕೇಳಿರಿ. ಅಡಿಗೆಮನೆ ಅಂದರೆ ಅದಕ್ಕೆ ಸಂಬಂಧಿಸಿದ್ದು, ಎಲ್ಲಾ ನನ್ನದು ಅಂತಾಳೆ. ಅದಕ್ಕೆ ಸಂಬಂಧಿಸಿದ್ದು ಎಲ್ಲಾ ಅಂದ್ರೇನು ? ಸಾಮಾನು ಸಮಾನು ಭಾಂಡಿ-ಕೋಂಡಿ ಮತ್ತ ಇಷ್ಟೇ ಅಲ್ಲ – ಅದನ್ನು ತರೋದು ಹೊರೋದು – ಅರ್ಥಾತ್ ಅದಕ್ಕೆ ಬೇಕಾಗೋ ರೊಕ್ಕ. ರುಜು ಒಟ್ಟು ಒಂದು ಮಾತಿನೊಳಗ ನಾನು ಗಳಿಸೋದು, ಆಕೆಯ ಕೈಯೊಳಗಬೇಕು! ಅದಕ್ಕೆ ಹೇಳಿದೆ. ನನ್ನ ಮಾತನ್ನೇ ಮೀರಿಸಿ ಅಡಿಗೆಮನೆ ನನ್ನದು ಅನ್ನೋ ಆಕೆಯ ಮಾತಿಗೆ ನಾನು ಒಪ್ಪಿಕೊಂಡರೆ ಪ್ರಸಂಗ ಎಲ್ಲಿಯವರೆಗೆ ಬರೋದು! ನನ್ನ ಮನೆಯೊಳಗೇ ನಾನು ಕೂಲಿ ಇದ್ದಾಂಗೆ. ಬಾಡಿಗೆ ಕೊಟ್ಟಾಂಗೆ. ನಾ ಗುಲಾಮನಾದಾಂಗೆ.'' ಆಚಾರ್ಯರು ಮತ್ತೆ ಗಂಭೀರ ಮುದ್ರೆಯನ್ನು ತಾಳಿ ನಸ್ಯದ ಕುಂಭಕ, ಸಮಾಧಾನದ ಆವಕಗಳಿಂದ ಪ್ರಾಣಾಯಾಮಪರರಾದರು. ಕೆಲ ಹೊತ್ತಿನ ಮೇಲೆ ಎಲ್ಲರೂ ಇನ್ನೂ ಸುಮ್ಮನಿದ್ದುದನ್ನು ನೋಡಿ ಹೆಂಡತಿ ಹಿಟ್ಲರ್ ಏನು – ಸಡಿಲಬಿಟ್ಟರೆ ಎಲ್ಲಾ ರಂಡೇವು ಒಂದೇ! ಎಂದರು.''




ಸ್ತ್ರೀವಾದದ ಹಿನ್ನೆಲೆಯಲ್ಲಿ 'ಸ್ವಲ್ಪದರಲ್ಲಿ ಸ್ವಾರಸ್ಯ'ದ ಮೇಲಿನ ಭಾಗವನ್ನು ವಿಶ್ಲೇಷಿಸಿದರೆ ಬಹಳಷ್ಟು ಒಳನೋಟಗಳು ಸಿಗುತ್ತವೆ. 'ಸ್ವಲ್ಪದರಲ್ಲಿ ಸ್ವಾರಸ್ಯ' ಎಂಬ ನಾಲ್ಕು ಹರಟೆಗಳನ್ನು ಶಿವರಾಮ ಕಾರಂತರ 'ಮೈಲಿಕಲ್ಲಿನೊಡನೆ ಮಾತುಕತೆಗಳು' ಪ್ರಬಂಧದೊಂದಿಗೆ ಹೋಲಿಸಬಹುದು. ಶ್ರೀರಂಗರು ಒಂದೆಡೆ ಹೇಳುವಂತೆ ''ನನ್ನ ಹರಟೆಗಳ ಹಿನ್ನೆಲೆಯಲ್ಲಿ ವಿಚಾರಗಳ ಬೆಟ್ಟವೇ ನಿಂತಿದೆ.'' ಈ ಹೇಳಿಕೆಯು ಶಿವರಾಮ ಕಾರಂತರಿಗೂ ಅನ್ವಯಿಸುತ್ತದೆ. ಇಬ್ಬರಿಗೂ ವಿಚಾರ ಮುಖ್ಯವಾಗುತ್ತದೆ. ಇಬ್ಬರೂ ವ್ಯಂಗ್ಯದ ಮೊನಚಿನಿಂದ ಸಮಾಜದ ಓರೆಕೋರೆಗಳನ್ನು ಎತ್ತಿ ತೋರಿಸುತ್ತಾರೆ. ವ್ಯಂಗ್ಯಶೈಲಿ, ಮನರಂಜನೆ, ಚಿತ್ರರೂಪಕತೆ ಈ ಇಬ್ಬರ ಬರಹಗಳ ಸ್ವರೂಪವಾಗಿದೆ. ಶಿವರಾಮ ಕಾರಂತರು ಹೇಳಿಕೊಂಡಿರುವಂತೆ ''ನಮ್ಮ ಜನತೆಯ ಸಂಸ್ಕೃತಿಯ ಮೈಲಿಕಲ್ಲುಗಳೇ ಈ ವಿವಿಧ ನಿಬಂಧಗಳ ಗುರಿ. ಅವನ್ನು ಕೆಣಕಿ ವಿಚಾರ ಪ್ರಚೋದನೆ ಮಾಡುವುದೇ ಉದ್ದೇಶ. ಅವುಗಳಲ್ಲಿ ನಿರುದ್ದೇಶಿತ ಹಾಸ್ಯದ ಪ್ರೇರಣೆಯನ್ನು ಮಾಡಲೂಬಹುದು.'' ಈ ಮಾತುಗಳನ್ನು ಶ್ರೀರಂಗರಿಗೂ ಅನ್ವಯಿಸಬಹುದು. ಇಬ್ಬರ ಪ್ರಬಂಧಗಳ ಕೇಂದ್ರ ಕಾಳಜಿ 'ವಿಚಾರ ಪ್ರಚೋದನೆ'.

ಸು-ಮ್ಮ-ನಿ-ದ್ರೆ ಸಮ್ಮೇಳನ ಅರ್ಥಾತ್ 'ಬಳ್ಳಾರಿಯಲ್ಲಿ ಬರಗಾಲ' ಈ ಪ್ರಬಂಧದ ಹೆಸರೇ ಏನೆಲ್ಲವನ್ನು ಧ್ವನಿಸುತ್ತದೆ. ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರತಿವರ್ಷ ನಡೆಸುವ ಸಮ್ಮೇಳನದ ಬಗ್ಗೆ ಇಲ್ಲಿ ವಿಡಂಬನೆ ಇದೆ. ಅಲ್ಲಿ ನಡೆಯುವ ಚರ್ಚೆಗಳು, ಕವಿಗೋಷ್ಠಿ, ಪ್ರದರ್ಶಿತವಾಗುವ ನಾಟಕಗಳು, ಅಲ್ಲಿ ಸೇರುವ ಸಾಹಿತಿಗಳ ಮಾತುಕತೆಗಳು ಹೇಗೆ ಅರ್ಥಹೀನವಾದವುಗಳು ಎಂಬುದನ್ನು ವ್ಯಂಗ್ಯ ವಿಡಂಬನೆ ಹಾಸ್ಯದ ಮೂಲಕವೇ ನಮಗೆ ಮನವರಿಕೆ ಮಾಡಿಕೊಡುತ್ತಾರೆ. ಮೊದಲೇ ತಿಳಿಸಿದಂತೆ ಹರಟೆ ಪ್ರಬಂಧವೆಂದರೆ 'ಲಹರಿ' ಎಂಬ ಭಾವನೆಯನ್ನು ಬಹಳಷ್ಟು ಮಂದಿ ಬೆಳೆಸಿಕೊಂಡಿದ್ದಾರೆ. ಪ್ರಬಂಧದ ಉದ್ದೇಶವೇನಿದ್ದರೂ 'low comedy'. ನಗಿಸುವುದನ್ನು ಬಿಟ್ಟರೆ ಬೇರೆ ಯಾವ ಉದ್ದೇಶವೂ ಇಲ್ಲ. ಮಾತುಗಾರಿಕೆಯ ಆರ್ಭಟ, ಜೋಕುಗಳು, ಕುಡಿತ, ಹೊಡೆದಾಟ, ಕೋಡಂಗಿತನ ಇವೆಲ್ಲ ಪ್ರಬಂಧದಲ್ಲಿ ಇರುತ್ತವೆ ಎಂದು ಭಾವಿಸಿಬಿಟ್ಟಿರುತ್ತಾರೆ. ಆದ್ದರಿಂದಲೇ ನಮ್ಮಲ್ಲಿ ಕಾವ್ಯ, ಕತೆ, ಕಾದಂಬರಿ ನಾಟಕಗಳಿಗೆ ಕೊಟ್ಟಷ್ಟು ಪ್ರಾಮುಖ್ಯತೆಯನ್ನು ಹರಟೆ ಅಥವಾ ಲಘು ಪ್ರಬಂಧಗಳಿಗೆ ಕೊಡುವುದಿಲ್ಲ. ಪ್ರಬಂಧ ಬರೆದರೆ ಬಹಳಷ್ಟು ಗಂಭೀರ ಓದುಗ, ವಿಮರ್ಶಕರೇ ಅದನ್ನು ನಿರ್ಲಕ್ಷ್ಯತನದಿಂದ ಕಾಣುತ್ತಾರೆ. ನಮ್ಮ ಶ್ರೇಷ್ಠ ಬರಹಗಾರರ ಬಗ್ಗೆ ಬರೆಯುವಾಗ ಪ್ರಬಂಧಗಳನ್ನು ಕೊನೆಯಲ್ಲಿ ಹೆಸರಿಸುವುದನ್ನು ಕಾಣಬಹುದು.

ಶಿವರಾಮ ಕಾರಂತ, ಶ್ರೀರಂಗ, ಬೇಂದ್ರೆ, ಮಾಸ್ತಿ, ಕುವೆಂಪು, ಪುತಿನ, ಎ. ಎನ್. ಮೂರ್ತಿರಾಯರ ಬರಹಗಳನ್ನು (ಪ್ರಬಂಧಗಳನ್ನು) low comedy ಎಂದು ಪರಿಗಣಿಸಿ ಓದಿದರೆ ಅದು ಅವುಗಳಿಗೆ ನಾವು ಬಗೆಯುವ ಅಪಚಾರವಷ್ಟೆ. ಅವುಗಳನ್ನು ನಾವು high comedy, ಶುದ್ಧಹಾಸ್ಯ ಅಥವಾ ಗಂಭೀರಹಾಸ್ಯ ಪ್ರಬಂಧಗಳಾಗಿ ನೋಡಬೇಕು. ಅಲ್ಲಿನ ವಿಡಂಬನೆ, ವ್ಯಂಗ್ಯಧ್ವನಿ, ಚಿಂತನಶೀಲತೆಯನ್ನು ಗ್ರಹಿಸಬೇಕು. ಆ ಮೂಲಕ ಬದುಕು ಸಮಾಜದ ಬಗೆಗಿನ ಒಳನೋಟಗಳನ್ನು ಅರಿಯಬೇಕಾಗುತ್ತದೆ. ಮೇಲಿನ ಮಾತುಗಳ ಸ್ಪಷ್ಟನೆಗಾಗಿ ಶ್ರೀರಂಗರ 'ಚಟ ಮತ್ತು ಹಟ' ಎಂಬ ಪ್ರಬಂಧವನ್ನು ನೋಡಬಹುದು. ಈ ಪ್ರಬಂಧದ ಬಗ್ಗೆ ಶ್ರೀ ಜಿ. ಎಸ್. ಆಮೂರ ಅವರು ಈ ರೀತಿ ಅಭಿಪ್ರಾಯ ಪಡುತ್ತಾರೆ:

''ಚಟಕ್ಕೆ ದುರಭ್ಯಾಸವೆನ್ನುವ ವೃತ್ತಿಯೇ ತಪ್ಪಾದುದು ಎಂಬ ಮಾತಿನೊಂದಿಗೆ ಅವರು (ಶ್ರೀರಂಗರು) ಆರಂಭಿಸುತ್ತಾರೆ. 'ಹಟ' ಹಾಗೂ 'ಚಟ'ಗಳ ನಡುವಿನ ಅಂತರವನ್ನು ತೋರಿಸುತ್ತ ''ಹಟವು ಚಟಕ್ಕಿಂತ ಅನಿಷ್ಟ. ಇಷ್ಟೇಕೆ ಚಟವು ಹಟದ ವಿರುದ್ಧವಾಗಿದೆ! ಚಟದಲ್ಲಿ ಸಾಮಾಜಿಕತೆಯ ಶಕ್ತಿ ಇದೆ'' ಎಂಬ ನೂತನ ವಿಚಾರವೊಂದನ್ನು ನಮ್ಮೆದುರು ಮಂಡಿಸುತ್ತಾರೆ. ಸಿಗರೇಟು ಮೊದಲಾದ ಚಟಗಳನ್ನು ದುರಭ್ಯಾಸ ಎಂದು ಕರೆಯುವುದಕ್ಕೆ ವಿರೋಧವಿದೆ. ಚಟವು ಪರಮಾತ್ಮನಂತೆ ನಿರ್ಗುಣವಾಗಿದೆ. ಅದರಲ್ಲಿ ಒಳಿತು ಕೆಡುಕುಗಳಿಲ್ಲ. ಪರಮಾತ್ಮನಿಗೆ ಅವತಾರ ತಾಳುವುದೂ ಚಟವೆ. ದಿನಕ್ಕೆ ಮೂರಾವರ್ತಿ ಸಂಧ್ಯಾವಂದನೆ ಇಲ್ಲದೆ ಮನಸ್ಸಿಗೆ ಸಮಾಧಾನವಿಲ್ಲ ಎನ್ನುವುದೂ ಚಟವೆ. ಸಿಗರೇಟು ಸೇದುವುದೂ ಚಟವೆ. ಒಟ್ಟಾರೆ ವೇಳೆಯ ಸದುಪಯೋಗ ಮನಸ್ಸಿಗೆ ಶಾಂತಿ ತಂದುಕೊಡುವುದು ಚಟದ ಮುಖ್ಯ ಲಕ್ಷಣವೆಂದು ಅವರು (ಶ್ರೀರಂಗರು) ತರ್ಕಬದ್ಧವಾಗಿಯೇ ವಾದಿಸುತ್ತಾರೆ. ಚಟವಿಲ್ಲದವರು ಹಿಟ್ಲರ್ ಮುಸಲೋನಿಯರಂತೆ ಮಾನವ ಸಮಾಜದ ಶತ್ರುಗಳೂ ಕ್ರೂರಿಯಾದವರೂ ವ್ಯಕ್ತಿ ಸ್ವಾತಂತ್ರ್ಯವಿರೋಧಕರೂ ಆಗಬಹುದು ಎಂಬುದು ಅವರ ಹೆದರಿಕೆ. ಅದೇ ಯಾವಾಗಲೂ ಬಾಯಲ್ಲಿ ಸಿಗಾರ್ ಇಟ್ಟುಕೊಂಡೇ ಕೆಲಸಮಾಡುವ ಚರ್ಚಿಲ್ ಸ್ವಾತಂತ್ರ್ಯರಕ್ಷಕನಾಗಿರುತ್ತಾನೆ. ಮಾನವನಿಗೆ ಚಟ ಬೇಕು, ಚಟವಿಲ್ಲದಿದ್ದರೆ ಹಟ ಸೇರುವುದು, ಚಟವಿಲ್ಲದವನು ಮಾನವನೇ ಅಲ್ಲವೆಂದು ಹೇಳಬಹುದಾಗಿದೆ ಎನ್ನುವವರೆಗೂ ಅವರ ಚಟದ ಸಮರ್ಥನೆ ಬೆಳೆಯುತ್ತದೆ.''

ಆಮೂರರ ಈ ಮೇಲಿನ ವಾಕ್ಯಗಳಲ್ಲಿ ಪ್ರಬಂಧದ ವಿಶ್ಲೇಷಣೆ ಮುಗಿಯುತ್ತದೆ. ಆಮೂರರು ನಮ್ಮಲ್ಲಿನ ಸೂಕ್ಷ್ಮ ಒಳನೋಟಗಳಿರುವ ಸೂಕ್ಷ್ಮ ಮನಸ್ಸಿನ ವಿಮರ್ಶಕರು. ಆದರೆ ಈ ಪ್ರಬಂಧವನ್ನು ವಿಶ್ಲೇಷಣೆಗೊಳಪಡಿಸುವಲ್ಲಿ ವಿಫಲರಾಗಿದ್ದಾರೆ ಅನ್ನಿಸುತ್ತದೆ. ರೈಲಿನ ಪ್ರಯಾಣದಲ್ಲಿ ಎಲೆ ಅಡಿಕೆ ಹಾಕುವ ಚಟದ ಪ್ರಸ್ತಾಪ ಬಂದು ಚಟವಿದ್ದವರು ಹೇಗೋ ಬದುಕುತ್ತಾರೆ ಎಂದು ಹೇಳಲಾಗಿದೆ. ಆದರೆ ಇದು ತಾತ್ಕಾಲಿಕವಷ್ಟೆ. ಶಾಶ್ವತವಾಗಿ ಈ ಚಟ ಮಾನವನಿಗೆ ಸುಖ ಸಂತೋಷ ನೆಮ್ಮದಿ ನೀಡಲಾರದು. ಮೇಲಿನ ಉದ್ಧರಣೆಯಲ್ಲಿರುವ ವ್ಯಂಗ್ಯವನ್ನು ಆಮೂರರು ಗಮನಿಸಿದಂತಿಲ್ಲ. ಕೊನೆಯ ಸಾಲುಗಳನ್ನು ಪೂರ್ತಿಯಾಗಿ ನಿಧಾನ ಗತಿಯಲ್ಲಿ ಓದಿದಾಗ ಮಾತ್ರ ಚಟ ಮತ್ತು ಹಟ ಎರಡೂ ಬೇಕಾಗಿಲ್ಲವೆಂಬ ತೀರ್ಮಾನಕ್ಕೆ ಬರುವುದನ್ನು ಗಮನಿಸಬಹುದು:

''ಮಾನವನಿಗೆ ಚಟ ಬೇಕು. 'ಚಟವಿಲ್ಲದಿದ್ದರೆ ಹಟ ಸೇರುವುದು'. ಚಟವಿಲ್ಲದವನು ಮಾನವನೇ ಅಲ್ಲವೆಂದು ಹೇಳಲಾಗಿದೆ. ಆದರೆ ಹಾಗೆ ಹೇಳಲು ನನಗೆ ಮನಸ್ಸಿಲ್ಲ. ಅಂತಹ ಹಟವೂ ನನ್ನಲ್ಲಿಲ್ಲ. ಯಾಕೆಂದರೆ, ನನಗೂ ಚಟವಿದೆ. ದಣಿವಾಗ, ಕನಲಿದಾಗ, ಜಾರಿ ಬಿದ್ದಾಗ, ಜಂಬ ತುಂಬಿದಾಗ, ಬಲು ಸಂತೋಷವಾದಾಗ ನನಗೆ ಬರೆಯುವ ಚಟವಿದೆ. ಅದಕ್ಕಾಗಿ ನಾನು ಬರೆದುದನ್ನು ನೀವು ಓದಲೇಬೇಕೆಂಬ ಹಟ ಕೂಡಾ ನನಗಿಲ್ಲ.''

ಚಟವಿಲ್ಲದವನು ಮಾನವನೆ ಅಲ್ಲ ನಿಜ. ಎಂತಹ ಚಟಗಳಿರಬೇಕು ಎಂಬುದೇ ಇಲ್ಲಿನ ಧ್ವನಿ. ಚಟಗಳು ಸೃಜನಶೀಲವಾಗಿರಬೇಕು. ಇನ್ನೊಬ್ಬರಿಗೆ ಅಥವಾ ಸಮಾಜಕ್ಕೆ ಅಥವಾ ತನಗೇ ಕಂಟಕಪ್ರಾಯವಾಗಿರಬಾರದು. ಚಟವಿದ್ದವರು ಮಾತ್ರ ಹಿಟ್ಲರ್, ಮುಸಲೋನಿಯಂತಾಗುತ್ತಾರೆ: ಏಕೆಂದರೆ, ಅವರು ಮನುಷ್ಯನನ್ನು [illegible] ಸಂತೋಷಿಸುವ ಚಟ ಬೆಳೆಸಿಕೊಂಡಿದ್ದಾರೆ. ಯುದ್ಧಗಳೇ ಅವರ ಚಟ. [illegible]

ವಿರೋಧಿಯಾದದ್ದು. ಆದ್ದರಿಂದ ಚಟವಿಲ್ಲದವರು ಹಿಟ್ಲರ್, ಮುಸಲೋನಿಯರಂತೆ ಆಗುತ್ತಾರೆ ಎಂಬ ಆಮೂರರ ಮಾತು ಸರಿಯಲ್ಲ. ಚಟ ಸೃಜನಶೀಲವಾಗಿದ್ದಿದ್ದರೆ ಮಾನವಕಂಟಕರಾಗಲು ಸಾಧ್ಯವಿರುತ್ತಿರಲಿಲ್ಲ. ಆದ್ದರಿಂದಲೇ ಶ್ರೀರಂಗರು ''ಜಂಬ ತುಂಬಿದಾಗ, ಬಲು ಸಂತೋಷವಾದಾಗ ಬರೆಯುವ ಚಟವಿದೆ. ಅದಕ್ಕಾಗಿ ನಾನು ಬರೆದುದನ್ನು ನೀವು ಓದಬೇಕೆಂಬ ಹಟ ಕೂಡಾ ನನಗಿಲ್ಲ'' ಎಂದು ಬರೆದಿರುವ ವಾಕ್ಯದಲ್ಲಿನ ಧ್ವನಿಯನ್ನು ಗಮನಿಸಬೇಕು. ಹಿಟ್ಲರ್ ಮತ್ತು ಮುಸಲೋನಿಗೂ ಕೂಡಾ ಚಟವಿತ್ತು. ಆ ಚಟ ಮಾನವವಿರೋಧಿಯಾಗಿತ್ತು. ಇಂತಹ ಮಾನವವಿರೋಧಿ ಚಟಗಳು ಬೇಡ; ಆದರೆ ಸೃಜನಶೀಲವಾದಂತಹ ಸಾಮಾಜಿಕ ಅಭಿವೃದ್ಧಿಯ ಕಡೆ ಮುಖ ಮಾಡುವ ಚಟಗಳು ಬೇಕು; ಹಾಗೆಯೇ ಇಂತಹ 'ಹಟಗಳೇ ಬೇಕು', ಎಂಬ ಧ್ವನಿ ಇಲ್ಲಿದೆ.

ಶ್ರೀರಂಗರ ಪ್ರಬಂಧಗಳ ಮುಖ್ಯ ಗುಣವೆಂದರೆ ಸಾಮಾಜಿಕ ಮತ್ತು ರಾಜಕೀಯ ಸಮಸ್ಯೆಗಳ ಕಡೆ ನಮ್ಮ ಗಮನವನ್ನು ಸೆಳೆಯುವ ಗುಣ. ಸ್ವಾತಂತ್ರ್ಯದ ನಂತರ ಸಮಾಜದಲ್ಲಿ ಜಾತೀಯತೆಯು ಹೆಚ್ಚಾಗುತ್ತಿದೆಯೆ ಹೊರತು ಕಡಿಮೆಯಾಗುತ್ತಿಲ್ಲ. ಜಾತಿ ಪದ್ಧತಿ ಭಾರತೀಯ ಜೀವನ ಪ್ರಕ್ರಿಯೆಯಲ್ಲಿ ಬಹುಕಾಲದಿಂದ ಅದರ ಒಂದು ಭಾಗವಾಗಿದ್ದು ಅದರ ಕೆಡುಕು, ಪ್ರಭಾವವನ್ನು ಸಂಪೂರ್ಣವಾಗಿ ಭಾರತೀಯ ಸಂಸ್ಕೃತಿಯಿಂದ ಉಚ್ಚಾಟಿಸಲು ಅನೇಕ ತಲೆಮಾರುಗಳು ಸಂದುಹೋಗಬೇಕಾಗುತ್ತದೆ. ಅದರ ಶಾಸನಬದ್ಧ ತಳಹದಿ ಎಂದರೆ ಜಾತಿಯ ಹೊರಗೆ ವಿವಾಹ ನಿಷೇಧ ಈಗ ಅಸ್ತಿತ್ವದಲ್ಲಿಲ್ಲ. ಸಮಾಜದ ಮೇಲು ಕೀಳು ವ್ಯವಸ್ಥೆಯಂತಹ ಅದಕ್ಕೆ ತೆರವಾಗಿದ್ದ ಇತರ ಅಂಶಗಳೂ ಸಹ ಅದೃಶ್ಯವಾಗುತ್ತಿವೆ. ಜಾತಿ ವ್ಯವಸ್ಥೆಯ ಶ್ರೇಣಿಯಲ್ಲಿ ಕೀಳೆಂದು ಪರಿಗಣಿಸಲಾಗಿದ್ದ ಅನೇಕ ಜಾತಿಗಳು ಈಗ ಸಾಮಾಜಿಕ ಸ್ಥಾನಮಾನದ ದೃಷ್ಟಿಯಿಂದ ಮೇಲೆ ಬಂದು ಆ ಮೂಲಕ ಜಾತಿಯ ಸಾಂಪ್ರದಾಯಿಕ ಮಾನದಂಡಗಳನ್ನು ಅರ್ಥಹೀನಗೊಳಿಸುತ್ತಿವೆ. ಇತರ ಅಸಂಖ್ಯಾತ ಅಂಶಗಳೂ ಕೂಡ ಜಾತಿಪದ್ಧತಿಯನ್ನು ದುರ್ಬಲಗೊಳಿಸುವುದು ಮಾತ್ರವಲ್ಲದೆ, ಅದನ್ನು ಸಾಮಾಜಿಕ ಸಂಘಟನೆಯಾಗಿ ಮುಂದುವರಿಯದಂತೆ ಜಾತಿಪದ್ಧತಿಯನ್ನು ನಿರ್ಮೂಲಗೊಳಿಸುವತ್ತ ಕೆಲಸ ಮಾಡುತ್ತಿವೆ. ಆದರೂ ರಾಜಕೀಯ ಮತ್ತು ಆಡಳಿತ ವಲಯ ಹಾಗೂ ಗಣನೀಯ ಪ್ರಮಾಣದಲ್ಲಿ ಸ್ವಇಚ್ಛಿತ ಚಟುವಟಿಕೆಯ ಕ್ಷೇತ್ರವನ್ನು ಬಿಟ್ಟು ಉಳಿದಂತೆ ಜಾತಿಯ ಹಿಡಿತ ದುರ್ಬಲವಾಗಿದ್ದರೂ ಅದು ಮಹತ್ವದ ಅಂಶವಾಗಿ ಮುಂದುವರಿಯುತ್ತಿರುವುದು ಸತ್ಯಕ್ಕೆ ದೂರವಾದ ಸಂಗತಿಯಲ್ಲ. ಅಂದರೆ ಹಳೆಯ ಪ್ರತ್ಯೇಕತಾ ಪದ್ಧತಿ ಶ್ರೇಷ್ಠತೆಯ ಭಾವನೆ ಉತ್ತಮ ವರ್ಗಗಳ ವಿಶೇಷಾಧಿಕಾರಗಳು ಸ್ವಾಭಾವಿಕವೆಂಬುದರಲ್ಲಿ ನಂಬಿಕೆ – ಮುಂತಾದವುಗಳು ತೊಲಗಿಲ್ಲ. ಇಂತಹ ಜಾತಿ ವ್ಯವಸ್ಥೆಯ ವಿಡಂಬನೆಯನ್ನು 'ದೋಸೆಯ ಪ್ರಾಣಹಿಂಸೆ' ಅರ್ಥಾತ್ 'ಜೀವನವೇ ಜಿದ್ದು' ಎಂಬ ಹರಟೆಯಲ್ಲಿ ಮಾಡುತ್ತಾರೆ :

''ಇಂದು ಹಿಂದೂಸ್ತಾನದ ಜನರಿಗೆ ಒಂದು ಸುಖದ ಮಾದರಿಯನ್ನು ಅವನು ಹಾಕಿಕೊಟ್ಟಿದ್ದಾನೆ. ಯಾವ ದೇಶದಲ್ಲಿ ಸತ್ತರೂ ಹಿಂದೂಸ್ತಾನದಲ್ಲಿ ಸಾಯಬಾರದು ಎನ್ನುವಂತಹ ಸ್ಥಿತಿ ನಮ್ಮದು. ಪ್ಲೇಗು, ಕಾಲರಾ ಮುಂತಾದ ಅಸಹ್ಯ ರೋಗಗಳ ತವರುಮನೆ ನಮ್ಮ ದೇಶ. ಈ ಅಸಹ್ಯ ರೋಗಗಳಿಂದ ಬರುವ ಮರಣವೂ ಅಸಹ್ಯವಾದುದು. ಹೇಸಿಗೆಯಾದುದು, ಕ್ರೂರವಾದುದು. ಅದರಂತೆಯೇ ನಮ್ಮದೇ ಆದ ಒಂದು ಕ್ಷಯ ರೋಗವಿದೆ. ಅದೆಂದರೆ ಬಡತನ. ಈ ರೋಗದಿಂದ ಅನೇಕ ವರ್ಷಗಳವರೆಗೆ ಬಳಲಿ ಬಳಲಿ ಸವೆದು ಸವೆದು ಕೊನೆಗೆ ಕೊಳೆತುಹೋಗಬೇಕಾಗುವುದು. ಇದು ಕ್ರೂರವಾದ ಮರಣವೆ. ಇದಲ್ಲದೆ ಇನ್ನಾವ ರೋಗದಿಂದ ಸತ್ತರೂ ಜಾತಿಯ ತೊಡಕು ತೊಂದರೆಗಳು ಇದ್ದೇ ಇವೆ. ಆದರೆ ದೋಸೆಯ ಭಕ್ತರು ಜಾತಿಯನ್ನು ಮೀರಿದವರು. ದೋಸೆಗೆ ಜಾತಿ ಎಂಬುದಿಲ್ಲ. ಅದನ್ನು ತಿನ್ನುವವನು ಇಂತಹ ಜಾತಿಯವನೆ ಇರಬೇಕೆಂಬ ನಿಯಮವಿಲ್ಲ. ಇಷ್ಟೇಕೆ, ದೋಸೆಯ ಸೇವನೆಯಿಂದ ಹೊಸತೊಂದು ವಿಶ್ವ

**GOD (a creation of man)**
*A. N. Moorthy Rao, Tr: A. N. Subbaramaiah*
***Pages : 168*** ***Price : Rs. 100***

**ಅರ್ನೆಸ್ಟೊ ಚೆ ಗುವಾರ** — *ಐ. ಲಾವ್ರೆತ್‌ಸ್ಕಿ*
*ಅನು : ಗೊ.ರು. ಚನ್ನಬಸಪ್ಪ*
*ಸೂರ್ಯಕಾಂತ ಸೊನ್ನದ, ಕೆ.ಪಿ. ಸ್ವಾಮಿ*
*ಪುಟ : ೩೧೨* *ಬೆಲೆ : ರೂ. ೧೦೦*

**ಶಿಕ್ಷಣದ ಭಾಷೆ ಮತ್ತು ಬುದ್ಧಿವಂತಿಕೆ**
*ಜಿ.ವಿ. ಶ್ರೀನಾಥ ಶಾಸ್ತ್ರೀ, ಎನ್.ಎಸ್. ರಘುನಾಥ, ಡಾ|| ಜಿ. ಪುರುಷೋತ್ತಮ, ಡಾ|| ಸಿ. ಆರ್. ಚಂದ್ರಶೇಖರ್, ಡಾ|| ಜಿ. ರಾಮಕೃಷ್ಣ*
*ಪುಟ : ೮೦* *ಬೆಲೆ : ರೂ. ೨೫*

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಸಾವಿತ್ರಿ** (ಸಾಮಾಜಿಕ ನಾಟಕ) — ಎಚ್. ಎಸ್. ಕುಲಕರ್ಣಿ
*ಪುಟ : ೬೦* *ಬೆಲೆ : ರೂ. ೪೦*

**ಉಳಿದ ತಂತು** (ಕವನ ಸಂಕಲನ) — ಎಸ್. ಅರುಂಧತಿ
*ಪುಟ : ೫೮* *ಬೆಲೆ : ರೂ. ೩೫*

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಶ್ರೀ ರಾಘವೇಂದ್ರ ಪ್ರಕಾಶನ**, ಅಂಬಾರಕೊಡ್ಲ, ಅಂಕೋಲ, ಉತ್ತರಕನ್ನಡ - ೫೮೧ ೩೧೪

**ಬಂಡಾಯ : ಕಾಲು ಶತಮಾನ** (ವಿಚಾರ ವಿಮರ್ಶೆ)
*ಸಂ. : ಡಾ|| ಕಾ.ವೆಂ. ಶ್ರೀನಿವಾಸಮೂರ್ತಿ, ಟಿ. ಹನುಮಂತರಾಯ, ಶಿವಾನಂದ ಎಂ. ಹಂಚಿನಾಳ*
*ಪುಟ : ೧೮೬* *ಬೆಲೆ : ರೂ. ೬೦*
**ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್** (ರಿ), ೪೨೦, ೬ನೇ ಮುಖ್ಯರಸ್ತೆ, ವಿಜಯನಗರ ಮೊದಲನೇ ಹಂತ, ಮೈಸೂರು

## ಸಾದರ ಸ್ವೀಕಾರ

**ಚಿಂತನ ಲಹರಿ** (ಲೇಖನಗಳು) — ಚಂದ್ರಪ್ಪ ಹೆಬ್ಬಾಳಕರ
*ಪುಟ : ೧೦೦* *ಬೆಲೆ : ರೂ. ೬೦*
**ಧರಿನಾಡು ಕನ್ನಡ ಸಂಘ**, ಕೇಂದ್ರ ಸಮಿತಿ (ರಿ), ಅಲ್ಲಮ ಪ್ರಭು ನಗರ, ಬೀದರ - ೫೮೫ ೪೦೩

**ಚೆಲುವ ರಾಯ** (ಮಕ್ಕಳ ಕವಿತೆಗಳು) — ದೊಡ್ಡಣ್ಣ ಗದ್ದನಕೇರಿ
*ಪುಟ : ೭೬* *ಬೆಲೆ : ರೂ. ೬೦*
**ಚುಕ್ಕಿ ಚಂದ್ರಮ ಪ್ರಕಾಶನ**, ನಂ. ೨೭೭, ೫ನೇ ಕ್ರಾಸ್ ವಿಧಾನಸೌಧ ಬಡಾವಣೆ, ಕವಿಧಾಮನಗರ, ಲಗ್ಗೆರೆ, ಬೆಂಗಳೂರು

**ನಾಳೆಯಿಂದ** (ಕವಿತೆಗಳು) — ಡಿ.ವಿ. ಪ್ರಹ್ಲಾದ್
*ಪುಟ : ೬೦* *ಬೆಲೆ : ರೂ. ೩೦*
**ಸಂಚಯ**, ನಂ. ೧೦೦, ೨ನೇ ಮೈನ್. ೬ನೇ ಬ್ಲಾಕ್, ೩ನೇ ಹಂತ, ೩ನೇ ಫೇಸ್, ಬನಶಂಕರಿ, ಬೆಂಗಳೂರು - ೮೫

**ಮನೆಯೊಡೆಯನಿದ್ದಾನೋ ?** (ಅಂಕಣ ಲೇಖನಗಳು)
*ಎಸ್. ಜಿ. ಮೈಸೂರು ಮಠ*
*ಪುಟ : ೪೮೮* *ಬೆಲೆ : ರೂ. ೧೫೦*
**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

**ಚದುರಂಗದ ಕುದುರೆ** (ಗುಜರಾಥೀ ಕಥೆಗಳು)
*ಚಂದ್ರಕಾಂತ ಭಕ್ಷೀ, ಅನು : ಶಿಮುಂಜೆ ಪರಾರಿ*
*ಪುಟ : ೯೪* *ಬೆಲೆ : ರೂ. ೭೫*
**ಅಭಿಜಿತ್ ಪ್ರಕಾಶನ**, ಎ/೪೦೪, ವಿನಾಯಕ್, ಆಶಿಷ್, ಎಂ. ಎಂ. ಎಂ. ರಸ್ತೆ, ಪಿ ಅಂಡ್ ಟಿ ಕಾಲನಿ ಹತ್ತಿರ, ಮುಳುಂದ್ (ಪ), ಮುಂಬಯಿ - ೪೦೦ ೦೮೦

**ಕನ್ನಡ ಕಲಾ ಸಂವಹನ** — ಡಾ|| ಸ್ವಾಮಿರಾವ ಕುಲಕರ್ಣಿ
*ಪುಟ : ೯೬* *ಬೆಲೆ : ರೂ. ೪೦*

**ಚಿಂದಿ ಬಟ್ಟೆ** (ಕಥಾ ಸಂಕಲನ) — ಭಾರತೀಪುತ್ರ
*ಪುಟ : ೯೪* *ಬೆಲೆ : ರೂ. ೬೦*
**ಭಾರತೀಯ ಸಾಹಿತ್ಯ**, ಬಣಜಿಗರ ಬೀದಿ, ಹಳೇ ಅಂಚೆ ಕಛೇರಿ ರಸ್ತೆ, ನಾಗಮಂಗಲ - ೫೭೧ ೪೩೨

**ಕಬೀರರ ಕವನಗಳು** ಇಂ. ಅನು : ರವೀಂದ್ರನಾಥ ಠಾಕೂರ್
*ಕನ್ನಡ ಅನು : ಜಿ. ರಾಮನಾಥ ಭಟ್*
*ಪುಟ : ೧೩೬* *ಬೆಲೆ : ರೂ. ೭೦*
**ಶುಭೋದಯ ಪ್ರಕಾಶನ**, ನಂ. ೫೦೭, ೬೫ನೇ ಅಡ್ಡರಸ್ತೆ, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - ೧೦

**ಕೋಗಿಲೆಯ ಕೋರಿಕೆ** (ಕವನಗಳು)
*ಬೆಳಗುಂದಿ ಮಲ್ಲೇಶಪ್ಪ ಟೇಲರ್*
*ಪುಟ : ೫೨* *ಬೆಲೆ : ರೂ. ೫೦*

**ಮರೆಯಲಿ ಹ್ಯಾಂಗ** (ಅಂಕಣ ಬರಹಗಳು)
*ಮಹಿಪಾಲ ರೆಡ್ಡಿ ಮುನ್ನೂರ್*
*ಪುಟ : ೧೪೫* *ಬೆಲೆ : ರೂ. ೧೦೦*

**ಗಂಗೇಚ, ಯಮುನೇಚೈವ** (ಪ್ರವಾಸ ಕಥನ)
*ರತ್ನಾ ರಾಧಾಕೃಷ್ಣ ಜೋಶಿ*
*ಪುಟ : ೬೭* *ಬೆಲೆ : ರೂ. ೬೦*

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಶಿರಪುರ ಪ್ರಕಾಶನ**, ಮನೆ. ನಂ. ೧೦-೯೩೪/೪೨, ಮಹಾಲಕ್ಷ್ಮಿನಗರ, ಬ್ರಹ್ಮಪುರ, ಗುಲಬರ್ಗಾ-೫೮೫ ೧೦೩

**ವಿಶ್ವಮಾನ್ಯ ಗಾಂಧೀಜಿ** — ಸಿ.ಎನ್. ಕೃಷ್ಣಮೂರ್ತಿ
*ಪುಟ : ೧೨೦* *ಬೆಲೆ : ರೂ. ೬೦*
**ಭಾಗ್ಯಲಕ್ಷ್ಮೀ ಪ್ರಕಾಶನ**, ೮೭, ೩ನೇ ಕ್ರಾಸ್, ೪ನೇ ಬ್ಲಾಕ್, ಬನಶಂಕರಿ ೩ನೇ ಸ್ಟೇಜ್, ೩ನೇ ಫೇಸ್, ಬೆಂಗಳೂರು - ೮೫

**ಚೌಕಬಾರ** (ಕವನ ಸಂಕಲನ) — ವಿಶ್ವನಾಥ್ ಜಿ.ಎಸ್.
*ಪುಟ : ೬೦* *ಬೆಲೆ : ರೂ. ೪೦*
**ವಾಗ್ವಿಲಾಸ ಪ್ರಕಾಶನ**, ೪೨೫/ಹೊ, ೫ನೇ ತಿರುವು, ಹೊಸಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦

ಬಾಂಧವ್ಯದ ಜಾತಿಯೆ ನಿರ್ಮಾಣವಾಗುತ್ತಲಿದೆ ಎಂದು ಹೇಳಬಹುದು.''

ಜಾತಿ ವ್ಯವಸ್ಥೆಯನ್ನು ಪ್ಲೇಗು, ಕಾಲರಾ ಎಂದು ಪರೋಕ್ಷವಾಗಿ ಕರೆದಿರುವ ಶ್ರೀರಂಗರು ಬಡತನವನ್ನು ಕ್ಷಯಕ್ಕೆ ಹೋಲಿಸಿದ್ದಾರೆ. ಬದುಕಿದ್ದಾಗ ಸತ್ತಾಗ 'ಜಾತಿ' ಎಂಬುದು ಬೆಂಬಿಡದೆ ಹಿಂಬಾಲಿಸುತ್ತದೆ. ಆದ್ದರಿಂದ ಸಹಭೋಜನದ ವ್ಯವಸ್ಥೆ ಭಾರತದ ಎಲ್ಲೆಡೆಯಲ್ಲಿ ಅದರಲ್ಲೂ ವಿಶೇಷವಾಗಿ ಹಳ್ಳಿಗಳಲ್ಲಿ ಏರ್ಪಡಿಸಬೇಕು. ಮೇಲಿಂದ ಮೇಲೆ ದಲಿತರು ಸವರ್ಣೀಯರ ಮಧ್ಯೆ ನಡೆಯುವ ಘರ್ಷಣೆಗಳನ್ನು ತಪ್ಪಿಸಬಹುದು. ಜಾತಿಪದ್ಧತಿಗೆ ಸಂಬಂಧಿಸಿದಂತೆ ಜನರ ಆಲೋಚನೆ ಮತ್ತು ನಡತೆಯಲ್ಲಿ ಪರಿವರ್ತನೆ ತರಲು ನಿರ್ದಿಷ್ಟ ಕ್ರಮಗಳನ್ನು ಕೈಗೊಳ್ಳಬೇಕು. ದೇಶದಲ್ಲಿನ ಜಾತಿ ಪದ್ಧತಿಯಲ್ಲಿ ಬರೀ ಸುಧಾರಣೆ ತರುವುದಕ್ಕೆ ಬದಲು ಅದನ್ನು ನಿರ್ಮೂಲ ಗೊಳಿಸುವ ಉದಾತ್ತ ಕೆಲಸದಲ್ಲಿ ತೊಡಗಲು ಎಲ್ಲರೂ ಪ್ರಯತ್ನಿಸಬೇಕು ಎಂಬ ಧ್ವನಿಯನ್ನು ಈ ಪ್ರಬಂಧ ಒಳಗೊಂಡಿದೆ. ಇಲ್ಲಿ ದೋಸೆ ಬರೀ ನೆಪ, ಅಷ್ಟೆ.

ಶ್ರೀರಂಗರು ರಾಜಕೀಯ ಪಕ್ಷಗಳ ವಿಡಂಬನೆಯನ್ನು ಮಾಡುತ್ತಾರೆ. ಇಂದು ಎಲ್ಲಾ ಆಗುಹೋಗುಗಳು ರಾಜಕೀಯ ನಿರ್ಣಯದ ಮೇಲೆ ನಿರ್ಧಾರವಾಗುತ್ತವೆ. ದೇಶದ ಅಭಿವೃದ್ಧಿ, ಸಾಮಾಜಿಕತೆಯ ಸ್ವರೂಪ, ವಿಜ್ಞಾನ ತಂತ್ರಜ್ಞಾನ ಎಲ್ಲವೂ ರಾಜಕೀಯ ನಿರ್ಣಯಗಳಿಂದಲೇ ನಿರ್ಧಾರವಾಗುವಂತಹವು. ಕಾಂಗ್ರೆಸ್ ಪಕ್ಷವನ್ನು ಶ್ರೀರಂಗರು ಹೆಚ್ಚಾಗಿ ವಿಡಂಬನೆಗೊಳಪಡಿಸಿದ್ದಾರೆ. ಕಾಂಗ್ರೆಸ್ ಪಕ್ಷ ಅಂದು ತಳೆದಿದ್ದ ಆದರ್ಶ ಗಳೆಲ್ಲ ನೆಹರೂ ಯುಗದಲ್ಲಿ ನುಚ್ಚು ನೂರಾದವು. ಈ ಕಾರಣದಿಂದ ಆ ಪಕ್ಷವನ್ನು ಹೆಚ್ಚು ಗೇಲಿ ಮಾಡಿದ್ದಾರೆ. ಧ್ಯೇಯ, ಉದ್ದೇಶ, ಬದ್ಧತೆ ಇಲ್ಲದ ರಾಜಕೀಯ ಪಕ್ಷಗಳನ್ನು ತೀವ್ರವಾದ ತರಾಟೆಗೆ ತೆಗೆದುಕೊಂಡಿರುವುದನ್ನು (ಹರಟೆಗಳು, ಪುಟ ೧೧೩) ಕಾಣಬಹುದು.

ಸ್ವಾತಂತ್ರ್ಯಪೂರ್ವದಲ್ಲಿದ್ದ ರಾಜರ ವಿಶೇಷ ಸೌಲಭ್ಯದ ಮೇಲೆ ಆಧರಿಸಿದ ಉಂಬಳಿಗಮಾನ್ಯ ಪದ್ಧತಿ, ಅನುವಂಶಿಕ ಭೂ ಒಡೆತನ, ಭೂ ಕಂದಾಯ ಹಾಗೂ ಭೂಮಿದತ್ತಿಗಳ ನೀಡಿಕೆ – ಇವುಗಳು ಅದೃಶ್ಯವಾಗಿ ಭಾರತೀಯ ಸಮಾಜದ ಶ್ರೇಣೀಕೃತ ವ್ಯವಸ್ಥೆಯ ಲಕ್ಷಣ ಬದಲಾಯಿತು. ಮಹಾರಾಜರು, ನವಾಬರು ಮತ್ತು ಇತರೆ ಬಿರುದಾಂಕಿತ ಶ್ರೀಮಂತ ವರ್ಗಗಳು ಸಾಮಾಜಿಕ ನಾಯಕತ್ವವನ್ನು ಬಿಟ್ಟು ಕೊಟ್ಟು ಹಿನ್ನೆಲೆಗೆ ಸರಿದರು. ಆದರೆ ರಾಜಕೀಯ ಪ್ರತಿನಿಧಿಗಳು ಹಾಗೂ ಉದ್ಯಮ ಪತಿಗಳು ತಮ್ಮ ಧನ ಸಾಮ್ರಾಜ್ಯಕ್ಕೆ ರಾಜಕೀಯ ಅಧಿಕಾರದ ಕಿರೀಟ ಗಳಿಸಲು ನಿರ್ಧಾರಿತ ಪ್ರಯತ್ನ ನಡೆಸುತ್ತಿದ್ದಾರೆ. ಸಂಘ ಸಂಸ್ಥೆಗಳ ಅಧಿಕಾರಸ್ಥರಾಗಿ ನಾಮಕರಣ ಗೊಳ್ಳುವುದು ಅಧಿಕಾರದ ಚುಕ್ಕಾಣಿ ಹಿಡಿಯುವುದು, ಸ್ವಾರ್ಥ ಸಾಧನೆಯ ಮನೋ ಭಾವ ಹೆಚ್ಚಾದವು. ಅಧಿಕಾರಕ್ಕಾಗಿ ತಮ್ಮೆಲ್ಲ ನೈತಿಕತೆಯನ್ನು ತೂರಿಬಿಡುವ ಸಂಸ್ಕೃತಿ ರೂಪುಗೊಂಡಿತು. ಇದನ್ನು 'ನಾನು ರಾವಣನಾದರೆ', 'ನಾನು ವಿಶ್ವಾಮಿತ್ರನಾದರೆ', 'ನಾನು ದಶರಥನಾದರೆ', 'ನಾನು ಕೃಷ್ಣನಾದರೆ' ಈ ಪ್ರಬಂಧಗಳಲ್ಲಿ ವಿಡಂಬನೆ ಗೇಲಿಯ ಮೂಲಕ ಮನವರಿಕೆ ಮಾಡಿಕೊಡುವ ಕ್ರಮ ಅನನ್ಯವಾದದ್ದು. ಈ ಶ್ರೇಣಿಯ ಪ್ರಬಂಧಗಳಲ್ಲಿ ಆತ್ಮಾವಹೇಳನೆಯ ವ್ಯಂಗ್ಯವಿದೆ. ಆತ್ಮಾವಹೇಳನೆಯ ವ್ಯಂಗ್ಯದಲ್ಲಿ ವ್ಯಂಗ್ಯಕಾರ ಮುಖವಾಡದ ಹಿಂದೆ ಮರೆಯಾಗುತ್ತಾನೆ. ಅಂದರೆ ಆತನೂ ಒಂದು ಪಾತ್ರವಾಗಿ ಕಾಣಿಸಿಕೊಳ್ಳುವುದು ಇಲ್ಲಿನ ವೈಶಿಷ್ಟ್ಯ. ಇಲ್ಲಿಯ ವ್ಯಂಗ್ಯದಲ್ಲಿ ಆತ ಒಂದು ಪಾತ್ರವಾಗಿ ತಾನೇ 'ತಗ್ಗಿ' ಕೀಳುಗೆಳೆದುಕೊಂಡು ವರ್ತಿಸುತ್ತಾನೆ. ತನ್ನ ಪಾತ್ರದ ಬಗ್ಗೆ ಆತ ಮೂಡಿಸುವ ಭಾವಗಳು ಅವನ ವ್ಯಂಗ್ಯತಂತ್ರದ ಒಂದು ಭಾಗವೇ ಆಗಿರುತ್ತವೆ. ಈ ರೀತಿಯ ಆತ್ಮಾವಹೇಳನೆಯ ವ್ಯಂಗ್ಯವನ್ನು ತಮ್ಮ ಬರಹಗಳಲ್ಲಿ ತಂದವರು ಸಾಕ್ರೆಟಿಸ್ ಮತ್ತು ಭಾಸರ್. ಕನ್ನಡದ ಸಂದರ್ಭದಲ್ಲಿ ಶ್ರೀರಂಗರನ್ನು ಬಿಟ್ಟರೆ ದಲಿತಕವಿ ಸಿದ್ಧಲಿಂಗಯ್ಯ ಇಂತಹ ಆತ್ಮಾವಹೇಳನೆಯ ವ್ಯಂಗ್ಯದ ಮೂಲಕ ಸಮಾಜದ ಓರೆಕೋರೆಗಳನ್ನು ರಾಜಕೀಯ ಪಕ್ಷ ರಾಜಕಾರಣಿಗಳನ್ನು ಒಟ್ಟಾರೆ ಸ್ವಾತಂತ್ರ್ಯೋತ್ತರ ಸಾಂಸ್ಕೃತಿಕ ಪರಿಸರದ ಬಗ್ಗೆ ನಮ್ಮ ಗಮನ ಹರಿಯುವಂತೆ ಮಾಡುತ್ತಾರೆ. ಜಿ. ಎಸ್. ಆಮೂರ ಅವರು ಶ್ರೀರಂಗರ ಒಟ್ಟು ಸಾಹಿತ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳಿರುವ ಮಾತುಗಳು ಶ್ರೀರಂಗರ 'ಹರಟೆ' ಪ್ರಬಂಧಗಳಿಗೂ ಅನ್ವಯಿಸುವುದರಿಂದ ಅವುಗಳನ್ನು ಉದ್ಧರಿಸುವುದರ ಮೂಲಕ ನನ್ನ ಮಾತು ಮುಗಿಸುತ್ತೇನೆ. ''ತಮ್ಮ ಜೀವನದುದ್ದಕ್ಕೂ ಅವರು (ಶ್ರೀರಂಗರು) ಮನುಷ್ಯ ತನ್ನ ಪರಿಸರವನ್ನು ಹೇಗೆ ತನ್ನ ಪ್ರಗತಿಗೆ ಅನುಕೂಲವನ್ನಾಗಿ ಪರಿವರ್ತಿಸಬಹುದು ಎನ್ನುವುದಕ್ಕೆ ಹೆಚ್ಚು ಲಕ್ಷ್ಯ ಕೊಟ್ಟರು. ಟೀಕೆ ವಿಡಂಬನೆ ಹಾಸ್ಯ ಮೊದಲಾದ ಸಾಧನಗಳನ್ನು ಮನುಷ್ಯ ಸ್ವಭಾವ ದಲ್ಲಡಗಿದ ದ್ವಿಧಾವೃತ್ತಿ, ಆತ್ಮವಂಚನೆ, ಅಜ್ಞಾನಗಳ ವಿರುದ್ಧ ಪ್ರಯೋಗಿಸುವ ಮೂಲಕ ಅವನ ಕಲ್ಯಾಣವನ್ನೆ ಬಯಸಿದರು. ಮಾನವ ಹಾಗೂ ಸಮಾಜ (Man in Society) ಇದೇ ಶ್ರೀರಂಗರ ಮಹತ್ತಾದ ವಿಷಯವಾಗಿತ್ತು ಎಂದು ಹೇಳಬಹುದು.''

ಎಚ್. ದಂಡಪ್ಪ
೫೬೧, ೨ನೇ ಕ್ರಾಸ್, ಹಳೇ ಸಬ್ ರಿಜಿಸ್ಟ್ರಾರ್ ಕಛೇರಿ ಹತ್ತಿರ
ಯು ವಿ ಸಿ ಇ ಲೇಔಟ್, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

೪೯ನೇ ಪುಟದಿಂದ (ಕಸಾಯಿಖಾನೆಯ...)

ಮೇಲೆ ಹಲ್ಲೆ ನಡೆಸಬಹುದು ಎಂಬುದು. ಆದರೆ ಅವರ ಲೆಕ್ಕಾಚಾರ ತಪ್ಪಿದ್ದೆಲ್ಲಿ ಅಂದರೆ ಕಸಾಯಿಖಾನೆ ಮುಚ್ಚಿ ಹೋಗಿ ಕೆಲಸಗಳು ಕಳೆದುಕೊಂಡ ಸಾವಿರಾರು ಮಂದಿ ಕೆಲವು ಯುವಕ ಸಂಘಟಕರೊಂದಿಗೆ ಜಿಲ್ಲಾಧಿಕಾರಿಗಳ ಕಚೇರಿಯ ಮುಂದೆ ಶಾಂತಿಯುತ ಧರಣಿ ಕಾರ್ಯಕ್ರಮ ನಡೆಸಿ, ಮನವಿ ಅರ್ಪಿಸಿ ಉದ್ಯೋಗ ಕಳೆದುಕೊಂಡ ತಮಗೆ ನ್ಯಾಯ ದೊರಕಿಸಬೇಕೆಂದು ಒತ್ತಡ ತಂದರು. ಇದು ಎಲ್ಲಿಯವರೆಗೆ ಮುಂದುವರೆ ಯಿತೆಂದರೆ ಕೊನೆಗೆ ವಿಧಾನಸೌಧದ ಮಧ್ಯ ಪ್ರವೇಶದವರೆವಿಗೆ ಹೋಯಿತು. ಮತ್ತೆ ಕಸಾಯಿಖಾನೆ ಆರಂಭಗೊಳ್ಳಬೇಕು ಎಂಬ ಆದೇಶ ಹೊರಟಿತು. ಎಂಟೂವರೆ ಲಕ್ಷಗಳಿಗೆ ಗುತ್ತಿಗೆ ಪಡೆದಿದ್ದ ಭಜರಂಗದಳದ ನಾಯಕನಿಗೆ ಈಗ ದಿಕ್ಕು ತೋಚದೆ ಹೋಗಿ ಗುತ್ತಿಗೆ ಹಿಂತಿರುಗಿಸಿ ಕೊಟ್ಟುಬಿಡುವ ನಿರ್ಧಾರ ಮಾಡಿದ್ದಾನೆ. ಏಪ್ರಿಲ್ ತಿಂಗಳ ಕೊನೆಯ ವಾರದಿಂದ ಮತ್ತೆ ಕಸಾಯಿಖಾನೆ ತನ್ನ ಎಂದಿನ ಚಟುವಟಿಕೆಗಳನ್ನು ಆರಂಭಿಸಿದೆ.

* * *

ಜಾನುವಾರು ಕಳ್ಳ ಸಾಗಾಣಿಕೆಯನ್ನು ವಿರೋಧಿಸುವ ಹಕ್ಕು ಯಾರಿಗೂ ಇದೆ. ಆದರೆ ಕಾನೂನು ಪ್ರಕಾರ, ಅನುಮಾನಗಳು ಬಂದಾಗ ಪೊಲೀಸರಿಗೆ ದೂರು ಕೊಡ ಬೇಕಷ್ಟೇ ವಿನಾ ತಾವೇ ಕಾನೂನು ಪಾಲಕರಂತೆ ವ್ಯಕ್ತಿಗಳನ್ನು ಹಿಡಿದು ಥಳಿಸುವುದು, ಬೆಂಕಿ ಹಚ್ಚುವುದು, ಇವು ತೀವ್ರ ಸ್ವರೂಪದ ಅಪರಾಧಗಳು. ತಮ್ಮ ಧರ್ಮ ಸಂಸ್ಕೃತಿಗಳನ್ನು ಉಳಿಸುವುದಕ್ಕಾಗಿ ನಡೆಸುತ್ತಿರುವ ಹೋರಾಟವೆಂದೂ, ಗುಪ್ತವಾಗಿ ತಮಗೆ ಮಠಾಧಿಪತಿಗಳ, ಸ್ವಹಿತಾಸಕ್ತ ಶಕ್ತಿಗಳ ಬೆಂಬಲವಿದೆ ಎಂಬ ಅಹಂಕಾರ ದಲ್ಲಿಯೂ, ದಾದಾಗಿರಿ ಮಾಡುವುದನ್ನು ಯಾವ ನಾಗರಿಕ ಸಮಾಜವೂ ಒಪ್ಪುವುದಿಲ್ಲ. ಕಳೆದ ಒಂದೂವರೆ ವರ್ಷಗಳಿಂದ ನಡೆದುಬರುತ್ತಿರುವ – ಮತ್ತು ಬಿಜೆಪಿ ಸರಕಾರಕ್ಕೆ ಬಂದಮೇಲೆ ಮತ್ತೂ ಉಗ್ರ ಸ್ವರೂಪ ತಾಳುತ್ತಿರುವ – ಈ ಪ್ರವೃತ್ತಿಯನ್ನು ಸರಕಾರ ನಿಷ್ಠುರವಾಗಿ ಕೊನೆಗಾಣಿಸಬೇಕು. ವಿಷಯಗಳ ಸಮಗ್ರ ಹಾಗೂ ಸಮರ್ಪಕ ಗ್ರಹಿಕೆಯೊಂದಿಗೆ ಸಾರ್ವಜನಿಕರೂ ಕೂಡ ಸರಕಾರದ ಮೇಲೆ ಒತ್ತಡ ತರಬೇಕು.

ಆದರೆ ದುರದೃಷ್ಟದ ಸಂಗತಿಯೆಂದರೆ ಗೋಮಾಂಸವನ್ನು ಬಳಸುವ ಮಂದಿ ಕೂಡ – ಕ್ರಿಶ್ಚಿಯನ್ನರು, ದಲಿತರು, ಇತರರು – ಈ ಸಂದರ್ಭದಲ್ಲಿ ಬಾಯೇ ಬಿಡುವುದಿಲ್ಲ. ಹೀಗಾಗಿ ಈ ಇಡೀ ವಹಿವಾಟಿಗೆ ಒಂದು ಕೋಮಿನವರು ಮಾತ್ರ ಜವಾಬ್ದಾರರು ಎಂಬ ಭಾವನೆಗೆ ಪುಷ್ಟಿ ದೊರಕುತ್ತಿದೆ. ಸಂದಿಗ್ಧ, ವಿಷಮ ಪರಿಸ್ಥಿತಿ ಉಂಟಾದಾಗಲೆಲ್ಲ ಈ ಕೋಮಿನ ಜನ ಏಕಾಕಿಗಳಾಗಿ, ಅನಾಥರಾಗಿ ಉಳಿದು ಬಿಡುತ್ತಾರಷ್ಟೇ ಅಲ್ಲದೆ ಖೂಳರಾಗಿಯೂ ಕಂಡುಬಿಡುತ್ತಾರೆ.

ಮತ್ತೆ ನಮ್ಮ ರಾಜಕೀಯ ಪಕ್ಷಗಳು – ಕಾಂಗ್ರೆಸ್, ಜೆಡಿಎಸ್ ಮತ್ತು ವಾಮವಾದಿ ಪಕ್ಷಗಳೂ ಕೂಡ – ಕರಾವಳಿ ಪ್ರದೇಶದಲ್ಲಿ ಆಗುತ್ತಿರುವುದೆಲ್ಲ ಗೊತ್ತಿದ್ದರೂ ಸಂಪೂರ್ಣ ಮೌನ ತಾಳಿಬಿಟ್ಟಿದ್ದಾರೆ. ಒಂದು ಕೋಮಿನ – ಅದೂ ಬಹುಸಂಖ್ಯಾತ ಕೋಮಿನ- ಭಾವನಾತ್ಮಕ ಮತ್ತು ಧಾರ್ಮಿಕ ನಂಬಿಕೆಗಳಿಗೆ ಘಾತವಾಗಬಹುದು ಎಂಬ ಭಯದಿಂದ ಮೂಕರಾಗಿಬಿಟ್ಟಿದ್ದಾರೆ. ಆದ್ದರಿಂದಲೇ ಸ್ವಘೋಷಿತ ನ್ಯಾಯ, ಧರ್ಮ, ಸಂಸ್ಕೃತಿ ಪಾಲಕರು ಎಗ್ಗಿಲ್ಲದೆ ತಮ್ಮ ದೊಂಬಿ, ಹಲ್ಲೆ, ಹಿಂಸೆ, ಜೀವ ಮತ್ತು ಆಸ್ತಿ ನಾಶಗಳಲ್ಲಿ ಮುಂದುವರೆಯುತ್ತಿದ್ದಾರೆ.

ಸರಕಾರಕ್ಕೂ ಈ ಮುಜುಗರ ಆತಂಕಗಳು ಕಾಡಲಾರಂಭಿಸಿದರೆ ನಮ್ಮ ಭವಿಷ್ಯದಲ್ಲಿ ಸಮುದಾಯದ ಬದುಕು ನಿರಂತರ ಅಪಾಯದ, ವಿನಾಶದ ಅಂಚಿನಲ್ಲೇ ಸಾಗಬೇಕಾಗುತ್ತದೆ.

ಜಿ. ಕೆ. ಗೋವಿಂದರಾವ್
ನಂ. ೧೬೧, ೭ನೇ ಮಹಡಿ, ೩೬ನೇ ಕ್ರಾಸ್, ೭ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೮೨




# ಸೊಮಾಲಿಯ, ಸುಡಾನ್‌ಗಳನ್ನು ತುಂಡರಿಸಲು ಷಡ್ಯಂತ್ರ

ವಸಾಹತುಶಾಹಿಯುಗದಲ್ಲಿ ಸಾಮ್ರಾಜ್ಯಶಾಹಿ ದೇಶಗಳಿಂದ ಅತ್ಯಂತ ತೀವ್ರವಾದ ಶೋಷಣೆಗೆ ಗುರಿಯಾದ ದೇಶಗಳೆಂದರೆ ಆಫ್ರಿಕಾ ಖಂಡದ ದೇಶಗಳು. ಶತಮಾನಗಳ ಕಾಲ ಈ ದೇಶಗಳ ಜನರನ್ನು ಶೋಷಣೆ, ದಬ್ಬಾಳಿಕೆಗಳಿಗೆ ಈಡುಮಾಡಿ, ಸಂಪನ್ಮೂಲಗಳನ್ನು ದೋಚಿರುವ ಸಾಮ್ರಾಜ್ಯಶಾಹಿಗಳು ಈಗಲೂ ಅಲ್ಲಿನ ದೇಶಗಳ ಆರ್ಥಿಕವನ್ನು ತಮ್ಮ ಹಿಡಿತದಲ್ಲಿರಿಸಿಕೊಂಡಿದ್ದಾರೆ, ಜನರ ಜೀವನದೊಂದಿಗೆ ಚೆಲ್ಲಾಟವಾಡುತ್ತಿದ್ದಾರೆ. ಕಡು ಬಡತನ, ಆಗಾಗ್ಗೆ ಬಂದೊದಗುತ್ತಿರುವ ಪ್ರಕೃತಿವಿಕೋಪಗಳು, ಆಂತರಿಕ ಘರ್ಷಣೆ ಇವುಗಳಿಂದಾಗಿ ಜನಜೀವನ ದುಸ್ತರವಾಗಿದೆ. ಅಮೆರಿಕಾ ಹಾಗೂ ಇತರ ಐರೋಪ್ಯದೇಶಗಳು ಅರಾಜಕತೆಯ ಪರಿಸ್ಥಿತಿಯನ್ನು ತಮ್ಮ ಹಿತಾಸಕ್ತಿಗೆ ಬಳಸಿಕೊಳ್ಳುತ್ತಿವೆ. ಈ ಭೂಭಾಗದಲ್ಲಿ ಭಾರೀ ಅನಾಹುತ ಸಂಭವಿಸಿದಾಗ ಪತ್ರಿಕೆಗಳಲ್ಲಿ ಸುದ್ದಿಯಾಗುತ್ತವೆಯೇ ಹೊರತು, ಉಳಿದಂತೆ ನಡೆಯುವ ಘಟನೆಗಳು ವರದಿಯಾಗುವುದೇ ಇಲ್ಲ, ಎಲ್ಲ ಮುಚ್ಚಿಹೋಗಿರುತ್ತವೆ. ಸುಡಾನ್ ಮತ್ತು ಸೊಮಾಲಿಯಗಳಲ್ಲಿ ಸಂಭವಿಸುತ್ತಿರುವ ಘಟನೆಗಳು ಅದಕ್ಕೆ ಸಾಕ್ಷಿ. ಈ ದೇಶಗಳಲ್ಲಿ ಜರುಗುತ್ತಿರುವ ಘರ್ಷಣೆಗಳಲ್ಲಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮೂಗು ತೂರಿಸುತ್ತಿರುವ ಅಮೆರಿಕಾ ಅಲ್ಲಿ ನೆಲೆಕಂಡುಕೊಳ್ಳಲು ಅವಕಾಶಕ್ಕಾಗಿ ಕಾಯುತ್ತಿದೆ. ಕಾರ್ಪೊರೇಟ್‌ಗಳ ಹಿಡಿತದಲ್ಲಿರುವ ಮಾಧ್ಯಮಗಳು ಉದ್ದೇಶಪೂರ್ವಕವಾಗಿಯೇ ಇಲ್ಲಿನ ಬೆಳವಣಿಗೆಗಳನ್ನು ಕಡೆಗಣಿಸುತ್ತಿವೆ.

ಕಳೆದ ಒಂದೂವರೆ ದಶಕದಿಂದ ಅಂತರ್ಯುದ್ಧ, ಅರಾಜಕ ಪರಿಸ್ಥಿತಿಯಿಂದ ಜರ್ಜರಿತಗೊಂಡಿರುವ ಸೊಮಾಲಿಯ ಈಗ ಛಿದ್ರಗೊಳ್ಳುವ ಸ್ಥಿತಿಯಲ್ಲಿದೆ. ಆರು ತಿಂಗಳ ಹಿಂದೆ ಜನವರಿಯಲ್ಲಿ ಪರಸ್ಪರ ಘರ್ಷಣೆಯಲ್ಲಿ ತೊಡಗಿದ್ದ ಶಾಂತಿಸ್ಥಾಪನೆಪರ ಮತ್ತು ಭಯೋತ್ಪಾದನೆ ವಿರೋಧಿ ಮೈತ್ರಿಕೂಟ ಹಾಗೂ ಇಸ್ಲಾಮಿಕ್ ಕೋರ್ಟ್ ಯೂನಿಯನ್‌ಗಳ ಮಧ್ಯೆ ಶಾಂತಿ ಒಪ್ಪಂದವಾಗಿ, ಸಮ್ಮಿಶ್ರ ಸರಕಾರ ಸ್ಥಾಪಿಸಲು ನಿರ್ಧಾರವಾಯಿತು. ಆದರೆ ಅದು ಕಾರ್ಯಗತವಾಗದೆ ಈಗ ಮತ್ತೆ ಹಿಂಸಾಚಾರ ಭುಗಿಲೆದ್ದಿದೆ. ಶ್ರೀಮಂತ ಉದ್ಯಮಿಗಳು ಹಾಗೂ ಅಮೆರಿಕಾ ಬೆಂಬಲಿತ ಮೈತ್ರಿಕೂಟ ಮತ್ತು ಇಸ್ಲಾಮಿಕ್ ಕೋರ್ಟ್ ಯೂನಿಯನ್ ಅಮೆರಿಕಾದ ಪ್ರಚೋದನೆಯಿಂದ ಪರಸ್ಪರ ಘರ್ಷಣೆಯಲ್ಲಿ ತೊಡಗಿವೆ. ಎಲ್ಲೆಲ್ಲೂ ಭಯೋತ್ಪಾದನೆಯ ನೆರಳನ್ನೇ ಕಾಣುವ ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್ ೨೦೦೧ರಲ್ಲಿಯೇ ಸೊಮಾಲಿಯ ಅಲ್-ಖೈದಾ ಉಗ್ರಗಾಮಿಗಳಿಗೆ, ಇತರ ಇಸ್ಲಾಮಿಕ್ ಮೂಲಭೂತವಾದಿಗಳಿಗೆ ನೆಲೆಯಾಗಿದೆ ಎಂದು ಆರೋಪಿಸಿದ್ದರು. ಭಯೋತ್ಪಾದಕರನ್ನು ಸದೆಬಡಿಯುವ ಹೆಸರಿನಲ್ಲಿ ಸೊಮಾಲಿಯಾದ ವಿವಿಧ ಗುಂಪುಗಳಿಗೆ ರಹಸ್ಯವಾಗಿ ಹಣ ಹಾಗೂ ಆಯುಧಗಳನ್ನು ಅಮೆರಿಕಾ ಸರಬರಾಜುಮಾಡತೊಡಗಿತು. ವಿಶ್ವಸಂಸ್ಥೆಯು ಸೊಮಾಲಿಯಾದಲ್ಲಿ ಘರ್ಷಣೆಯಲ್ಲಿ ತೊಡಗಿರುವ ಗುಂಪುಗಳಿಗೆ ಆಯುಧ ಸರಬರಾಜು ಮಾಡುವುದನ್ನು ನಿಷೇಧಿಸಿದೆ ಎನ್ನುವುದನ್ನು ಗಮನಿಸಬೇಕು. ಸೊಮಾಲಿಯದಲ್ಲಿ ಪರಿಸ್ಥಿತಿ ಇಂದು ಸಂಪೂರ್ಣವಾಗಿ ಅರಾಜಕವಾಗಿದೆ. ಆಫ್ಘಾನಿಸ್ತಾನದಲ್ಲಿ ೧೯೯೦ರಲ್ಲಿ ಸೋವಿಯತ್ ಪಡೆಗಳ ನಿರ್ಗಮನದ ನಂತರ ಇದ್ದ ಪರಿಸ್ಥಿತಿಯನ್ನೇ ಇಲ್ಲಿ ಕಾಣಬಹುದು.

ತನ್ನ ಗೂಢಚರ್ಯೆ ಸಂಸ್ಥೆ ಸಿಐಎ ಮೂಲಕ ಸೊಮಾಲಿಯಾದಲ್ಲಿ ಘರ್ಷಣೆಗಳನ್ನು ಪ್ರಚೋದಿಸುತ್ತಿರುವ ಅಮೆರಿಕಾ ಇಲ್ಲಿ ನೆಲೆ ಸ್ಥಾಪಿಸಿಕೊಳ್ಳುವ ಹೆಬ್ಬಯಕೆ ಹೊಂದಿದೆಯಷ್ಟೇ ಅಲ್ಲದೆ, ಇಲ್ಲಿ ಲಭ್ಯವಿರುವ ತೈಲದ ಮೇಲೂ ಕಣ್ಣಿರಿಸಿದೆ. ೧೯೯೧ರ ವರೆಗೆ ಅಧಿಕಾರದಲ್ಲಿದ್ದ ಸಯಿದ್ ಬ್ಯಾರಿ ಆಡಳಿತ ಕಾಲದಲ್ಲಿಯೇ ಅಮೆರಿಕಾದ ತೈಲ ಕಂಪೆನಿಗಳು ತೈಲ ಪರಿಶೋಧನೆಗೆ ಸೊಮಾಲಿಯದಲ್ಲಿ ಕಂಟ್ರಾಕ್ಟ್ ಪಡೆದುಕೊಂಡಿದ್ದವು. ಅಂತರ್ಯುದ್ಧದ ಪರಿಸ್ಥಿತಿಯಿಂದಾಗಿ ಅವು ಕಾರ್ಯೋನ್ಮುಖವಾಗಲು ಅಡ್ಡಿಯಾಗಿವೆ. ತೈಲದಾಹ ಒಂದುಕಡೆಯಾದರೆ, ಪ್ರಪಂಚದ ಮೇಲೆ ಅಧಿನಾಯಕತ್ವ ಸ್ಥಾಪಿಸುವ ಮಹದಾಕಾಂಕ್ಷೆ ಹೊಂದಿರುವ ಅಮೆರಿಕಾದ ಆಡಳಿತಕ್ಕೆ ಸಮರವ್ಯೂಹಾತ್ಮಕ ದೃಷ್ಟಿಯಿಂದ ಪಶ್ಚಿಮ ಏಶಿಯ ಮತ್ತು ಆಫ್ರಿಕಾದ ನಡುವೆ ಇರುವ ಸೊಮಾಲಿಯ ಬಹುಮುಖ್ಯ ತಾಣ. ಅದರಿಂದಲೇ ಅದಕ್ಕೆ ಆಸಕ್ತಿ. ಆಂತರಿಕ ಸಂಘರ್ಷಗಳ ಅರಾಜಕ ಪರಿಸ್ಥಿತಿಯನ್ನು ಉಪಯೋಗಿಸಿಕೊಂಡು ದೇಶವನ್ನು ಛಿದ್ರಗೊಳಿಸಿ ನೆಲೆಯೂರಲು ಅಮೆರಿಕಾ ಸರಿಯಾದ ಸಮಯಕ್ಕಾಗಿ ಕಾಯುತ್ತಿದೆ.

ಇಂಥದೇ, ಆದರೆ ಸ್ವಲ್ಪ ಭಿನ್ನವಾದ ಪರಿಸ್ಥಿತಿ ಆಫ್ರಿಕಾದ ಇನ್ನೊಂದು ದೇಶ ಸುಡಾನ್‌ನಲ್ಲಿದೆ. ೧೯೫೬ರಲ್ಲಿ ಸಂಪೂರ್ಣ ಸ್ವಾತಂತ್ರ್ಯ ಪಡೆದುಕೊಂಡ ಸುಡಾನ್ ಇದುವರೆಗೆ ಸಂಪೂರ್ಣ ಶಾಂತಿಯನ್ನು ಪಡೆದುಕೊಂಡಿಲ್ಲ. ಮಿಲಿಟರಿ ಸರ್ವಾಧಿಕಾರದ ಅಟ್ಟಹಾಸ, ವಿವಿಧ ಗುಂಪುಗಳ ನಡುವೆ ನಿರಂತರವಾದ ಘರ್ಷಣೆಗಳು, ಪ್ರಕೃತಿ ವಿಕೋಪಗಳಿಂದ ಇಲ್ಲಿನ ಜನತೆಗೆ ವಿಮೋಚನೆಯೇ ಇಲ್ಲವಾಗಿದೆ. ಸಾಕಷ್ಟು ದೀರ್ಘಕಾಲದಿಂದ ಸುಡಾನ್ ಸರಕಾರ ಮತ್ತು ಸುಡಾನ್ ವಿಮೋಚನಾ ಸೇನೆ ಹಾಗೂ ವಿವಿಧ ತಂಡಗಳ ಮಧ್ಯೆ ಸುಮಾರು ಎರಡು ದಶಕಗಳಿಂದಲೂ ಘರ್ಷಣೆಗಳು ನಡೆಯುತ್ತಿವೆ. ದಾರ್ಫುರ್ ಪ್ರಾಂತದಲ್ಲಿ ಬಲವಾಗಿ ಬೇರೂರಿರುವ ಸುಡಾನ್ ವಿಮೋಚನಾ ಸೇನೆ ಪ್ರತ್ಯೇಕಗೊಂಡು ಸ್ವತಂತ್ರ ರಾಜ್ಯವಾಗುವ ಉದ್ದೇಶ ಹೊಂದಿದೆ. ಅಂತರ್ಯುದ್ಧದಲ್ಲಿ ಈವರೆಗೆ ೭೦,೦೦೦ಕ್ಕೂ ಹೆಚ್ಚು ಜನ ಹತರಾಗಿದ್ದು ನೂರಾರು ಸಾವಿರ ಜನ ನಿರ್ಗತಿಕರಾಗಿದ್ದಾರೆ ಎಂದು ಅಂದಾಜು ಮಾಡಲಾಗಿದೆ.

ನೈಜೀರಿಯಾದ ರಾಜಧಾನಿ ಅಬುಜಾದಲ್ಲಿ ಅಮೆರಿಕಾದ ಮಧ್ಯಪ್ರವೇಶದಿಂದ ಈಚೆಗೆ ಘರ್ಷಣೆಯಲ್ಲಿ ತೊಡಗಿರುವ ಪಕ್ಷಗಳ ಮಧ್ಯೆ ಶಾಂತಿ ಒಪ್ಪಂದವೊಂದು ಆಗಿದೆ. ದಾರ್ಫುರ್ ಶಾಂತಿ ಒಪ್ಪಂದ ಎಂದು ಕರೆಯಲಾಗಿರುವ ಈ ಶಾಂತಿ ಒಪ್ಪಂದದಲ್ಲಿ ಮುಖ್ಯವಾಗಿರುವ ಒಂದು ಅಂಶವೆಂದರೆ ಸುಡಾನ್ ಸರಕಾರದ ವಿರುದ್ಧ ಬಂಡಾಯವೆದ್ದಿರುವವರನ್ನು ನಿಶ್ಶಸ್ತ್ರಗೊಳಿಸುವುದು. ಯೂರೋಪಿಯನ್ ಯೂನಿಯನ್‌ಗೆ ಸೇರಿರುವ ರಾಷ್ಟ್ರಗಳು, ಅರಬ್ ಲೀಗ್ ಹಾಗೂ ಆಫ್ರಿಕನ್ ಯೂನಿಯನ್ ಈ ಒಪ್ಪಂದವನ್ನು ಸ್ವಾಗತಿಸಿದ್ದರೂ, ಅದು ಕಾರ್ಯಗತವಾಗುವುದರ ಬಗ್ಗೆ ಸಂದೇಹ ಹೊಂದಿವೆ.

ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್ ಈ ಒಪ್ಪಂದ ಜನರಿಗೆ ಹೊಸ ಜೀವನದ ಭರವಸೆ ನೀಡುವುದು ಎಂದು ಸ್ವಾಗತಿಸಿದ್ದಾರೆ. ಅಮೆರಿಕಾದ ನಿಜವಾದ ಉದ್ದೇಶ ಶಾಂತಿಸ್ಥಾಪನೆಗಿಂತ ತೈಲನಿಕ್ಷೇಪ ಹೊಂದಿರುವ ದಾರ್ಫುರ್ ಪ್ರಾಂತದ ಮೇಲೆ ಹಿಡಿತ ಸ್ಥಾಪಿಸುವುದು. ಒಪ್ಪಂದದ ಪ್ರಕಾರ, ಬಂಡಾಯವೆದ್ದಿರುವ ತಂಡಗಳಿಗೆ ಆಡಳಿತದಲ್ಲಿ ಪಾಲು ದೊರೆಯುವುದಾದರೂ, ಅವರ ಸೈನಿಕರಲ್ಲಿ ಬಹುಪಾಲನ್ನು ಸರಕಾರಿ ಸೇನೆಗೆ ತೆಗೆದು ಕೊಳ್ಳುವುದು, ಉಳಿದವರನ್ನು ನಿಶ್ಶಸ್ತ್ರಗೊಳಿಸುವುದು ಸುಲಭದ್ದೇನಲ್ಲ. ಹಾಗಾಗಿ ಒಪ್ಪಂದ ಪೂರ್ಣವಾಗಿ ಅನುಷ್ಠಾನಕ್ಕೆ ಬಾರದೆ ಮತ್ತೆ ಘರ್ಷಣೆಗಳು ಪ್ರಾರಂಭ ವಾಗಬಹುದಾದ ಸೂಚನೆಗಳೇ ಹೆಚ್ಚು. ಅಮೆರಿಕಾಗೆ ಬೇಕಾಗಿರುವುದೂ ಅದೇ : ದಾರ್ಫುರ್ ಒಪ್ಪಂದವನ್ನು ಕಾರ್ಯಗತ ಮಾಡುವ ಹೆಸರಿನಲ್ಲಿ ವಿಶ್ವಸಂಸ್ಥೆಯನ್ನು ಬಳಸಿಕೊಂಡು ನ್ಯಾಟೋ ಕೂಟದ ಸೇನೆಯನ್ನು ತಂದಿರಿಸುವುದಾಗಿದೆ. ಅಧ್ಯಕ್ಷ ಬುಷ್ ಮತ್ತು ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಕೋಫಿ ಅನ್ನಾನ್ ಈಗಾಗಲೇ ಸುಡಾನಿಗೆ ೨೦,೦೦೦ ಸೈನಿಕರನ್ನು ರವಾನಿಸಬೇಕೆಂದು ಹೇಳಿದ್ದಾರೆ. ಈ ಬೆಳವಣಿಗೆಗಳು ಸುಡಾನಿನ ನೆರೆಯ ರಾಷ್ಟ್ರಗಳನ್ನು ಗಾಬರಿಗೊಳಿಸಿವೆ. ಇದು ಒಂದು ಕಡೆಯಾದರೆ ಪಾಶ್ಚಾತ್ಯ ರಾಷ್ಟ್ರಗಳ ಅಂತಿಮ ಉದ್ದೇಶ ಸುಡಾನ್ ಅನ್ನು ತುಂಡರಿಸಿ ದಾರ್ಫುರ್‌ಅನ್ನು ಪ್ರತ್ಯೇಕಿಸಿ, ಅಲ್ಲಿನ ತೈಲ ನಿಕ್ಷೇಪವನ್ನು ಕಬಳಿಸುವುದಾಗಿದೆ. ಈ ತೈಲ ರಾಜಕಾರಣದಲ್ಲಿ ಬಲಿಯಾಗುವುದು ಮಾತ್ರ ಅಮಾಯಕ ಜನ.

ಸೀಯಾರ್ಕೆ
'ಚೌಬೀನ' ೮೪೯, ಬನಶಂಕರಿ ೩ನೇ ಹಂತ, ಕತ್ತಿಗುಪ್ಪೆ
ಬೆಂಗಳೂರು - ೫೬೦ ೦೮೫

## ಪರ-ವಿರೋಧ

ನನ್ನ ವಿರುದ್ಧ
ನಾನೇ ಮಾತಾಡುವಾಗ
ನನ್ನ ವೈರಿಗಳು
ನನ್ನ ಪರವಾಗಿರುತ್ತಾರೆ.

ಬಸವರಾಜ ವಕ್ಕುಂದ
೧೨/೫, ವಸ್ತ್ರದ ಬಿಲ್ಡಿಂಗ್, ಬಾಲಬಳಗ ಎದುರು
ಮಹಿಷಿ ರಸ್ತೆ, ಧಾರವಾಡ - ೭

# ದೇವರನ್ನು ನಂಬದೆ ಕೆಟ್ಟವರಿಲ್ಲ

■ ಶ್ರೀಮಿತ್ತೂರು

''ದೇವರನ್ನು ನಂಬದೆ ಕೆಟ್ಟವರಿಲ್ಲ''

ಏನಿದು ವಿಚಿತ್ರಾಂತ ನಿಮಗೆ ಅನಿಸಬಹುದು. ಆದರೆ ಅನುಭವದಿಂದ, ಕಂಡುಂಡ ಆಧಾರದಿಂದ ಈ ಮಾತನ್ನು ಹೇಳುತ್ತಿದ್ದೇನೆ. ಸ್ವಲ್ಪ ಸಹನೆ ಇರಲಿ. ಓದಿ, ಆಮೇಲೆ ಹೇಳಿ, ಮೇಲಿನ ಮಾತು ನಿಜವೇ, ಸುಳ್ಳೇ ಎಂಬುದನ್ನು. ಮತ್ತೆ ನೀವೇ ಹೇಳುವಿರಿ, ದೇವರನ್ನು ನಂಬಿ ಕೆಟ್ಟವರಿದ್ದಾರೆ, ಮೋಸಹೋದವರಿದ್ದಾರೆ, ಎಂದು.

ನಮ್ಮ ದೇಶ ಇಂದು ಆಹಾರ, ತಾಂತ್ರಿಕ ಮತ್ತು ಮಾಹಿತಿ ತಂತ್ರಜ್ಞಾನ ಅಂತೆಯೇ ವೈಜ್ಞಾನಿಕ ಕ್ಷೇತ್ರದಲ್ಲೂ ತುಂಬಾ ಪ್ರಗತಿಯನ್ನು ಸಾಧಿಸಿದೆ. ಹಾಗೆಯೇ ಮೂಢನಂಬಿಕೆ ಮತ್ತು ಅವೈಜ್ಞಾನಿಕ ಕ್ಷೇತ್ರಗಳಲ್ಲೂ ತುಂಬ ಪ್ರಗತಿಯನ್ನು ಸಾಧಿಸಿದೆ. ಉದಾಹರಣೆಗೆ, ಇಪ್ಪತ್ತನೇ ಶತಮಾನದ ಮಧ್ಯಭಾಗದವರೆಗೆ ವಸತಿಗೃಹ, ಅರಮನೆ, ಗೋಶಾಲೆ, ದೇವಸ್ಥಾನ ಮೊದಲಾದವುಗಳನ್ನು ಕಟ್ಟುವಾಗ ಜನರು ವಾಸ್ತುವಿಗೆ ಮೊರೆಹೋಗುತ್ತಿದ್ದರು. ಇಂದು ಸ್ನಾನಗೃಹ, ಮಲಗುವಕೋಣೆ, ಡೈನಿಂಗ್‌ಹಾಲ್ ಮತ್ತು ವಿಶ್ರಾಂತಿ ಕೊಠಡಿಗಳನ್ನು ಮಾತ್ರ ಪ್ರವೇಶಿಸಲಿಲ್ಲ, ಟಾಯಿಲೆಟ್‌ಗಳಿಗೂ ನುಗ್ಗಿಬಿಟ್ಟಿದೆ. ಬಹುಶಃ ಟಾಯಿಲೆಟ್ ವಾಸ್ತುವಿಗನುಸಾರ ಇಲ್ಲದಿದ್ದರೆ ಮಲಬದ್ಧತೆಯ ಪೀಡೆ ತಟ್ಟಬಹುದೆಂಬ ಭಯ ಇರಲೂಬಹುದೇನೋ! ಇಂದು ಇವುಗಳೆಲ್ಲವುಗಳ ರಚನೆ ವಾಸ್ತುಶಾಸ್ತ್ರಕ್ಕನುಸಾರವಾಗಿಯೇ ಆಗಬೇಕು. ಪರಿಣಾಮವಾಗಿ ಸದ್ಯ ಬೀದಿಬೀದಿಗಳಲ್ಲಿ, ಹೋಟೆಲುಗಳ ಕೋಣೆಗಳಲ್ಲಿ ವಾಸ್ತುಶಾಸ್ತ್ರಿಗಳು ಕವಡೆ ಚೀಲ ಬಿಚ್ಚಿಟ್ಟುಕೊಂಡು ಹದ್ದಿನ ಕಣ್ಣಿನಿಂದ ಗಿರಾಕಿಗಳಿಗಾಗಿ ಕಾಯುತ್ತಿರುವುದನ್ನು ಕಾಣಬಹುದು. ಪ್ರಾಯಃ ವಾಸ್ತು ಶಾಸ್ತ್ರಕ್ಕೆ, ಶಾಸ್ತ್ರಿಗಳಿಗೆ ಪ್ರೋತ್ಸಾಹ ಕೊಡುವುದಕ್ಕಾಗಿಯೇ ಕರ್ನಾಟಕ ಸರ್ಕಾರ ರಾಜ್ಯೋತ್ಸವದಂದು ಒಬ್ಬ ಪ್ರಸಿದ್ಧ ವಾಸ್ತುತಜ್ಞನಿಗೆ ಪ್ರಶಸ್ತಿ ಕೊಟ್ಟಿರಬೇಕು. ಈ ವಾಸ್ತುವೆಂಬ ಪೆಡಂಭೂತದ ದೆಸೆಯಿಂದ ನಗರಗಳಲ್ಲಿ ಅನೇಕರಿಗೆ ಇಕ್ಕಟ್ಟಾದ ಜಾಗದಲ್ಲಿ ಮನೆಕಟ್ಟಿ ಕುಳಿತುಕೊಳ್ಳುವುದೇ ಒಂದು ಸಮಸ್ಯೆಯಾಗಿದೆ. ಅನೇಕರು ಬಾಡಿಗೆಯ ಆಸೆಯಿಂದ ಸಾಲಸೋಲ ಮಾಡಿ ಕಟ್ಟಿದ ಮನೆಗಳನ್ನು ವಾಸ್ತುವಿಗೆ ಅನುಕೂಲವಾಗಿಲ್ಲವೆಂಬ ಕಾರಣದಿಂದ ಗಿರಾಕಿಗಳಿಗೆ ದಾಟಿಸುವುದು ಸಾಧ್ಯವಾಗದೆ ಕಷ್ಟನಷ್ಟಗಳಿಗೆ ಬಲಿಯಾಗಿದ್ದಾರೆ. ಅನೇಕ ಮಂತ್ರಿಗಳು, ಸರ್ಕಾರಿ ಅಧಿಕಾರಿಗಳು ವಾಸ್ತುಶಾಸ್ತ್ರಿಗಳ ಸಲಹೆಯಂತೆ ಆಫೀಸುಗಳ ದ್ವಾರವನ್ನು, ಪ್ರವೇಶದ ದಿಕ್ಕನ್ನು ತಾವು ವಾಸ ಮಾಡುವ ಸರ್ಕಾರಿ ಬಂಗಲೆಗಳನ್ನು ಸರ್ಕಾರದ ಖರ್ಚಿನಲ್ಲಿ ಮತ್ತೆ ಬೇಕಾದಂತೆ ಪರಿವರ್ತಿಸಿಕೊಂಡಿದ್ದಾರೆ, ಕೊಳ್ಳುತ್ತಾರೆ. ಇನ್ನೊಂದು ಕಡೆ ಸರ್ಕಾರ ಪಠ್ಯಕ್ರಮದಲ್ಲಿ ವಾಸ್ತು, ಜ್ಯೋತಿಷಗಳಿಗೆ ಅವಕಾಶವೇ ಇರಬಾರದೆಂದು ಸಾರಿದೆ.

ಚುನಾವಣೆ ಬಂತೆಂದರೆ ಖದೀಮ ರಾಜಕೀಯ ಪುಢಾರಿಗಳು ಬೆಳಿಗ್ಗೆ ಎದ್ದು ದೇವಸ್ಥಾನಗಳಿಗೆ ಸುತ್ತು ಬರುತ್ತಾರೆ. ಮಸೀದಿಗಳಿಗೆ ಹೋಗಿ ತಲೆಗೆ ಕರವಸ್ತ್ರಹಾಕಿ ತಲೆತಗ್ಗಿಸಿ ನಿಂತುಕೊಳ್ಳುತ್ತಾರೆ. ವಿಶೇಷ ಲಾಭ ಇಲ್ಲದಿರುವುದರಿಂದ ಚರ್ಚುಗಳ ಬಳಿಗೆ ಸುಳಿಯುವುದೇ ಇಲ್ಲ. ಚುನಾವಣೆ ಪ್ರಚಾರವನ್ನು ಮೊತ್ತಮೊದಲು ದೇವರಿಗೆ ಪೂಜೆ ಸಲ್ಲಿಸಿ, ಅರ್ಚಕರ ಆಶೀರ್ವಾದ ಪಡೆದು ಆರಂಭಿಸುತ್ತಾರೆ. ಗೆದ್ದುಬಂದಮೇಲೆ ಅರ್ಚಕರ ಹುದ್ದೆಗೇ ಬತ್ತಿ ಇಡಲು ಪ್ರಯತ್ನಿಸುತ್ತಾರೆ.

ನಮ್ಮಲ್ಲಿ ಅನೇಕ ಮಂತ್ರಿಗಳು ತಿಂಗಳಲ್ಲಿ ಹತ್ತುಸಲ ಪ್ರಸಿದ್ಧ ದೇವಸ್ಥಾನಗಳಿಗೆ, ಪವಿತ್ರಕ್ಷೇತ್ರಗಳಿಗೆ ಸರ್ಕಾರಿ ಖರ್ಚಿನಲ್ಲಿ ಭೇಟಿ ಇಟ್ಟು, ಮಡಿಬಟ್ಟೆ ಉಟ್ಟು, ಅರ್ಚಕರಿಗೆ ಅಡ್ಡಬಿದ್ದು ಧನ್ಯರಾಗುತ್ತಾರೆ. ಆಗಲಿ, ಸಂತೋಷ. ನಮ್ಮದೇನೂ ಆಕ್ಷೇಪವಿಲ್ಲ. ಇದೆಲ್ಲಾ ತೀರಾ ವೈಯಕ್ತಿಕ ವಿಚಾರಗಳು. ಬೇರೆಯವರಿಗೆ ಈ ಕುರಿತು ಟೀಕಿಸುವ ಅಧಿಕಾರವಿಲ್ಲ, ಸರಿಯೇ. ಆದರೆ ಇಂತಹ ವೈಯಕ್ತಿಕ ಕೆಲಸಗಳ ಸಲುವಾಗಿ ತೆರಿಗೆಯ ಹಣವನ್ನು ಖರ್ಚುಮಾಡುವುದು ಸರಿಯೇ ? ಪ್ರಜಾತಂತ್ರದಲ್ಲಿ ಇದಕ್ಕೆ ಅವಕಾಶವಿದೆಯೇ ?

ಅನೇಕ ಮಂತ್ರಿಗಳು ಹೊಸತಾಗಿ ಆಫೀಸಿನೊಳಗೆ ಪ್ರವೇಶಿಸಿ ಕುರ್ಚಿಯಲ್ಲಿ ಕುಳಿತುಕೊಳ್ಳುವ ಮೊದಲು ಪೂಜೆ ಪುನಸ್ಕಾರ ನಡೆಸುವುದನ್ನು ಕಂಡಿದ್ದೇವೆ. ಅದೇನು ಅವರ ಸ್ವಂತ ಕಾರ್ಯಾಲಯವೇ ? ಜೀವಮಾನ ಇಡೀ ಅಲ್ಲೇ ಇರುತ್ತಾರೆಯೇ ? ಅಧಿಕಾರಿಗಳಲ್ಲಿ ಇಂತಹ ಚಾಳಿ ಇಂದು ಎಷ್ಟರಮಟ್ಟಿಗೆ ಹೆಚ್ಚಿದೆ ಅಂದರೆ ಮತಗಟ್ಟೆಗಳಲ್ಲಿ ಮತದಾನಕ್ಕೆ ಮೊದಲು ಮತಪೆಟ್ಟಿಗೆಗೆ ಪೂಜೆ ಸಲ್ಲಿಸಿ ನಿರ್ವಿಘ್ನವಾಗಿ ಮತದಾನ ನಡೆಯಲಿ ಎಂದು ಪ್ರಾರ್ಥಿಸುತ್ತಾರೆ.

ಮೂರು ವರ್ಷಗಳ ಹಿಂದೆ ಕರ್ನಾಟಕದ ಮುಜರಾಯಿ ಇಲಾಖೆ ೩,೫೮೦ ದೇವಸ್ಥಾನಗಳಲ್ಲಿ ಮಳೆರಾಯನ ಅನುಗ್ರಹಕ್ಕಾಗಿ ರುದ್ರಾಭಿಷೇಕ ಮತ್ತು ಪರ್ಜನ್ಯ ಸ್ತುತಿ ನಡೆಸುವಂತೆ ಆದೇಶಿಸಿದ್ದನ್ನು ಅನೇಕರು ಇನ್ನೂ ಮರೆತಿರಲಾರರು. ಇನ್ನು ರಾಹುಕಾಲದಲ್ಲಿ ಒಬ್ಬ ಪೆದೆಯೂ ಆಫೀಸಿನೊಳಗೆ ಕಾಲಿಡನು.

ಕೋಟಿಕೋಟಿ ಖರ್ಚುಮಾಡಿ ದೇವರಿಗೆ ಚಿನ್ನದ, ವಜ್ರದ ಕಿರೀಟ, ಬೆಳ್ಳಿ ತೇರು, ಚಿನ್ನದ ಆಭರಣ ಅರ್ಪಿಸುವುದು, ತುಂಬ ಬೆಲೆಬಾಳುವ ರೇಶ್ಮೆಯ ಸೀರೆಗಳನ್ನು, ಶಾಲುಗಳನ್ನು ಹೋಮಕ್ಕೆ (ಅಗ್ನಿದೇವನಿಗೆ) ಅರ್ಪಿಸುವುದು ಹೊಸತೇನಲ್ಲ. ಉತ್ತರ ಭಾರತದಲ್ಲಿ, ಚಳಿಗಾಲದಲ್ಲಿ ಅನೇಕ ಬಡವರು ಹೊದಿಕೆಯ ಬಟ್ಟೆ ಇಲ್ಲದೆ ಸಾಯುತ್ತಿದ್ದಾರೆ. ಕೆಲವು ಕೋಟಿ ಖರ್ಚುಮಾಡಿ, ಅದೂ ಸರ್ಕಾರಿ ಅನುದಾನದೊಂದಿಗೆ, ಮೂರ್ತಿಗೆ ಅಭಿಷೇಕ ಮಾಡುತ್ತೇವೆ.

''ಇವುಗಳನ್ನೆಲ್ಲ ವಿರೋಧಿಸಬಾರದು, ತಡೆಯಬಾರದು. ಯಾಕೆಂದರೆ ಇವುಗಳು ನಮ್ಮ ಸಂಸ್ಕೃತಿಯ ಪ್ರತೀಕಗಳು'' ಎಂದು ವಾದಿಸುವವರು ನಮ್ಮಲ್ಲಿ ಬೇಕಾದಷ್ಟು ಮಂದಿ ಇದ್ದಾರೆ. ಅವರ ವಾದ ಸರಿ ಇರಬಹುದು. ಆದರೆ ಒಂದು ಹೊತ್ತಿನ ಊಟಕ್ಕೂ ಗತಿ ಇಲ್ಲದ ಬಡವರು ಇರುವ ನಮ್ಮ ದೇಶ ಇಂತಹ ಅನುತ್ಪಾದಕ ಖರ್ಚುಗಳಿಗೆ ಅರ್ಹವೇ ? ಇದನ್ನು ನಾವು ಯೋಚಿಸಬೇಕು. ಬಡವರೇ ನಮ್ಮ ದೇವರುಗಳಾಗಬೇಕು. ಹೆಣ ಸುಡಲೂ ಕಾಸಿಲ್ಲದ ಬಡವರು ನಮ್ಮ ದೇಶದಲ್ಲಿದ್ದಾರೆ.

ದೇವರು, ಪೂಜೆ, ಹೋಮ, ನೇಮ ಇತ್ಯಾದಿ ತೀರಾ ವೈಯಕ್ತಿಕವಾಗಿ ಇರಬೇಕು. ನಂಬುವವರಿಗೆ ಇಲ್ಲಿ ಭಕ್ತಿ ಮುಖ್ಯವಾಗಿರಬೇಕು. ಆಡಂಬರಕ್ಕೆ ಅವಕಾಶ ಇರಬಾರದು.

ಕೆಲವು ಪ್ರಸಿದ್ಧ ದೇವಸ್ಥಾನಗಳ, ಸ್ವಾಮಿಗಳ ಮತ್ತು ಗುರುಗಳ ವಾರ್ಷಿಕ ಆದಾಯ ಕೆಲವು ಕೋಟಿಗಳನ್ನು ಮೀರಿ ಇರುತ್ತದೆ. ಯಾರಿಗೇನು ಬಂತು ? ಕೆಲವು ಲಕ್ಷ ಖರ್ಚುಮಾಡಿ ಅನ್ನದಾನ, ಸೀರೆದಾನ ಮಾಡಿದರೆ ಸಾಕೆ ? ಆದಾಯ ತೆರಿಗೆ ಇಲಾಖೆಯ ಕಣ್ಣಿಗೆ ಮಣ್ಣೆರಚಲು ಕಾರ್ಖಾನೆಯ ಮುಂದೆ ದೇವಸ್ಥಾನ ಕಟ್ಟಿಸಿದಂತೆ!



ನಮ್ಮಲ್ಲಿಯೆ ಕೆಲವು ದೇವಸ್ಥಾನಗಳ ಆದಾಯದಿಂದ ಹತ್ತು ಸಾವಿರ ಪ್ರಾಥಮಿಕ ಶಾಲೆಗಳಿಗೆ ಉತ್ತಮ ಕಟ್ಟಡಗಳನ್ನು ಕಟ್ಟಿಸಬಹುದು – ಗುತ್ತಿಗೆದಾರರು ಹಣ ನುಂಗದಿದ್ದರೆ !

ಸರ್ಕಾರಕ್ಕಾಗಲೀ, ಜನರಿಗಾಗಲಿ ಎಲ್ಲಿದೆ ಅಂತಹ ಉದಾರಬುದ್ಧಿ ? ಇದ್ದರೂ ಮಧ್ಯವರ್ತಿಗಳೇ ತಿಂದು ತೇಗಿಬಿಡುತ್ತಾರೆ, ಬಿಹಾರದ ಒಬ್ಬ ಮಾಜಿ ಮುಖ್ಯಮಂತ್ರಿಯಂತೆ. ಖಜಾನೆಯ ಕೋಟ್ಯನುಕೋಟಿ ಹಣ ನುಂಗಿ ಜೀರ್ಣಿಸಿಕೊಂಡವನಾಗಿದ್ದರೂ ಇಂದು ಅವನಿಗಿರುವಷ್ಟು ಮಾನಮರ್ಯಾದೆ ಯಾರಿಗೆ ಇದೆ? ಭಾರತದಲ್ಲಿ ಮಾತ್ರವಲ್ಲ, ಪಾಕಿಸ್ತಾನದಲ್ಲೂ ಆತ ಅತ್ಯಂತ ಜನಪ್ರಿಯ. ತನ್ನ ಹರಿತವಾದ ನಾಲಗೆಯ ಬಲದಿಂದ ನಾಯಕರನ್ನೆಲ್ಲಾ ಬೇಕಾದಂತೆ ಕುಣಿಸಬಲ್ಲ.

ಇದು ನಮ್ಮ ದೇಶ. ದಾಸವರೇಣ್ಯರು 'ದೇವರನ್ನು ನಂಬಿ ಕೆಟ್ಟವರಿಲ್ಲ' ಅಂದರು. ನಿಜ ಹೇಳುವುದಾದರೆ ದೇವರನ್ನು ನಂಬಿ ಕೆಟ್ಟವರಿಗಿಂತ ದೇವರನ್ನು ನಂಬದೆ ಕೆಟ್ಟವರ ಸಂಖ್ಯೆ ಸೊನ್ನೆ. ಆದರೆ ಅಚಲ ಮನಸ್ಸಿನಿಂದ ಪ್ರತಿದಿನ ಸ್ವಲ್ಪಹೊತ್ತು ದೇವರು ಎಂಬ ಅಲೌಕಿಕ ವಸ್ತುವನ್ನು ಧ್ಯಾನಿಸಿ ತನ್ನನ್ನು ಅರ್ಪಿಸಿಕೊಂಡರೆ ನಂಬಿದವರಿಗೆ ಇಂದಿನ ಅಶಾಂತ ವಾತಾವರಣದಲ್ಲಿ ಮಾನಸಿಕ ನೆಮ್ಮದಿಯನ್ನು ಕಾಪಾಡಿಕೊಳ್ಳಲು ಸಹಾಯಕವಾಗಬಹುದು. ಈ ಒಂದು ಭೌತಿಕ ಲಾಭ ಅಲ್ಲಗಳೆಯುವಂತಿಲ್ಲ. ಉಳಿದುದೆಲ್ಲಾ ಖಂಡಿತ ಮಿಥ್ಯ, ಭ್ರಾಮಕ.

ಇನ್ನು ನಮ್ಮ ಜನರ ಮೂಢನಂಬಿಕೆಗಳ ಕುರಿತು ಮತ್ತೆ ಮತ್ತೆ ಹೇಳದಿರುವುದೇ ಒಳ್ಳೆಯದೆಂದು ತೋರುತ್ತದೆ. ಶತಕೋಟಿ ವರ್ಷ ಸಂದರೂ ಅನೇಕರ ಅಜ್ಞಾನವನ್ನು, ಅಂಧವಿಶ್ವಾಸವನ್ನು ಹೊಡೆದೋಡಿಸಲು ಸಾಧ್ಯವಾಗದು.

ಕೆಲವು ದಿನಗಳ ಹಿಂದೆ ಮೈಸೂರಿನ ಇಬ್ಬರು ಯುವ ಪ್ರೇಮಿಗಳು ಬೆಂಗಳೂರಿನ ಹತ್ತಿರ ರೈಲಿಗೆ ತಲೆಕೊಟ್ಟು ಆತ್ಮಹತ್ಯೆ ಮಾಡಿಕೊಂಡರು. ಕಾರಣ, ಅವರ ಮದುವೆಗೆ ಮನೆಯವರು ಎಷ್ಟು ಬೇಡಿಕೊಂಡರೂ ಒಪ್ಪಲಿಲ್ಲ. ಹಿಂಸೆ ಬೇರೆ. ರುಂಡ ಮುಂಡ ಬೇರೆ ಬೇರೆಯಾದ ಶವಗಳನ್ನು ಪೊಲೀಸರು ಆಸ್ಪತ್ರೆಯ ಶವಾಗಾರದಲ್ಲಿ ಕೊಂಡುಹೋಗಿ ಇಟ್ಟರು. ವಿಷಯ ತಿಳಿದ ಎರಡೂ ಕಡೆಯ ಪಾಲಕರು ಬಂದು ಬೇರೆಬೇರೆಯಾದ ರುಂಡ ಮುಂಡಗಳನ್ನು ಸೇರಿಸಿ ಅವರಿಗೆ ಅವರ ಶಾಸ್ತ್ರದಂತೆ ಮದುವೆ ಮಾಡಿದರು. ಸತ್ತವರ ಆತ್ಮಕ್ಕೆ ತೃಪ್ತಿಯಾಗಿ, ಅವರ ಪ್ರೇತಾತ್ಮ ತಮಗೆ ಮುಂದೆ ಪೀಡೆ ಕೊಡದಿರಲಿ ಎಂದಿರಬಹುದು. ಜೀವಂತ ಇದ್ದಾಗಲೇ ಸುಡುವ ನಾವು ಸತ್ತಮೇಲೆ ಶಾಂತಿಮಂತ್ರ ಪಠಿಸುತ್ತೇವೆ. ಕೊಡಗಟ್ಟಲೆ ಕಂಬನಿ ಸುರಿಸುತ್ತೇವೆ.

ಪಕ್ಕದ ಊರಿನ ಒಂದು ದಂಪತಿಗಳಿಗೆ ಐದು ಹೆಣ್ಣುಮಕ್ಕಳು. ಒಂದು ಗಂಡುಮಗುವಾದರೂ ಬೇಕೆಂಬ ಕೊನೆಯಿಲ್ಲದ ಆಸೆ ಪತ್ನಿಗೆ. ಜೋಯಿಸರ ಬಳಿಗೆ, ದೇವಸ್ಥಾನದ ಅರ್ಚಕರ ಬಳಿಗೆ ಹೋಗಿ ಬೇಡಿಕೊಂಡರು. ಅವರ ಸಲಹೆಯಂತೆ ಸಾವಿರ ಖರ್ಚು ಮಾಡಿ ಪ್ರಾಯಶ್ಚಿತ್ತ ಮಾಡಿಸಿಕೊಂಡರು. ಹೂಕಟ್ಟಿ ಹಾಕಿ ನೋಡಿದರು. ಬಿಳಿ ಹೂ ಬಂತು. ಗಂಡುಮಗು ಈ ಬಾರಿ ಹುಟ್ಟಿಯೇ ಹುಟ್ಟುತ್ತದೆ ಎಂಬ ಭರವಸೆ ಸಿಕ್ಕಿತು. ಕೊನೆಗೆ ಹುಟ್ಟಿದ್ದು ಆರನೆಯ ಹೆಣ್ಣುಮಗು. ದುಃಖ ತಡೆಯಲಾರದೆ ಗಂಡ ಆತ್ಮಹತ್ಯೆ ಮಾಡಿಕೊಂಡು ಬಡ ಪರಿವಾರವನ್ನು ನಡುನೀರಿನಲ್ಲಿ ಬಿಟ್ಟುಹೊರಟುಹೋದರು. ಇದೇನೂ ಸುಳ್ಳಲ್ಲ.

ಅವಿಭಾಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆಗರ್ಭ ಧನಿಕನೊಬ್ಬನಿಗೆ ಮಕ್ಕಳಿರಲಿಲ್ಲ. ಹರಕೆ ಹೇಳಿಕೊಂಡರು. ಗಂಡುಮಗುವೇ ಜನಿಸಿದರೆ ದೇವರಿಗೆ ಚಿನ್ನದ ತೊಟ್ಟಿಲನ್ನು ಸಮರ್ಪಿಸಿ, ಪ್ರಥಮ ಕೇಶಮುಂಡನವನ್ನೂ....ಲ್ಲೇ ಮಾಡಿಸುತ್ತೇವೆ ಅಂದರು. ದೇವರು ಕರುಣಿಸಿದ. ಹರಕೆಯಂತೆ ಚಿನ್ನದ ತೊಟ್ಟಿಲನ್ನು ಅರ್ಪಿಸಿ, ಕೇಶಮುಂಡನ ಮಾಡಿಸಿ ಕಾರಿನಲ್ಲಿ ಬರುತ್ತಿದ್ದಾಗ ದಾರಿಯಲ್ಲಿ ಕಾರಿನ ಬಾಗಿಲು ತಾನಾಗಿ ತೆರೆದುಕೊಂಡು, ಬದಿಯಲ್ಲಿ ಕುಳಿತುಕೊಂಡ ತಾಯಿಯ ಕೈಯಲ್ಲಿದ್ದ ಮಗು ಕೆಳಗೆ ಬಿದ್ದು ಸತ್ತೇಹೋಯಿತು.

ಹೀಗೆ ಪವಿತ್ರ ಕ್ಷೇತ್ರಗಳಿಗೆ, ಪ್ರಸಿದ್ಧ ದೇವಸ್ಥಾನಗಳಿಗೆ ಹರಕೆ ಸಲ್ಲಿಸುವುದಕ್ಕಾಗಿಯೋ, ಇಷ್ಟಾರ್ಥ ಸಿದ್ಧಿಗಾಗಿಯೋ ಹೋಗುವವರಲ್ಲಿ ವರ್ಷದಲ್ಲಿ ಅನೇಕರು ಅಪಘಾತಗಳಿಗೆ ಬಲಿಯಾಗಿ ಪ್ರಾಣ ಕಳೆದುಕೊಳ್ಳುತ್ತಾರೆ.

ನಂಬುವವರಿಗೆ ದೇವರನ್ನು ನಂಬಬೇಡಿ ಅನ್ನುವುದು ಉಚಿತವೆನಿಸದು. ಯಾಕೆಂದರೆ, ಒತ್ತಾಯದಿಂದ, ನಿರ್ಬಂಧದಿಂದ ಅವರ ಮೇಲೆ ನಮ್ಮ ಅಭಿಪ್ರಾಯವನ್ನು ಹೇರಿದರೆ ಅವರಲ್ಲಿ ಅನೇಕ ಮಾನಸಿಕ ತೊಂದರೆಗಳು ಉಂಟಾಗಬಹುದು. ನಂಬುವವರು ನಂಬಿಕೊಳ್ಳಲಿ. ಆದರೆ ನಮ್ಮನ್ನು ನಾವೇ ಮೊದಲು ನಂಬಿಕೊಳ್ಳಬೇಕು. ನಮ್ಮನ್ನು ನಾವೇ ಸೃಷ್ಟಿಸಿಕೊಳ್ಳಬೇಕು. ನಮಗೆ ನಾವೇ ದೇವರಾಗಬೇಕು. ನಮ್ಮ ಆಗುಹೋಗುಗಳಿಗೆ ನಾವೇ ಬ್ರಹ್ಮರಾಗಿ ಜೀವನವನ್ನು ರೂಪಿಸಿಕೊಳ್ಳಬೇಕು. ಈ ಸಿದ್ಧಾಂತ ಪ್ರತಿಯೊಬ್ಬ ವ್ಯಕ್ತಿಗೂ ಅನ್ವಯಿಸಬೇಕು. ಆಗ ವ್ಯಕ್ತಿಗೆ ಮಾತ್ರವಲ್ಲ, ಇಡೀ ಸಮಾಜಕ್ಕೆ, ತನ್ಮೂಲಕ ಇಡೀ ದೇಶಕ್ಕೆ ಒಳ್ಳೆಯದಾಗಲಿರದು. ದೇವರನ್ನೇ ನಂಬಿ ಕೈಕಟ್ಟಿ ಕುಳಿತುಕೊಳ್ಳುವುದು ಆತ್ಮಘಾತುಕ ಕೆಲಸವೇ ಸರಿ.

ಮೂಢನಂಬಿಕೆಗಳಲ್ಲಿ ಅತ್ಯಂತ ಭಯಾನಕವಾದುದು ನರಬಲಿ. ಇಷ್ಟಾರ್ಥಸಿದ್ಧಿಗಾಗಿ, ಅಥವಾ ಹೂತಿಟ್ಟ ನಿಧಿಗಾಗಿ ಹುಡುಗಿಯರನ್ನು ಕೆಂಪು ಹೂಗಳಿಂದ ಅಲಂಕರಿಸಿ, ಸರ್ವಾಂಗ ಕುಂಕುಮ ಬಳಿದು, ಕಾಳಿ ದೇವತೆಯ ಮುಂದೆ ನಿಲ್ಲಿಸಿ ತಲೆ ಕಡಿಯುವುದು. ಸಾವಿರಾರು ಕೋಳಿ, ಕುರಿ, ಮೇಕೆ, ಮತ್ತು ಕೋಣಗಳನ್ನು ಹೇಗೂ ಬಲಿಕೊಡುತ್ತಾರೆ. ಎಷ್ಟಾದರೂ ಪ್ರಾಣಿಗಳಲ್ಲವೇ ! ಅವುಗಳ ಪ್ರಾಣಕ್ಕೆ ಎಲ್ಲಿಂದ ಬೆಲೆ ಬರಬೇಕು ? ಗಟ್ಟದ ಮೇಲೆ ಒಂದು ನಡೆ, ಒಂದು ವಿಶಿಷ್ಟ ಹಬ್ಬದಂದು ಕಾಡಿನಿಂದ ನರಿಯನ್ನು ಹಿಡಿದುತಂದು ಮರಕ್ಕೆ ತಲೆಕೆಳಗೆ ಮಾಡಿ ಕಟ್ಟಿ, ಪೂಜಿಸಿ ಕುಲದೇವತೆಗೆ ಬಲಿಕೊಡುತ್ತಾರೆ. ನಮಗೆ ತಿಳಿಯದ ಇನ್ನೆಷ್ಟು ಇಂತಹ ಅಮಾನುಷ ಬಲಿ ಪದ್ಧತಿಗಳಿವೆಯೋ ! ಭಕ್ತರ ದುರದೃಷ್ಟದಿಂದ ನರಿಗಳ ಸಂತತಿಯೇ ನಾಶವಾಗುತ್ತಾ ಇದೆ, ಇಂದು.

ಇನ್ನು ಕುಜದೋಷ ಇತ್ಯಾದಿ ಕಾರಣಗಳಿಂದ ಹುಡುಗಿಯರನ್ನು ಮದುವೆಯಾಗಲು ಹುಡುಗರು ಮುಂದೆಬಾರದೆ ಅನೇಕ ಯುವತಿಯರ ಆಮರಣ ಕಣ್ಣೀರ ಬಾಳನ್ನು ನಾವು ನೋಡುತ್ತಾ ಇದ್ದರೂ ನಮ್ಮ ಹೃದಯ ಮೃದುವಾಗುವುದೇ ಇಲ್ಲ. ಮದುವೆಯಾದರೆ ವರದಕ್ಷಿಣೆಗಾಗಿ ಹೇಗೂ ನಾವು ಅವರನ್ನು ದಿನಾ ಸುಡುತ್ತಿದ್ದೇವೆ. ಈ ವಿಚಾರದಲ್ಲಿ ಬಡವರು, ಧನಿಕರು, ಶಿಕ್ಷಿತರು – ಎಲ್ಲರೂ ಒಂದೇ ತೂಕದವರು. ಸಾಲದುದಕ್ಕೆ ಈಗಿನ ದಿನಗಳಲ್ಲಿ ದುಷ್ಟರ ವಿಕೃತಕಾಮ ತೃಪ್ತಿಗಾಗಿ ಲೆಕ್ಕವಿಲ್ಲದಷ್ಟು ಯುವತಿಯರು ಬಲಿಯಾಗುತ್ತಿದ್ದಾರೆ. ಆಫೀಸುಗಳಿಗೆ, ಕಾರ್ಖಾನೆಗಳಿಗೆ ಹೋಗಲು ಎಷ್ಟೋ ಹೆಂಗಸರು ಹಿಂಜರಿಯುತ್ತಿದ್ದಾರೆ.

ಮದುವೆಯಾಗದ ಯುವತಿಯರಿಗೆ ಇನ್ನೊಂದು ಶಾಪವಾದುದು ಜಾತಕ. ಈ ಕುರಿತು ಪುಟಗಟ್ಟಲೆ ಬರೆಯಬಹುದು. ಉತ್ತಮವಾದ ಜಾತಕ, ಯೋಗ್ಯಸಂಘಟನೆ ಎಂದು ಮದುವೆಯಾಗಿ, ವರ ಅಕಾಲ ಮರಣಕ್ಕೆ ಬಲಿಯಾದ. ಜಾತಕ ನೋಡದೆ, ಅಥವಾ ಕೆಟ್ಟ ಜಾತಕವೆಂದು ಗೊತ್ತಿದ್ದೂ ಮದುವೆಯಾಗಿ ಇಂದಿಗೂ ಸುಖವಾಗಿ ಬಾಳುತ್ತಿರುವವರನ್ನು ಕಾಣಬಹುದು. ಬೇಕಾದಷ್ಟು ಉದಾಹರಣೆಗಳನ್ನು ಕೊಡಬಹುದು. ಆದರೂ ನಮ್ಮ ಮನಸ್ಸು ಪರಿವರ್ತನೆಯಾಗುವುದೇ ಇಲ್ಲ. ಜೀವನ ಎಳ್ಳಷ್ಟೂ ಪ್ರಗತಿಯತ್ತ ಸಾಗುತ್ತಿಲ್ಲ. ಜೋಯಿಸರ ಜೀವನ ಮಾತ್ರ ಬಂಗಾರವಾಗುತ್ತಾ ಇರುತ್ತದೆ.

ಮೂಢನಂಬಿಕೆ ಎಂಬ ಪಿಡುಗು ಬರೇ ಹಿಂದೂ ಸಮಾಜದಲ್ಲಿ ಮಾತ್ರವಲ್ಲ, ಎಲ್ಲಾ ಮತದವರಲ್ಲೂ, ಸಮಾಜದವರಲ್ಲೂ ಇದ್ದೇ ಇದೆ. ಇದಕ್ಕೆ ಉದಾಹರಣೆಯಾಗಿ, 'ಅಕ್ಷಯ ತೃತೀಯಾ'ವನ್ನೇ ತೆಗೆದುಕೊಳ್ಳೋಣ. ಅಂದು ಜಾತಿ ಮತ ಪಂಥ ಭೇದವಿಲ್ಲದೆ ಹೆಂಗಸರು ಆಭರಣ ಖರೀದಿಗಾಗಿ ಚಿನ್ನದ ಅಂಗಡಿಗಳ ಮುಂದೆ 'ಕ್ಯೂ'ನಲ್ಲಿ ನಿಂತು ಕೊಂಡಿರುವುದನ್ನು ಕಾಣಬಹುದು. ಮದುವೆಗೂ ಅದು ಅತ್ಯಂತ ಪ್ರಶಸ್ತವಾದ ದಿನವಂತೆ. ಬಹುಶಃ ಅಂದು ಮದುವೆಯಾದರೆ ಪತಿಪತ್ನಿ ಆಚಂದ್ರಾರ್ಕ ಅಕ್ಷಯರಾಗಿಯೇ ಇರುತ್ತಾರೋ, ಏನೋ !

ಸಾಕ್ಷರತೆ ಹೆಚ್ಚಿದಂತೆ ಮೂಢನಂಬಿಕೆ ಕಡಿಮೆಯಾಗುವ ಬದಲು ಹೆಚ್ಚುತ್ತಲೇ ಇದೆ. ಇದರ ಲಾಭವನ್ನು ಠಕ್ಕು ಸಂನ್ಯಾಸಿಗಳು, ಸಾಧುಗಳು ಮತ್ತು ಮತಪ್ರಚಾರಕರು ಪಡೆಯುತ್ತಿದ್ದಾರೆ. ಅನೇಕರು ಅವರ ವಂಚನೆಯ ಜೀವನದ ಬಗ್ಗೆ ಬೆಳಕು ಚೆಲ್ಲಿದರೂ ಜನರು ಅವರನ್ನು ಆರಾಧಿಸುತ್ತಲೇ ಇರುತ್ತಾರೆ. ಇದಕ್ಕೆ ಮುಖ್ಯಕಾರಣ ಪ್ರಚಾರ. ವರದಾನವಾಗಿ ಬಂದ ಹರಿತವಾದ ನಾಲಿಗೆ. ಕಳೆದ ತಿಂಗಳು ಅಮೆರಿಕಾದ ಒಂದು ನ್ಯಾಯಾಲಯ ಪ್ರಸಿದ್ಧವಾದ ಒಂದು ದೇವಾಲಯದ ಅಧಿಕಾರಿಗಳಿಗೆ ಇಪ್ಪತ್ನಾಲ್ಕು ಸಾವಿರ ಡಾಲರಿನ ದಂಡ ವಿಧಿಸಿತು. ಕಾರಣ ಅಂತಃಪುರದಲ್ಲಿ ನಡೆದ ಲೈಂಗಿಕಾಪರಾಧ. ಇತ್ತೀಚೆಗೆ ಒಂದು ಧರ್ಮದ ಗುರುಗಳು ಚಿಕ್ಕವಯಸ್ಸಿನ, ಜೀವನ ಅಂದರೆ ಏನೆಂದು ಇನ್ನೂ ಅರಿಯದ ಬಾಲಕರ ತಲೆ ಬೋಳಿಸಿ, ಕಾವಿಬಟ್ಟೆ ಉಡಿಸಿ, ಸಾಲಾಗಿ ಕುಳ್ಳಿರಿಸಿ ದೀಕ್ಷೆಕೊಡುವುದನ್ನು ಟಿ.ವಿ.ಯಲ್ಲಿ ನೋಡಿದೆ. ಪರಿಣಾಮವನ್ನು ನೀವೇ ಊಹಿಸಿಕೊಳ್ಳಿ. ಅದು ಬಯಲಾಗುವುದಿಲ್ಲ ಅಷ್ಟೆ! ಹಸಿವು, ನಿದ್ರಾ, ಭಯ, ಮೈಥುನ ಪ್ರಾಣಿಮಾತ್ರಕ್ಕೆ ಸಹಜವಾದುವು. ಅದರಲ್ಲೂ ಮೈಥುನ ಕೇಳಬೇಡಿ.

ಇನ್ನೊಂದು ಪಂಥದವರು ಇದೇ ರೀತಿ ಹುಡುಗಿಯರಿಗೆ ಸಂನ್ಯಾಸದೀಕ್ಷೆ ಕೊಡುತ್ತಾರೆ. ಎಲ್ಲದರ ಒಟ್ಟು ಪರಿಣಾಮ ಜೀವನದಲ್ಲಿ ಅಶಾಂತಿ, ಕ್ಷೋಭೆ – ಒಳಗಿನ ಗುಟ್ಟು ಶಿವನೇ ಬಲ್ಲ!

ಬೇರೆಯವರಿಗೆ ಕೇಡು ಬಗೆಯದ, ದುಡಿಮೆಯ, ನಿರ್ವಂಚನೆಯ ಮತ್ತು ತನ್ನ ಸಾಮರ್ಥ್ಯದ ಮೇಲೆ ನಂಬಿಕೆ ಉಳ್ಳ ಜನರೇ ದೇಶದ ಸಂಪತ್ತಾದರೆ ನಾವು ಸುಖ ಸಮೃದ್ಧಿಯನ್ನು ಕಾಣಬಹುದು. ಜಾತಿ, ಮತ, ಪಂಥ, ದೇವರುಗಳು ಮನೆಯೊಳಗೇ ಇದ್ದು ಬೀದಿಗೆ ಬಾರದಂತೆ ಎಲ್ಲರೂ ನೋಡಿಕೊಂಡರೆ ಎಲ್ಲಾ ಬಗೆಯ ಸಂಘರ್ಷಗಳಿಗೆ, ಅಪ್ರಿಯ ಘಟನೆಗಳಿಗೆ ಪೂರ್ಣ ವಿರಾಮ ದೊರಕಿ ದೇಶದಲ್ಲಿ ಶಾಂತಿ ನೆಲೆಸೀತು. ಇಂದು ನಮ್ಮ ದೇಶದ ಸ್ಥಿತಿ, ಯಾರದ್ದೋ ಮದುವೆಯಲಿ ಉಂಡವನೆ ಜಾಣ ಎಂಬಂತಿದೆ. ಇದು ತೊಲಗಬೇಕು.

ಎಂ. ವಿ. ಭಟ್
ಮೇದರಹಳ್ಳಿ, ಚಿಕ್ಕಬಾಣಾವರ, ಬೆಂಗಳೂರು - ೫೬೦ ೦೯೦

"ಹ್ಯಾಪಿ ಬರ್ತ್‌ಡೇ ಟೂ ಯೂ
ಹ್ಯಾಪಿ ಬರ್ತ್‌ಡೇ ಟೂ ಯೂ
ಹ್ಯಾಪಿ ಬರ್ತ್‌ಡೇ ಟೂ ಯೂ
ಮೈ ಡಿಯರ್ ಗಂಡಾSSS !

ಹ್ಯಾಪಿ ಬರ್ತ್‌ಡೇ ಟೂ ಯೂ !... ತಗೊಳ್ಳಿ ನಿಮ್ಗೆ ಇಷ್ಟವಾದ ಧಾರವಾಡ ಪೇಡಾ. ಎಲ್ಲಿ ಬಾಯಿ ಆ ಅನ್ನಿ" ಎನ್ನುತ್ತ ನಾನು ಅವತಾರವೆತ್ತಿದ ದಿನದಂದು ನನ್ನ ಶ್ರೀಮತಿ ಶುಭ ಹಾರೈಸುತ್ತ ಬಾಯಿಗಿಟ್ಟಳು. ಮರುಕ್ಷಣದಲ್ಲಿ, "ಹೌದೂ... ಇವತ್ತಿಗೆ ನಿಮ್ಗೆ ಎಷ್ಟು ತುಂಬಿತು ?" ಎಂದು ಪ್ರಶ್ನಿಸಿದಳು. ಅಲ್ಲೇ ಆದದ್ದು ಎಡವಟ್ಟು. ಬಾಯಿಬಿಟ್ಟರೆ ಎಂಥ ರಾಜಕಾರಣಿಗಳನ್ನೂ ಮೀರಿಸುವಂತೆ ಸುಳ್ಳು ಹೇಳುವ ನಾನು ಅಂದು ಕಾಂತಾ ಪೇಡೆಯ ಸಮ್ಮಿತಕ್ಕೆ ಸೋತು, "ಜಸ್ಟ್ ಫಾರ್ಟಿ" ಎಂದು ಸತ್ಯವನ್ನೇ ಹೇಳಿದೆ.

ಕೂಡಲೇ ಅವಳು ಹಾವು ತುಳಿದವರಂತೆ, "ವ್ಹಾಟ್ ! ನೋ !... ನೋ !... ನೋ !..." ಎಂದು ಚೀರಿದಳು. ಅಲ್ಲದೆ ನನ್ನ ಬಾಯಲ್ಲಿದ್ದ ಪೇಡಾವನ್ನೂ ಹೊರಗೆಳೆದಳು. "ಏ... ಏನಾಯ್ತೇ ನಿಂಗೆ ? ಒಂದೇ ಸಾರಿ ಹಳೇ ಕನ್ನಡ ಸಿನಿಮಾದ ಹೀರೋಯಿನ್‌ನ ಹಾಗೆ ನೋ ನೋ ನೋ ಅಂತ ಕಿರುಚ್ತಾ ಇದ್ದೀಯಲ್ಲಾ? ಬಾಯಿಗೆ ಬಂದ ಪೇಡ ಜಠರಾಕ್ಕೆ ಇಳಿಯದಾಯ್ತೆ?SS" ಎಂದೊರಲಿದೆ.

# ಬೊಜ್ಜು ನಿವಾರಣಾ ಉಪಾಖ್ಯಾನ



ಪಿ. ಬಿ. ಪ್ರಸನ್ನ

"ಇವತ್ತಿಂದ ನಿಮ್ಗೆ ಸ್ವೀಟ್ ನೋ, ಸಾಲ್ಟ್ ನೋ, ಆಯಿಲ್ ನೋ. ನಿಮ್ಗೆ ಗೊತ್ತಾ, ಈಗೆಲ್ಲಾ ನಲ್ವತ್ತಕ್ಕೇ ಸ್ಟ್ರಿಕ್ಟಾಗಿ ಡಯಟ್ ಮಾಡ್ಬೇಕು."

"ಅಲ್ವೇ ನಂಗೇನಾಗಿದೆ ಅಂತ ಈ ರೀತಿ ಗಾಬರಿ ಬೀಳ್ತೀಯಾ ? ಗುಂಡುಕಲ್ಲಿನ ಹಾಗೆ ಗಟ್ಟಿಯಾಗೇ ಇದ್ದೇನೆ ಮಾರಾಯ್ತಿ"

"ನಿಮ್ಗೆ ಗೊತ್ತಿಲ್ಲ... ನಮ್ಮ ಲೇಡೀಸ್ ಕ್ಲಬ್‌ನ ಸೆಕ್ರೆಟರಿ ರೀಟಾ ಇದ್ದಾಳಲ್ವಾ ? ಅವ್ಳ ಗಂಡನಿಗೆ ನಲ್ವತ್ತೂರಕ್ಕೇ ಅಂತೆ ಮೊದಲಸಾರಿ ಹಾರ್ಟ್ ಅಟ್ಯಾಕ್ ಆದದ್ದು... ಪಕ್ಕದ್ಮನೇ ಗೌರಕ್ಕನ ಅಳಿಯನಿಗೆ ನಲ್ವತ್ತೆರಡಕ್ಕೇ ಶುಗರ್ ಇದ್ದದ್ದೂಂತ ಗೊತ್ತಾಯ್ತಂತೆ... ಅದಕ್ಕೇ ನಮ್ಮ ಕ್ಲಬ್ಬಲ್ಲಿರೋ ಮೆಂಬರ್ಸೆಲ್ಲಾ ಡಿಸೈಡ್ ಮಾಡಿದ್ದೀವಿ. ನಂ ನಂ ಗಂಡಂದಿರನ್ನು ನಲ್ವತ್ತಕ್ಕೆ ಬಂದ ತಕ್ಷಣ ಕಂಟ್ರೋಲಲ್ಲಿ ಇಡ್ಬೇಕು ಅಂತ."

"ಅಲ್ವೇ... ಅವ್ರ ಗಂಡಂದ್ರು ಹಾಗಾಗಿ ಗೊಟಕ್ ಅಂದ್ರೇನೆ ?"

"ಥೂ... ಬಿಡ್ತು ಅನ್ನಿ ಅಮಂಗಲ, ಅವ್ರಿಗೇನೂ ಆಗಿಲ್ಲ. ಆದ್ರೆ ಆ ರೀತಿ ಯಾಕೆ ಆಯ್ತೂಂತ ಡಾಕ್ಟ್ರು ಹೇಳಿದ್ರಂತೆ. ದೇಹದಲ್ಲಿ ಕೊಬ್ಬಿನ ಅಂಶ ಜಾಸ್ತಿ ಇತ್ತು. ನೀವು ನಿಮ್ಮ ಗಂಡಂದಿರ ಫುಡ್ ಹ್ಯಾಬಿಟ್ಟನ್ನು ಕಂಟ್ರೋಲ್ ಮಾಡ್ಲಿಲ್ಲಾಂತ ಹೇಳಿದ್ರಂತೆ. ಆವತ್ತಿಂದ ಎಲ್ರೂ ಕಂಟ್ರೋಲಿಗೆ ತಕೊಂಡಿದ್ದಾರೆ. ಹಾಗಾಗಿ ನಾನೂ ನಿಮ್ಮ ಆಹಾರಾನ ಕಂಟ್ರೋಲ್ ಮಾಡ್ತೀನಿ. ಈಗ ನಡೀರಿ ಡಾಕ್ಟ್ರತ್ರ."

"ಯಾಕೆ !?"

"ಬಿ.ಪಿ., ಶುಗರ್, ಕೊಲೆಸ್ಟ್ರಾಲ್ ಎಲ್ಲ ಚೆಕ್ ಮಾಡಿಸ್ಬೇಕು. ಸುಮ್ನೆ ನನ್ನ ಹಿಂದೆ ಬನ್ನಿ" ಎಂದವಳೆ ಹೆಂಡತಿ ಮೇಕಪ್ಪಿಗೆ ಕೂತೇ ಬಿಟ್ಟಳು.

ನಲ್ವತ್ತಾದ ತಪ್ಪಿಗೆ, ಸತ್ಯ ಹೇಳಿದ ಪಾಪಕ್ಕೆ ಪ್ರಾಯಶ್ಚಿತ್ತವೋ ಎನ್ನುವಂತೆ ಯಮರಾಜ ಸಹೋದರ ನಿದ್ದಲ್ಲಿಗೆ ಹೊರಟೆ. ಡಾಕ್ಟರ ಹೆಸರು, ಬೋರ್ಡು ಕಂಡೇ ಗಾಬರಿಯಾಯಿತು. 'ಡಾ|| ಬೊಜ್ಜೇಶ, ಬೊಜ್ಜು ನಿವಾರಣಾ ತಜ್ಞರು' ಎಂದಿತ್ತು. ಒಳಗೆ ಹೋಗಿ ನೋಡಿದಾಗ ನಾನು ಮೂರ್ಛೆ ಬೀಳುವುದೊಂದೇ ಬಾಕಿ. ತಾನು ಕುಳಿತ ಕುರ್ಚಿಯಿಂದ ಬೆಳೆದಿದ್ದ ವೈದ್ಯನ ಉದರ ಮುಂದಿನ ಮೇಜಿನ ಮೇಲೆ ಅಲಂಕರಿಸಿತ್ತು! ಒಂದು ಕ್ವಿಂಟಾಲು ತೂಗಬಹುದಾದ ಬೊಜ್ಜೇಶ ಪ್ಲೇಟಿನಲ್ಲಿ ಒಂದಿಷ್ಟು ಕುರುಕಲು ತಿಂಡಿಯನ್ನಿಟ್ಟು ಕೊಂಡು ಮೆಲ್ಲುತ್ತಿದ್ದ. ನಮ್ಮನ್ನು ನೋಡಿದ ತಕ್ಷಣ "ಹ್ಹೆ... ಹ್ಹೆ... ಹ್ಹೆ..." ಎಂದು ಅಪರಾಧೀ ಭಾವದ ನಗೆ ನಕ್ಕ. ನನ್ನ ಹೆಂಡತಿ ನನ್ನ ಎಲ್ಲ ಪ್ರವರವನ್ನು ಹೇಳಿದಳು.

ಎಲ್ಲ ವಿವರವನ್ನೂ ಕೇಳಿದ ಡಾ|| ಬೊಜ್ಜೇಶ, "ನೋಡಿ ಇವ್ರೇ... ಯೂ ಆರ್ ವೆರಿ ಲಕ್ಕೀ... ನಿಮ್ಮ ವೈಫ್ ನಿಮ್ಮ ಬಗ್ಗೆ ಎಷ್ಟು ಕೇರ್ ತಗೊಳ್ತಿದ್ದಾರೆ. ಷೀ ಈಸ್ ಕ್ಲೆವರ್" ಎನ್ನುತ್ತ ಅವಳತ್ತ ನೋಡಿದ. ಅವಳ ಬಾಯಿ ಕಿವಿಯವರೆಗೆ ಹೋಗಿತ್ತು. ನಾನು, "ಎಲಾ ನನ್ನ ಮಗನೆ, ನನ್ನ ಹೆಂಡ್ತಿಗೇ ಲೈನ್ ಹೊಡೀತೀಯಾ ?" ಅಂತ ಅಂದ್ಕೊಂಡೆ ! ಸಿಟ್ಟು ಬಂತು. "ಸರಿ... ಸರಿ... ನಿಮ್ಮ ಸಜೆಶನ್ ಏನು ಹೇಳ್ಬೇಕೋ ಹೇಳಿ... ನಂಗೆ ಟೈಮಿಲ್ಲ" ಅಂದೆ ಸಿಡುಕಿನಿಂದ.

"ನೋಡಿ ಮೇಡಂ... ಫಾರ್ಟಿ ಆದ್ಮೇಲೆ ಬರೋದೇ ಬಿಪಿ, ಶುಗರ್ ಇತ್ಯಾದಿ ಕಾಯಿಲೆಗಳು. ನಿಮ್ಮ ಗಂಡನ ಆಹಾರವನ್ನು ಕಂಟ್ರೋಲಲ್ಲಿ ಇಡ್ಬೇಕು. ಅಂದ್ರೆ ಇನ್ನು ಮೇಲೆ ಅವ್ರಿಗೆ ಹಸಿ ತರ್ಕಾರಿ, ಮೊಳಕೆ ಬಂದ ಕಾಳು, ಡ್ರೈ ಚಪಾತಿ ತಿನ್ನಿಸಿ. ಚೆನ್ನಾಗಿ ನೀರು ಕೊಡಿ. ನನ್ನ ಮಿಸೆಸ್ ನಡಿಸ್ತಾ ಇರೋ ಯೋಗ ಕ್ಲಾಸಿದೆ. ಅದಕ್ಕೆ ಸೇರ್ಸಿ ಮೇಡಂ ನಿಮ್ಮ ಗಂಡನ್ನ... ಅಲ್ದೇ... ಫ್ರೈಡ್ ಐಟಮ್ಸನ್ನು ಕೊಡ್ಬೇ ಬೇಡಿ" ಎನ್ನುತ್ತ ಐನೂರರ ನೋಟನ್ನು ಜೇಬಿಗಿಳಿಸಿ, ಉಳಿದ ಚಿಪ್ಸನ್ನು ಕುರುಕತೊಡಗಿದ. ತಾವು ಎರ್ರಾಬಿರ್ರಿ ತಿಂದು, ಬೊಜ್ಜು ಬೆಳೆಸಿಕೊಂಡು ಬೇರೆಯವರಿಗೆ ಪಥ್ಯೋಪದೇಶ ಮಾಡುವ ಈ ಡಾಕ್ಟರುಗಳು ನಮ್ಮ ನೆಮ್ಮದಿ ಕೆಡಿಸುವ ಶತ್ರುಗಳು ಎಂದು ತೀರ್ಮಾನಿಸಿದೆ. ಏನನ್ನೂ ಮಾತಾಡುವ ಸ್ಥಿತಿಯಲ್ಲಿ ಆಗ ನಾನಿರಲಿಲ್ಲ. ಯಾಕೆಂದರೆ ನಲ್ವತ್ತಕ್ಕೆ ಕಾಲಿಟ್ಟವ !

ಮಾರನೆಯ ದಿನದಿಂದ ಪ್ರಾರಂಭವಾಯಿತು ನನ್ನ ಪಥ್ಯ ಪರ್ವ. ಹೆಂಡತಿಗೆ ಜಯ ಸಾಧಿಸಿದ ಹೆಮ್ಮೆ. ಬೆಳಿಗ್ಗೆ ಉಪಾಹಾರಕ್ಕೆ ಡೈನಿಂಗ್ ಟೇಬಲ್ಲಿನಲ್ಲಿ ಕುಳಿತಾಗ ಮಕ್ಕಳು ಕಿಸಕ್ಕನೆ ನನ್ನನ್ನು ನೋಡಿ ನಕ್ಕವು ! ಹೆಂಡತಿ,

"ಆಯಿಲಿಲ್ಲದ ಚಪಾತಿಗೆ ನಾನೊಲಿದೆಯಯ್ಯ
ಸಾಲ್ಟಿಲ್ಲದ ಸಲಾಡನು ನಾ ಮಾಡಿದೆಯಯ್ಯ
ಷುಗರಿಲ್ಲದ ಕಾಫಿಯ ನೀ ಕುಡಿಬೇಕಯ್ಯ"

ಎಂದು ಹಾಡುತ್ತ ಬಡಿಸುತ್ತಿದ್ದಳು. ನಾನು,

"ಚಪಾತಿಯಿದ್ದು ಫಲವೇನು ತುಪ್ಪವಿಲ್ಲದನ್ನಕ್ಕ ?
ಸಲಾಡಿದ್ದು ಫಲವೇನು ಸಾಲ್ಟಿಲ್ಲದನ್ನಕ್ಕ ?
ಕಾಫಿ ಸ್ಟ್ರಾಂಗಿದ್ದು ಫಲವೇನು ಸಕ್ಕರೆಯಿಲ್ಲದನ್ನಕ್ಕ ?
ನಾನಿದ್ದು ಫಲವೇನು ಇವೆಲ್ಲವ ಮೆಲ್ಲುವನ್ನಕ್ಕ ?"

ಎಂದು ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತಿದ್ದೆ. ಕಷ್ಟಪಟ್ಟು ಒಂದೂವರೆ ಚಪಾತಿ, ಒಂದಿಷ್ಟು ಸಲಾಡನ್ನು ಜಠರಕ್ಕೆ ತಳ್ಳಿದೆ. ಆನಂತರದ ಉಪಾಹಾರ ಇನ್ನೂ ಭೀಕರವಾಗಿತ್ತು. ಹಸಿ ಮೂಲಂಗಿ, ಒಂದಿಷ್ಟು ಮೊಳಕೆ ಬರಿಸಿದ ಕಾಳು, ಯಾವುಯಾವುದೋ ಸೊಪ್ಪುಗಳು! ನಿಜವಾಗಿಯೂ ನಾನು (ಪ್ರಯೋಗ) ಪಶು ಎಂದು ತೀರ್ಮಾನಿಸಿದೆ. ಅವುಗಳನ್ನು ಬಡಿಸುವಾಗ ಪತ್ನಿಯದ್ದು ಎಂದಿಲ್ಲದ ಉಪಚಾರ. ಇನ್ನಷ್ಟು ತಿನ್ನಿ ಎಂದು ಬಲವಂತ ಬೇರೆ. ಡಾ|| ಬೊಜ್ಜೇಶನ ಆಜ್ಞೆಯಂತೆ ಅವನ ಹೆಂಡತಿ ನಡೆಸುತ್ತಿದ್ದ ಯೋಗ ಕ್ಲಾಸಿಗೂ ಸೇರಿಸಿದಳು.

ನಿತ್ಯವೂ ಸಂಜೆಯ ಹೊತ್ತು ನಡೆಯುತ್ತಿದ್ದ ಯೋಗ ಕ್ಲಾಸಿನಲ್ಲಿ ನಾನೊಬ್ಬನೇ ನಲ್ವತ್ತರವ, ಮತ್ತೆಲ್ಲರೂ ಹದಿನೆಂಟರಿಂದ - ಇಪ್ಪತ್ತರ ಒಳಗಿನ ತರುಣಿಯರು. ಪದ್ಮಾಸನ ಹಾಕಲು ಹೋಗಿ ಆ ಹುಡುಗಿಯರ ಎದುರಿನಲ್ಲಿ ಪಲ್ಟಿ ಹೊಡೆದೆ. ಕಿಸಕ್ಕನೆ ಯುವತಿಯರು ನಕ್ಕಾಗ ಮೀಸೆ ಹೊತ್ತವನಿಗೆ ಹೇಗಾಗಬೇಡ? ''ಇವ್ರೇ ಪಲ್ಟೀರಾಯರು'' ಅಂತ ಬೇರೆಯವರಿಗೆಲ್ಲ ಬೆರಳೆತ್ತಿ ತೋರಿಸುವಾಗಲಂತೂ ಯಃಕಶ್ಚಿತ್ ನೆಲಕ್ಕಿಳಿದುಹೋದೆ. ''ಯೋಗ ಕ್ಲಾಸಿಗೆ ಹೋಗಲಾರೆ'' ಎನ್ನುವ ಹಾಗಿಲ್ಲ. ಇದರಿಂದ ತಪ್ಪಿಸಿಕೊಳ್ಳುವುದು ಹೇಗೆ ಅಂತ ಯೋಚಿಸುತ್ತಿದ್ದೆ.

ಒಂದು ದಿನ ಹೆಂಡತಿಯೇ, ''ಹೇಗೆ ನಡೀತಾಯಿದೆ ಯೋಗ ಕ್ಲಾಸು? ಒಂದು ಚೂರೂ ಬೊಜ್ಜು ಕರಗಿದ ಹಾಗೆ ಕಾಣ್ತಾ ಇಲ್ಲಾ?'' ಅಂತ ಕೇಳಿದಳು. ''ಹೌದು ಮಾರಾಯ್ತಿ. ಬೊಜ್ಜು ಸರಿಯಾಗಿ ಕರಗ್ಬೇಕು ಅಂದ್ರೆ ಬೆಳಿಗ್ಗೆ ಸಂಜೆ ಎರ್ಡು ಸಾರಿ ಹೋಗ್ಬೇಕು. ಅದೂ ಅಲ್ದೆ ಎಂಥೆಂಥ ಚೆಂದದ ಹುಡುಗಿಯರು ಬರ್ತಾರೆ ಗೊತ್ತುಂಟಾ? ಅವ್ರನ್ನು ನೋಡ್ಲಿಕ್ಕೇ ಎರ್ಡು ಕಣ್ಣು ಸಾಲೋದಿಲ್ಲ. ಟೆನ್‌ಷನ್ ಎಲ್ಲ ಪರಿಹಾರ ಆಗ್ತದೆ'' ಅಂದೆ. ಅದನ್ನು ಕೇಳಿದ್ದೇ ಕೆಂಡಾಮಂಡಲಳಾದ ಹೆಂಡತಿ ಯೋಗ ಕ್ಲಾಸಿಂದ ಬಿಡಿಸಿದಳು. ಆದರೆ ಅಂಚೆ ಮೂಲಕ ಯೋಗ ಕಲಿಯಲು ಹಚ್ಚಿದಳು.

ತಿಂಗಳಿಗೊಂದು ಆಸನವನ್ನು ಕಲಿಸುವ ಪತ್ರಿಕೆ ಅದು. ಆ ತಿಂಗಳಲ್ಲಿ ಮಾಡಲು ಅದೆಂಥದೋ ಒಂದು ಆಸನದ ಚಿತ್ರಗಳನ್ನು ಕೊಟ್ಟಿದ್ದರು. ಕಾಲುಗಳನ್ನು ಮೇಲಕ್ಕೇರಿಸಿ, ತಲೆಯನ್ನು ಅದರೊಳಗೆ ತೂರಿಸಿ, ಒಂದು ಕೈಯಲ್ಲಿ ನಿಂತೆ. ತೆಗೆಯಲು ಬರದೆ ಒದ್ದಾಡಿದೆ. ನನ್ನ ಸ್ಥಿತಿ ಕಂಡು ಹೆಂಡತಿಗೂ ಗಾಬರಿಯಾಯಿತು. ಪತ್ರಿಕೆಯ ಸಂಪಾದಕರಿಗೆ ಫೋನಾಯಿಸಿದಳು. ಅವರು, ''ಅದು ಈ ತಿಂಗಳ ಆಸನ. ಅದರಿಂದ ಬಿಡಿಸಿಕೊಳ್ಳುವುದು ಹೇಗೆ ಅಂತ ಮುಂದಿನ ತಿಂಗಳು ಬರ್ತದೆ'' ಅಂದರು ಸ್ಥಿತಪ್ರಜ್ಞರಾಗಿ! ಅಂತೂ ಹೇಗೋ ಎದ್ದು ಬಿದ್ದು ಸಮಸ್ಥಿತಿಗೆ ಬಂದೆ.

''ಬೇಗ ಬೊಜ್ಜು ಕರಗ್ಬೇಕು ಅಂದ್ರೆ ಇವೆಲ್ಲಕ್ಕಿಂತ ಜಾಗಿಂಗೇ ಬೆಸ್ಟು'' ಅಂತ ಯಾರೋ ನನ್ನ ವೈರಿಗಳು ಹೆಂಡತಿಯ ಕಿವಿ ಊದಿದರು. ಮಾರನೆಯ ದಿನವೇ ಸಾವಿರಾರು ರೂಪಾಯಿ ಕೊಟ್ಟು ಜಾಗಿಂಗ್ ಷೂಸ್, ಬರ್ಮುಡಾ, ಟೀಷರ್ಟ್ ಎಲ್ಲ ತಂದ ನನ್ನ ಹೆಂಡತಿ ಬೆಳಿಗ್ಗೆ ಐದು ಗಂಟೆಗೇ ನನ್ನನ್ನು ಎಬ್ಬಿಸಿ ಅವನ್ನು ತೊಡಿಸಿ, 'ಓಡಿ' ಎಂದಬ್ಬರಿಸಿದಳು! ನಿರ್ಜನ ರಸ್ತೆಯಲ್ಲಿ ಚುಮು ಚುಮು ಬೆಳಕಲ್ಲಿ ನಾನೊಬ್ಬನೇ ಓಡುತ್ತಿರುವಾಗ ಅಕ್ಕಪಕ್ಕದ ಮನೆಗಳಿಂದ ಗೊರಕೆ ಕೇಳಿಬರುತ್ತಿತ್ತು. ''ಜಗವೆಲ್ಲ ಮಲಗಿರಲು ಎದ್ದು ಬಿದ್ದೋಡುತಿಹ ನಾನೊಬ್ಬ ಬುದ್ಧ'' ಎಂಬ ಭಾವನೆ ಹುಟ್ಟಿ ವೈರಾಗ್ಯೋದಯವಾಯಿತು.

ಹೀಗೆ ಜಾಗಿಂಗ್ ಸಾಗುತ್ತಿರಲಾಗಿ ಕೆಲವು ದಿನಗಳಲ್ಲೇ ನಾವು ನನ್ನ ಭಾವಮೈದನನ ಮನೆಗೆ ಬೆಂಗಳೂರಿಗೆ ಹೋಗಬೇಕಾಗಿ ಬಂತು. ನನ್ನ ಭಾವಮೈದ ಬಲು ಕಿಲಾಡಿ. ''ಭಾವ... ನನ್ನ ಇಬ್ರು ಫ್ರೆಂಡ್ಸಿದ್ದಾರೆ. ಅವ್ರಿಗೆ ಕ್ರಾಸ್‌ಕಂಟ್ರಿ ರೇಸಲ್ಲಿ ಭಾಗವಹಿಸ್ಲಿಕ್ಕೆ ಇಂಟರೆಸ್ಟಿದೆ. ನಿಮ್ಜೊತೆ ಓಡಿದ್ರೆ ಅವ್ರಿಗೂ ಟ್ರೈನಿಂಗಾಗ್ತದೆ. ನಿಮ್ಗೂ ಬೆಂಗ್ಳೂರಲ್ಲಿ ರೋಡು ಕನ್‌ಫ್ಯೂಸಾಗೊಲ್ಲ. ಒಳ್ಳೇ ಕಂಪೆನಿಯಾಗ್ತದೆ'' ಅಂದ. ನಾನು ಒಪ್ಪಿದೆ. ಅವನ ಗೆಳೆಯರು ಇನ್ನೂ ಕಿಲಾಡಿಗಳು. ದಿನಕ್ಕೊಂದು ರಸ್ತೆಯಲ್ಲಿ ಓಡಲು ಹೇಳುತ್ತಿದ್ದರು. ಒಂದು ದಿನ, ''ಅಂಕಲ್, ಕಬ್ಬನ್ ಪಾರ್ಕಲ್ಲಿ ಜಾಗ್ ಮಾಡೋಣ... ಯಾವ ವೆಹಿಕಲ್ಲೂ ಇರೋದಿಲ್ಲ... ತುಂಬ ಚೆನ್ನಾಗಿರ್ತದೆ'' ಅಂದ್ರು. ಕೋಲೆಬಸವನಂತೆ ತಲೆ ಅಲ್ಲಾಡಿಸಿ ಅವರೆಂದಂತೆ ಕಬ್ಬನ್‌ಪಾರ್ಕ್ ಪ್ರವೇಶಿಸಿದೆ.

ಅದೇನು ಗ್ರಹಚಾರವೋ ವಾಯುವಿಹಾರಕ್ಕೆಂದು ಬಂದಿದ್ದ ವೃಕದೋಪಾದಿಯಲ್ಲಿದ್ದ ಒಂದು ವಿದೇಶೀ ಶ್ವಾನ ತನ್ನ ಒಡತಿಯನ್ನು ಧಿಕ್ಕರಿಸಿ ನನ್ನ ಬೆನ್ನು ಹತ್ತಿತ್ತು! ಅದನ್ನು ಕಂಡು ಇನ್ನೊಂದೆರಡು ದೇಸೀ ಶೈಲಿಯವು ಬೆನ್ನುಹತ್ತಿದ್ದವು. ಓಡಿದೆ ಓಡಿದೆ ಓಡಿಯೇ ಓಡಿದೆ. ಅದರ ಒಡತಿ ಹೇಗೋ ಒಲಿಸಿಕೊಂಡು ಕರೆದುಕೊಂಡು ಹೋದ ಮೇಲೆಯೇ ನನ್ನ ದೇಹದ ನಡುಕ ನಿಂತದ್ದು! ನನ್ನೊಟ್ಟಿಗೆ ಬಂದಿದ್ದ ಭಾವಮೈದನ ಕಿಲಾಡಿ ಗೆಳೆಯರು ಆಗಲೇ ಕಾಲುಕಿತ್ತಿದ್ದರು. ಮನೆಗೆ ಬಂದು ಸಿಟ್ಟಿನಿಂದ ಅವನ ಹತ್ತಿರ ನಡೆದ ಘಟನೆಯನ್ನು ಹೇಳಿದೆ. ಆಗ ಅವನು ಪಕಪಕನೆ ನಗುತ್ತ, ''ಭಾವ... ಬೇಜಾರು ಮಾಡ್ಕೋಬೇಡಿ. ಅವ್ರು ಪ್ರತಿ ಸಂಡೇ ಒಂದು ಹುಡುಗೀನ್ನ ಕೆಣಕ್ತಾ ಇದ್ರು. ಇವತ್ತೂ ಕೆಣಕಿದ್ದಾರೆ. ಆದ್ರೆ ಅವ್ಳು ಇವತ್ತು ನಾಯಿ ಜೊತೆ ಬಂದಿದ್ದಾಳೆ. ಆ ಹುಡುಗಿಗೆ ಬುದ್ಧಿ ಕಲಿಸೋದಿಕ್ಕೆ ಹೋಗಿ ನೀವು ಓಡ್ಬೇಕಾಯ್ತು!'' ಅಂದ. ಒಂದೊಮ್ಮೆ ನಾಯಿ ನನ್ನ ಮಾಂಸದ ಟೇಸ್ಟ್ ನೋಡಿದ್ರೆ ಗತಿ ಏನು ಅಂತ ಯೋಚಿಸಿ ಬೆವೆತುಹೋದೆ.

ಬೇಸಿಗೆ ರಜೆಯಲ್ಲಿ ಊರಿಗೆ ಹೋದೆ. ಊರಿಗೆ ಹೋಗದೆ ಅದೆಷ್ಟೋ ವರ್ಷಗಳು ಸಂದಿದ್ದವು. ಪೇಟೆಯಿಂದ ಬಂದ ನನ್ನನ್ನು ಊರಿನ ಹಳಬರಾದ ಚೀಂಕ್ರ, ತನಿಯ, ಬೊಗ್ಗು ಮೊದಲಾದವರೆಲ್ಲ ಬೆರಗುಗಣ್ಣಿನಿಂದ ನೋಡುತ್ತಿದ್ದರು. ನಾಳೆ ಬೆಳಿಗ್ಗೆ ಇವರ ಎದುರು ಜಾಗಿಂಗ್ ಮಾಡಿ ನನ್ನ ಪೇಟೆಯ ವರಸೆಯನ್ನು ತೋರಿಸಬೇಕು ಅಂತ ಯೋಚಿಸಿದೆ. ಅಂತೆಯೇ ಬೆಳಿಗ್ಗೆದ್ದು ರಸ್ತೆಯಲ್ಲಿ ಓಡುತ್ತಿದ್ದೆ. ಎಲ್ಲರೂ ಬೆರಗಾಗಿ ನೋಡುತ್ತಿದ್ದರು. ಕೆಲವರು ಪಿಸಿ ಪಿಸಿ ಮಾತನಾಡುತ್ತಿದ್ದರು. ಅವರ ಆ ನೋಟ, ಬೆರಗು ಹುಟ್ಟಿದ ಸ್ಥಿತಿ ಇತ್ಯಾದಿಗಳನ್ನು ಕಂಡು ಒಳಗೊಳಗೇ ಖುಷಿಗೊಳ್ಳುತ್ತಿದ್ದೆ. ಸ್ವಲ್ಪ ದೂರ ಓಡಿರಬೇಕು, ಅಷ್ಟರಲ್ಲಿ, ''ಹೊಯ್!... ಹೊಯ್!...'' ಎನ್ನುತ್ತ ಮೂರು ನಾಲ್ಕು ಮಂದಿ ಬೆನ್ನ ಹಿಂದೆ ಓಡಿಬರುವುದು ಕಂಡಿತು. ಎಲ್ಲರೂ ಕಟ್ಟುಮಸ್ತಾದ ಯುವಕರು. ಕೆಂಡಗಣ್ಣೇಶ್ವರರು! ನನಗೇನನ್ನೋ ಇವರು ಮಾಡಲಿದ್ದಾರೆ ಎಂದು ಗೊತ್ತಾದದ್ದೇ ವೇಗವಾಗಿ ಓಡತೊಡಗಿದೆ. ಅವರೂ ಬಿಡಲಿಲ್ಲ. ಇನ್ನಷ್ಟು ವೇಗವಾಗಿ ಬಂದವರೇ ಅಡ್ಡಗಟ್ಟಿ, ''ಎಂಥದು ಮಾರಾಯ್ರೇ... ಇಷ್ಟು ಬೇಗ ಓಡುದು? ಫಸ್ಟ್ ಬಸ್ ಬರ್ಲಿಕ್ಕೆ ಇನ್ನೂ ಅರ್ಧ ಗಂಟೆ ಉಂಟು ಮಾರ್ರೆ!'' ಎಂದರು. ನನಗೆ ಒಂದು ಕಡೆ ಏದುಸಿರು, ಇನ್ನೊಂದು ಕಡೆಯಲ್ಲಿ ಸುಮ್ಮನೆ ನನ್ನನ್ನು ಕಿಲೋಮೀಟರುಗಟ್ಟಲೆ ಓಡಿಸಿದರಲ್ಲಾ ಎಂಬ ಸಿಟ್ಟು. ''ಬೊಜ್ಜು!... ಜಾಗಿಂಗ್... ಡಯಟ್...'' ಅಂತೆಲ್ಲ ತೊದಲಿದೆ. ಎಲ್ಲವನ್ನೂ ಕೇಳಿಯಾದ ಮೇಲೆ, ''ಷಕ್!... ಇಷ್ಟೆ ವಿಷಯವಾ? ನಿಮ್ಗೆ ಪೇಟೆಯವ್ರಿಗೆ ತಿನ್ಲಿಕ್ಕೂ ಗೊತ್ತಿಲ್ಲ, ತಿಂದದ್ದನ್ನು ಕರಗಿಸ್ಲಿಕ್ಕೂ ಗೊತ್ತಿಲ್ಲ. ನಾವು ನೋಡಿ ಹಳ್ಳಿಯವ್ರು ಹೇಗಿದ್ದೇವೆ. ನಿಮ್ಗಿಂತ ನಾವೇ ವಾಸಿ ಮಾರ್ರೆ. ಇಷ್ಟಿದ್ರೇನು? ತಿನ್ಲಿಕ್ಕೂ, ಅದನ್ನು ಕರಗಿಸಿಕೊಳ್ಳಿಕ್ಕೂ ಅದೃಷ್ಟಬೇಕು ಮಾರ್ರೆ'' ಎನ್ನುತ್ತ ಹೊರಟರು.

ಬೊಜ್ಜು ಕರಗಿಸಲೆಂದು ಜಾಗಿಂಗ್ ಮಾಡಿ ನನ್ನ ಊರಲ್ಲಿ ಆದ ಗರ್ವಭಂಗಕ್ಕೆ ತಕ್ಕ ಸಮಾಧಾನವನ್ನು ನನ್ನ ಮಾವನ ಮನೆಯಲ್ಲಾದರೂ ಪಡೆಯೋಣ ಅಂದುಕೊಂಡಿದ್ದೆ. ನನ್ನೂರಿಗೆ ಹೋಲಿಸಿದರೆ ಅತ್ತೆಯ ಮನೆ ಇನ್ನೂ ಸಣ್ಣ ಹಳ್ಳಿ. ಹೆಂಡತಿಗೋ ನನಗಿಂತಲೂ ಉತ್ಸಾಹ. ತನ್ನ ತೌರೂರಿನಲ್ಲಿ ತನ್ನ ಗಂಡನ ಫ್ಯಾಷನ್‌ಅನ್ನು ಮೆರೆಸೋಣ ಅಂದುಕೊಂಡಿದ್ದಳೋ ಏನೋ. ಅಂತೂ ಎಂದಿನಂತೆ ಚುಮುಚುಮು ಬೆಳಕಿನಲ್ಲೇ ನನ್ನನ್ನು ಓಡಿಸಿದಳು.

ಹಿಂದಕ್ಕೆ ಬಂದಾಗ ಮಾತ್ರ ದೊಡ್ಡ ರಾದ್ಧಾಂತವೇ ಆಗಿತ್ತು. ನನ್ನ ಹೆಂಡತಿ ''ಹೋ'' ಎಂದು ರಾಗ ಎಳೆಯುತ್ತಿದ್ದಳು. ಕೆಲಸದ ಜಲಜಾಕ್ಷಿ ಪಿಳಿಪಿಳಿ ಅಂತ ನನ್ನನ್ನೂ ಹೆಂಡತಿಯನ್ನೂ ನೋಡುತ್ತ ನಿಂತಿದ್ದಳು. ಅತ್ತೆ, ಮಾವ, ನಾದಿನಿ, ಪಕ್ಕದ ಮನೆಯವರು, ಕೆಲಸದವರು ಎಲ್ಲರೂ ಅಂಗಳದಲ್ಲಿ ಒಟ್ಟುಸೇರಿದ್ದರು.

''ಏನೇ, ಏನಾಯ್ತೇ?'' ಎಂದೆ.

''ನೀವು ನಿನ್ನೆ ರಾತ್ರಿ ರಾಧೆಯ ಮನೆಗೆ ಹೋಗಿದ್ರಿ ಅಂತೆ. ಯಾರಿಗೂ ಗೊತ್ತಾಗದೆ ಇರ್ಲಿ ಅಂತ ಬೆಳಿಗ್ಗೆ ಓಡಿ ಹೋಗ್ತಾಯಿದ್ರಂತೆ...''

''ಯಾರೇ ಈ ಕತೆ ಕಟ್ಟಿದ್ದು?''

''ಮತ್ಯಾರು? ಈ ಜಲಜಾಕ್ಷಿ. ನೀವು ಓಡ್ತಾ ಇರೂದನ್ನು ನೋಡಿ ಈ ಕತೆ ಕಟ್ಟಿ ಅವ್ಳ ಕೇರಿ ಎಲ್ಲ ಪ್ರಚಾರ ಮಾಡಿದ್ದಾಳೆ. ಎಲ್ರೂ ನನ್ನನ್ನು 'ಹೌದಾ ಅಕ್ಕ?' ಅಂತ ಕೇಳ್ತಿದ್ದಾರೆ. ಹೋಯ್ತು... ನನ್ನ ಮಾನ, ಮರ್ಯಾದೆ ಎಲ್ಲ ಹೋಯ್ತು'' ಅಂತ ಹೇಳಿದವಳೇ ಮತ್ತೆ ಹೋ ಅಂತ ಅಳಲಿಕ್ಕೆ ಪ್ರಾರಂಭಿಸಿದಳು.

ನನಗೂ ಒಂದು ರೀತಿಯಲ್ಲಿ ಖುಷಿಯಾಯಿತು. ಹುಡುಕುತ್ತಿದ್ದ ಬಳ್ಳಿಯೇ ಕಾಲಿಗೆ ತೊಡರಿದಂತಾಯಿತು. ''ನೀನೇ ಅಲ್ವೇನೇ ಬೆಳಬೆಳಿಗ್ಗೆ ಓಡಿಸಿದ್ದು? ಎಲ್ಲೇ ಹೋಗ್ಲಿ, ಯಾವ ಊರಿಗೇ ಹೋಗ್ಲಿ ಡಯಟ್, ಜಾಗಿಂಗ್ ಬಿಡ್ಬಾರ್ದು ಅಂತ ಹೇಳಿದ್ದು... ನೀನು ಓಡ್ಸಿದೆ... ನಾನು ಓಡಿದೆ. ತಪ್ಪು ನಂದಾ?''

''ಇಲ್ಲಾರಿ... ಇನ್ಮುಂದೆ ಡಯಟ್, ಜಾಗಿಂಗ್ ಬೀಗಿಂಗ್ ಎಲ್ಲ ಸ್ಟಾಪ್. ನನ್ನ ಜೊತೆ ನೆಮ್ಮದಿಯಿಂದ ಇರಿ ಅಷ್ಟೆ ಸಾಕು'' ಅಂದಳು. ರಾಧೆಯ ಮನೆಗೆ ಹೋಗದಿದ್ದರೂ ಹೋಗಿದ್ದೆನೆಂದು ಕತೆ ಕಟ್ಟಿ ಪ್ರಚಾರ ಮಾಡಿ ಬೊಜ್ಜು ನಿವಾರಣಾ ಉಪಾಖ್ಯಾನಕ್ಕೆ ಮಂಗಳ ಹಾಡಿದ ಜಲಜಾಕ್ಷಿಗೆ ಮನಸ್ಸಿನಲ್ಲಿಯೇ ವಂದಿಸಿದೆ.

ಪಿ. ಬಿ. ಪ್ರಸನ್ನ
ನಂ. ೪, ೧೦ನೇ ಮುಖ್ಯರಸ್ತೆ, ಜೆ.ಪಿ. ನಗರ 'ಡಿ' ಬ್ಲಾಕ್, ಮೈಸೂರು - ೫೭೦ ೦೦೮

# ಭಾಷೆ, ಬದುಕು, ಸಾಹಿತ್ಯ

## ಅರ್ಜುನ ಕೋರಟಕರ

ಜಗತ್ತಿನಲ್ಲಿ ಭಾಷೆಯ ಆತ್ಮಚರಿತ್ರೆಯನ್ನು ಇದುವರೆಗೆ ಯಾರೂ ಬರೆದಿರಲಿಕ್ಕಿಲ್ಲ. ಬರೆದುದೇನಾದರೂ ಇದ್ದಿದ್ದರೆ ಅದು ವ್ಯಾಖ್ಯಾನವಾದೀತಷ್ಟೆ. ಆದರೆ ಜಗತ್ತಿನ ಭೌತಿಕ ಆತ್ಮಕತೆ ಮಾತ್ರ ಭಾಷೆಯಿಂದಲೇ ಸೃಷ್ಟಿಸಿಕೊಳ್ಳುತ್ತಿದೆ; ಸೃಷ್ಟಿಸಿಕೊಂಡಿದೆ. ಅದು ಸೃಜನಾತ್ಮಕವಾಗಿ ಮಾತ್ರವಲ್ಲ ವೈಜ್ಞಾನಿಕವಾಗಿಯೂ ಕೂಡ.

ಭಾಷೆಯು ಎಂದೂ ಯಾರನ್ನೂ ವಿಭಜಿಸುವ ಕೆಲಸ ಮಾಡುವುದಿಲ್ಲ. ಬೆಸುಗೆಯೇ ಅದರ ಮೂಲಗುಣವಾಗಿದೆ. ಭಾಷೆ, ಹೊಳೆ, ಹಳ್ಳ, ಸರೋವರಗಳ ಮೂಲಕ ನಮ್ಮನ್ನು ನಾವು ಪ್ರಾದೇಶಿಕವಾಗಿ, ಭೌಗೋಳಿಕವಾಗಿ, ರಾಷ್ಟ್ರೀಯವಾಗಿ, ಐತಿಹಾಸಿಕವಾಗಿ ವಿಭಜಿಸಿಕೊಳ್ಳುತ್ತಿದ್ದೇವೆ. ನಾಡು, ನುಡಿ ಆಡಳಿತಕ್ಕೆ ಅನುಕೂಲಸಿಂಧುವೆಂದು ಅನುಸರಿಸಿಕೊಂಡುಬಂದಿದ್ದೇವೆ. ಮಾನವತೆಯನ್ನು ವಿಶಾಲಗೊಳಿಸುತ್ತಿರುವುದು ಭಾಷೆ ಮಾತ್ರವೆಂದು ಮನಗಂಡರೆ, ಮನುಷ್ಯ-ಮನುಷ್ಯರ ನಡುವಿನ ಭಿನ್ನಾಭಿಪ್ರಾಯಗಳು ದೂರಾಗಿ ಮತ್ತೆ ಮತ್ತೆ ಏಕರೂಪವಾಗಿ ಒಂದಾಗುವುದು ಸಾಧ್ಯವಿದೆ. ಭಾಷೆ ಜಾತಿಗಳು ಪ್ರಜಾಜೀವನದಲ್ಲಿ ವ್ಯತ್ಯಾಸ ಸಂಕಲ್ಪಕ್ಕೆ ಕಾರಣವಾಗುತ್ತಿರುವುದು ವಿಷಾದನೀಯವೆಂದು ಭಾವಿಸಿ ಬದುಕಬೇಕಾಗಿದೆ.

ರಾಷ್ಟ್ರದ ಸಮಗ್ರತೆ ಮತ್ತು ಏಕತೆಗಾಗಿ ಭಾಷಿಕರೆಲ್ಲರೂ ಮಾನಸಿಕವಾಗಿ, ಭಾವನಾತ್ಮಕವಾಗಿ, ಬೌದ್ಧಿಕವಾಗಿ ಒಂದಾಗಿ ಜೀವಿಸಬೇಕಾಗಿರುವುದು ಆವಶ್ಯಕವಾಗಿದೆ. ಬಹುಭಾಷಿಕರು ಆಗಾಗ ಕೂಡಿ ಕೂತುಕೊಂಡು ಸಹಯೋಗ-ಸದ್ಭಾವನೆಗಳಿಂದ ನಮ್ಮ ಜೀವನ ಪಯಣದ ಅರ್ಥಪೂರ್ಣ ಚಿಂತನ-ಮಂಥನ ನಡೆಸಿ, ನಮ್ಮ ಆಗು-ಹೋಗುಗಳನ್ನು ನೀಗಿಸಿಕೊಂಡು ಸಾಗಲು, ಸ್ವಾಭಿಮಾನಿಗಳಾಗಲು, ಸ್ವಾವಲಂಬಿಗಳಾಗಲು, ವಿದ್ವತ್ಪ್ರಣೀತರಾಗಲು ತೊಡಗಬೇಕಾಗಿದೆ. ಭಾಷಾಜ್ಞಾನದ ವಿನಿಮಯದ ಮೂಲಕ ಜ್ಞಾನಿಕ ಔನ್ನತ್ಯವನ್ನು ಬದುಕಬೇಕಾಗಿದೆ.

ಅಗ್ನಿಶಿಲೆ, ಜಲಶಿಲೆಗಳ ಸಂಚಲನದಲ್ಲಿ ಜೀವಸೆಲೆಯಿದೆ. ಅದು ಜೀವದ್ರವವೂ ಆಗಿದೆ. ಅಂತೆಯೇ ಶಿಲೆ, ಜಲ, ಮರಳು, ಮಣ್ಣು, ಧೂಳು ಇವುಗಳಲ್ಲಿಯೇ ಭಾಷೆಗಳ ಹುಟ್ಟಡಗಿದೆ. ಭಾಷೆ ಮನುಷ್ಯನಿಗೆ ಮಾತ್ರ ಸೀಮಿತಗೊಂಡುದಲ್ಲ, ಸಸ್ಯ, ಪ್ರಾಣಿ, ಪಕ್ಷಿ ಸಂಕುಲಕ್ಕೂ ಅದರವೇ ಆದ ಭಾಷೆಗಳಿವೆ. ಆದರೆ ಈ ವರ್ಗದಿಂದ ವಿಶೇಷವಾಗಿ ಮಾನವನನ್ನು ಪ್ರತ್ಯೇಕಿಸಲು ಭಾಷೆಯೇ ಪ್ರಧಾನ ಸಾಧನವಾಗಿದೆ. ಭಾಷಾ ಭೂಗೋಳವನ್ನು ಅರ್ಥೈಸುವಲ್ಲಿ ನಾವು ಸಂಕುಚಿತರಾಗುವುದರಿಂದಲೇ ಭಾಷಾ ಗೋಳುಗಳಿಗೆ ಪ್ರಾದೇಶಿಕವಾಗಿಯೂ ಈಡಾಗುತ್ತಿದ್ದೇವೆ. ಭಾಷೆಯು ನಿರಂತರವಾಗಿ ಪರಿವರ್ತನಾಶೀಲವಾದುದೆಂದು ನಮಗೆ ಮನವರಿಕೆಯಾದರೆ ನಾವು ನಾವಾಗಿರಲು ಸಾಧ್ಯವಿದೆ.

ಜಾಗತಿಕ ಮಟ್ಟದಲ್ಲಿ ಭೌಗೋಳಿಕ ವರ್ಗೀಕರಣಕ್ಕೆ ನಾವಿಂದು ಭಾಷೆಯನ್ನು ಜೀವನ ಸಂಪರ್ಕದ ಮಾಧ್ಯಮವನ್ನಾಗಿರಿಸಿಕೊಂಡು – ಪ್ರಪಂಚದ ಭಾಷೆಗಳನ್ನು ಭಾರತೀಯ ಭಾಷೆಗಳು, ಯೂರೋಪಿನ ಭಾಷೆಗಳು, ಉತ್ತರ ಅಮೆರಿಕಾದ ಭಾಷೆಗಳು, ರಷ್ಯನ್ ಭಾಷೆಗಳು ಎಂದು ವರ್ಗೀಕರಣ ಮಾಡಿದೆಯೆಂದು ಅಧ್ಯಯನಕ್ಕೆ ಸಿಕ್ಕುವ ಸಂಗತಿಯಾಗಿದೆ. ಅದೇ ರೀತಿಯಾಗಿ ಜಾರ್ಜ್ ಗ್ರಿಯರಸನ್ ಎಂಬ ವಿದ್ವಾಂಸನು 'ಲಿಂಗ್ವಿಸ್ಟಿಕ್ ಸರ್ವೆ ಆಫ್ ಇಂಡಿಯಾ' ಎಂಬ ಕೃತಿಯ ಮೂಲಕ ಭಾರತೀಯ ಭಾಷೆ ಹಾಗೂ ಉಪಭಾಷೆಗಳನ್ನು ಪ್ರಾದೇಶಿಕವಾಗಿ ಅಧ್ಯಯನಗೈದು ಸಾಕಷ್ಟು ಜ್ಞಾನ ಒದಗಿಸಿದ್ದಾನೆ.

ಭಾರತವು ಸುಮಾರು ಹದಿನಾರುನೂರು ಭಾಷೆಗಳನ್ನಾಡುವ ಜನಾಂಗಗಳನ್ನು ಹೊಂದಿದೆ. ಇಷ್ಟೆಲ್ಲ ಭಾಷೆಗಳನ್ನಾಡುವ ನಾವೆಲ್ಲರೂ ಭಾರತೀಯರು. ಹೀಗೆಯೇ ಭಾರತದ ಆಯಾ ರಾಜ್ಯಗಳಲ್ಲಿಯೂ ವಿವಿಧ ಭಾಷೆಗಳನ್ನಾಡುವ ಜನಾಂಗಗಳಿವೆ. ಈ ಕರಿನೆಲದ ಕನ್ನಡಿಗರ ಕರ್ನಾಟಕದಲ್ಲಿ ಕನ್ನಡ, ತೆಲುಗು, ಮರಾಠಿ, ಉರ್ದು, ತಮಿಳು, ತುಳು, ಕೊಂಕಣಿ, ಮಲಯಾಳಿ, ಬಂಜಾರಿ, ಹಿಂದಿ, ಕೊಡವ ಮೊದಲಾದ ಮಾತೃಭಾಷೆಗಳನ್ನಾಡುವ ಜನಾಂಗವಿದೆ. ಈ ಎಲ್ಲ ಭಾಷಿಕರು ಕನ್ನಡಿಗರು. ಭಾಷೆ ಸಾಮಾಜಿಕವಾದುದೆಂದು ಭಾವಿಸಿದರೆ ಸಾಲದು. ಭೌತಿಕ ಸಾವಯವ ಕೃಷಿ ವ್ಯವಸ್ಥೆಯೊಂದಿಗೆ ಮೂಲಭೂತವಾಗಿ ಹೊಂದಿಕೊಂಡಿರುತ್ತೇವೆಂದು ನಾವು ತಿಳಿದು ಬದುಕಬೇಕಾಗುತ್ತದೆ.

ಮಾನವನ ಆಚಾರ, ವಿಚಾರ, ಸಂಪ್ರದಾಯಗಳು ಕಾಲಮಾನಕ್ಕನುಸಾರವಾಗಿ ಬದಲಾವಣೆಯಾದಂತೆ ಭಾಷೆಯಲ್ಲಿಯೂ ಬದಲಾವಣೆಯಾಗುವುದು ಸಹಜ. ಒಂದೇ ಭಾಷೆಯಾಡುವ ಜನರು ಬೇರೆ ಬೇರೆ ಪ್ರಾದೇಶಿಕ ನೆಲೆಗಳಲ್ಲಿ ವಾಸವಾಗಿರುತ್ತಾರೆ ನಿಜ; ಅವರು ತಮ್ಮ ಜೀವನಕ್ರಮದಲ್ಲಿ ವ್ಯತ್ಯಾಸ ಹೊಂದಿರುವುದರಿಂದ ಸಾಂಸ್ಕೃತಿಕವಾಗಿ ಭಾಷೆಯಲ್ಲಿಯೂ ವಿಭಿನ್ನ ರೀತಿ ಹೊಂದಿರುವುದು ಕೂಡ ಅಷ್ಟೇ ಸಹಜವಾಗಿದೆ. ಒಂದು ಭಾಷೆಯ ಪ್ರದೇಶ ವಿಸ್ತಾರವಾದಂತೆ ವೈಭಿನ್ಯತೆಯೂ ಹೆಚ್ಚುತ್ತದೆ. ಇಂಥ ರೀತಿಯ ವಿಭಿನ್ನತೆಯನ್ನು ನಾವು ಭಾಷೆಯ ದೃಷ್ಟಿಯಿಂದ ಈಗಾಗಲೇ ಉಪಭಾಷೆಗಳೆಂದು ಮನಗಂಡಿದ್ದೇವೆ. ಇದು ಕನ್ನಡ ನಾಡಿಗೆ ಮಾತ್ರ ಸೀಮಿತವಾದುದೆಂದು ಭಾವಿಸಲಾಗದು; ಇಡೀ ಭಾಷಿಕ ಜಗತ್ತನ್ನಾವರಿಸಿಕೊಂಡ ನೈಜ ಸಂಗತಿಯಾಗಿದೆ.

ಭಾಷಾ ದೃಷ್ಟಿಯ ನಮ್ಮ ಕುತೂಹಲದ ಸಂಗತಿಯೊಂದಕ್ಕೆ ಒಂದು ಪ್ರಾಯೋಗಿಕ ಸಾಕ್ಷ್ಯವೆಂದರೆ – ಈ ವೈಭಿನ್ಯತೆಗಳು ಒಮ್ಮೊಮ್ಮೆ ವಿಶೇಷವಾಗಿ ಹೊಸ ಭಾಷೆಗಳ ಹುಟ್ಟಿಗೆ ಕಾರಣವಾಗುತ್ತವೆ. ಭಾಷೆಯು ಪರಿವರ್ತನೆಗೆ

ಭವಿಷ್ಯತ್ತಿನ ಸತ್ಯವಾಗುತ್ತದೆ. ಕರ್ನಾಟಕದ ಮಟ್ಟಿಗೆ ಹೇಳಬೇಕೆಂದರೆ, ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಇವು ಕೂಡ ಕಾಲಮಾನದ ಬದಲಾವಣೆಯ ರೂಪವಾಗಿವೆ. ನಾವು ಇದನ್ನು ಭಾಷಿಕ ಬದಲಾವಣೆ ಎನ್ನಬೇಕೆಂದು ಭಾಷಿಕ ಇತಿಹಾಸ ಹೇಳುತ್ತದೆ.

ಪ್ರಸ್ತುತ ಸಂದರ್ಭದಲ್ಲಿ ಭಾಷೆಗಾಗಿ ನಾವು ತುಂಬ ಮಾನಸಿಕ, ಬೌದ್ಧಿಕ ಗೊಂದಲಕ್ಕೀಡಾಗಿ ಉದ್ವೇಗಕ್ಕೆ ಒಳಗಾಗುತ್ತಿದ್ದೇವೆ. ಇಂದು ನಮ್ಮ ತೀವ್ರತೆ ಹಾಗೂ ವ್ಯವಧಾನಹೀನ ಸಂಸ್ಕೃತಿಗೆ ಈಡಾಗುತ್ತಿದ್ದೇವೆಂದು ಮೊದಲು ಒಪ್ಪಿಕೊಳ್ಳಬೇಕಾಗುತ್ತದೆ. ಆಕಾಶದಲ್ಲಿಯ ಉಲ್ಕೆಗಳು ಬೂದಿಯಾಗಿ ಭೂಮಿಗೆ ಬೀಳುವ ದೃಶ್ಯವನ್ನು ಒಂದು ಕ್ಷಣ ಕಂಡು ವಿವೇಚನೆಗೆ ತೊಡಗಿಕೊಂಡರೆ ನಮ್ಮ ಚಿಂತನೆ ಆರೋಗ್ಯಪೂರ್ಣವಾದೀತು. ಭಾಷೆಗಾಗಿ ನಾವು ಹೆಚ್ಚು ರಕ್ತ ಸುಟ್ಟುಕೊಳ್ಳುವುದು ಸೂಕ್ತವೆ? ಇದರ ಅವಶ್ಯಕತೆ ಇದೆಯೇ? ಎಂದು ಕೆಲವು ಕ್ಷಣ ಆತ್ಮಾವಲೋಕನಕ್ಕೆ ತೊಡಗಿಕೊಳ್ಳುವುದು ಅಗತ್ಯವಾಗಿದೆ. ಹೀಗಾದಮೇಲೆ ಒಂದು ಭಾಷೆಯ ಬದಲಾವಣೆ ಇಲ್ಲವೆ ಪರಿವರ್ತನೆಯನ್ನು ಭಾಷಾ ಅವಸಾನವೆಂದು ಭಾವಿಸಿಕೊಂಡಿರುವುದು ಎಷ್ಟು ಸರಿ? ಅಂಥ ವಿಷಾದಯೋಗದಿಂದ ಮೊದಲು ನಾವು ಮುಕ್ತರಾಗಬೇಕಾಗಿದೆ.

ಹುಟ್ಟು-ಸಾವು ಎರಡಲ್ಲ– ಒಂದು. ಹುಟ್ಟಿಗೆ ಸಾವು ಬೆನ್ನಟ್ಟಿದ್ದೇ ಇದೆ. ಆಗ ನಾವು ಬದುಕಿಗೆ ವೈದ್ಯರಾಗ

> ಕನ್ನಡ ಸಾರಸ್ವತ ಲೋಕದಲ್ಲಿ ಮಾತ್ರವಲ್ಲ. ಇಡೀ ಭಾರತೀಯ ಸಾರಸ್ವತ ಲೋಕದಲ್ಲಿ ಇಂದು ಹೆಚ್ಚು ಚರ್ಚಿತ ಸಂಗತಿಯೆಂದರೆ ಸಾಹಿತಿಯ ಬದುಕು ಮತ್ತು ಬರಹ ಒಂದೇ ಆಗಿರಬೇಕೆಂದು ಬಯಸುವುದಾಗಿದೆ. ಈಗ ಪ್ರಸ್ತುತ ವ್ಯವಸ್ಥೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಜನಜೀವನದಲ್ಲಿ ಹೊಸ ಚಿಂತನೆಯೊಂದು ಶುರುವಾಗಿದೆ. ಆ ಹೊಸ ಚಿಂತನೆಗೆ ಕೇವಲ ರಾಜಕೀಯ ವಿಪರ್ಯಾಸ ಮಾತ್ರ ಕಾರಣವಲ್ಲ– ಸಾಹಿತಿಗಳ ಜೀವನ ರೀತಿಯೂ ಕಾರಣವಾಗಿದೆ. ಹೀಗಾಗಿ ಈಗ ಚರ್ಚಿತ ಸಂಗತಿಯೆಂದರೆ ಸಾಹಿತಿಯ ಬದುಕು ಮತ್ತು ಬರಹ ಒಂದೇ ಆಗಿರಬೇಕೋ ಬೇಡವೋ ಎಂಬುದು. ಜಗತ್ತಿನ ಸಾಹಿತ್ಯ ಲೋಕವನ್ನು ನಾವು ಗಮನಿಸಿದಾಗ ಪ್ರತಿಯೊಬ್ಬ ಬರಹಗಾರನ ಬದುಕು ಮತ್ತು ಬರಹ ಒಂದೇ ಆಗಿರುತ್ತದೆ. ಆದರೆ ಜೀವನ ಮಾತ್ರ ಭಿನ್ನವಾಗಿರುತ್ತದೆ! ಅದು ಭಿನ್ನವಾಗಿರಬೇಕು ಕೂಡ!! ಯಾಕೆಂದರೆ ಬದುಕು ಬೇರೆ – ಜೀವನ ಬೇರೆ

ಬೇಕಷ್ಟೆ. ಸಾವಿಗಾಗಿ ವೈದ್ಯರಾಗಬೇಕಾದುದು ಅನಗತ್ಯ. ಬದುಕನ್ನು ಪ್ರೀತಿಸುವುದು ಮನುಷ್ಯನ ಕರ್ತವ್ಯ. ಅಂದರೆ ಸಾವನ್ನು ತಪ್ಪಿಸುವ ಪ್ರಯತ್ನ, ಒಂದು ಭಾಷೆಯ ಬದುಕನ್ನು ಜಯಿಸುವುದಕ್ಕಾಗಿ ನಮ್ಮ ಪ್ರಯತ್ನವಿರಬೇಕೇ ಹೊರತು – ಸಾವನ್ನು ಕೊಲ್ಲುವುದಕ್ಕಲ್ಲ.

ಜೀವನದಲ್ಲಿ ನಿರಾಶೆಯಿಂದ ಜಿಗುಪ್ಸೆಗೊಂಡು ಸಾಕು ಈ ಬದುಕು ಎನ್ನಬಹುದು; ಆದರೆ ಸಾವು ಈ ಹಿಂಸೆಯನ್ನು ಸಹಿಸದು! ಬದುಕು ಸಾಕೆಂದರೆ ಸಾವು ಸಹ್ಯವೆನ್ನಬೇಕಲ್ಲ!! ಅದಕ್ಕೂ ತನ್ನದೇ ಆದ ಮೌಲ್ಯದ ಬದುಕಿದೆ. ಜವಾಬ್ದಾರಿ ಇದೆ. ಜವಾಬ್ದಾರಿ ಎನ್ನುವುದು ಭೌತಿಕವಾದುದಲ್ಲ; ದೈಹಿಕವಾದುದೂ ಮಾತ್ರವಲ್ಲ, ಅದು ಮಾನಸಿಕವಾದುದು; ಬೌದ್ಧಿಕವಾದುದು. ಒಂದರೊಳಗೊಂದು ಕಳೆದರೆ ಸೊನ್ನೆ, ಲೆಕ್ಕದಲ್ಲಿ. ಅಧ್ಯಾತ್ಮದಲ್ಲಿ ಒಂದರೊಳಗೊಂದು ಕಳೆದರೆ ಉಳಿಯುವುದು ಒಂದು! ಇದೇ ನಿಗೂಢವಾದುದು! ಬದುಕಿಗೂ ಸಾವಿಗೂ ಒಂದು ಅನ್ಯೋನ್ಯ ಸಂಬಂಧವಿದೆ. ನಮ್ಮ ಹಾಗೆ ಅವು ಒಂದಕ್ಕೊಂದು ವೈರಿಗಳಲ್ಲ. ಅವುಗಳೊಳಗೆ ವೈರತ್ವವಿಲ್ಲ; ಅವುಗಳ ಬಗ್ಗೆ ನಮ್ಮಲ್ಲಿ ಈ ಭಾವವಿದೆಯಷ್ಟೆ. ಅವುಗಳಲ್ಲಿ ಹೀಗಿಲ್ಲ-ಹಾಗಿಲ್ಲ-ಸಂಬಂಧದ ತಳಕಿದೆ. ಭಾಷೆಗಾಗಿ ಭಾರತೀಯರಾದ ನಾವು ಮಾತ್ರ ತಲ್ಲಣಿಸುತ್ತಿಲ್ಲ, ಇದು ಜಾಗತಿಕ ತಲ್ಲಣವೇ ಆಗಿದೆ. ಭಾರತೀಯ ಭಾಷಾ ಸಂಸ್ಕೃತಿಯ ಮೇಲೆ ಇಂಥ ಆಕ್ರಮಣಗಳಿಲ್ಲ, ಈ ಸಂಸ್ಕೃತಿಯ ಹಿಂದೆ ಸ್ವೀಕರಣದ ಸಕಾರಾತ್ಮಕವೂ ಅಡಗಿರುತ್ತದೆ. ಈ ಆಕ್ರಮಣ-ಸ್ವೀಕರಣಗಳು ಜಗತ್ತಿನ ನಿರಂತರ ಸಕಾರಾತ್ಮಕ ಗುಣವಾಗಿದೆ; ಕ್ರಿಯಾತ್ಮಕ ಗುಣವಾಗಿದೆ.

ಆಳ್ವಿಕೆ ಮತ್ತು ಭಾಷಾ ವ್ಯತ್ಯಾಸಗಳ ಬದಲಾವಣೆ ಕೇವಲ ಭಾರತೀಯ ಇತಿಹಾಸಕ್ಕೆ ಮಾತ್ರ ಸೀಮಿತವಾದುದಲ್ಲ ಇದು ಜಾಗತಿಕ ಕ್ರಿಯೆ. ಆಳ್ವಿಕೆ ಎಂಬುದು ಭಾಷೆಯ ಅವಲಂಬನೆಯಾಗಿದೆ. ಆಳುವ ಸರಕಾರ ಪ್ರಜಾನುಡಿಗನುಸಾರವಾಗಿ ಭಾಷೆಯನ್ನು ಅನುಷ್ಠಾನಗೊಳಿಸಬೇಕಾಗುತ್ತದೆ. ಸರಕಾರದ ಆಶಯದ ಭಾಷೆ ಪ್ರಜಾಹಿತಾನುಸಾರವಾಗಿರಬೇಕು. ಯಾವುದೇ ಒತ್ತಡಕ್ಕೆ ಮಣಿಯುತ್ತಿರಬಾರದು. ಈ ರೀತಿಯ ಆಳ್ವಿಕೆಗೆ ಇತಿಹಾಸ ಸಾಕ್ಷ್ಯ ಹೇಳುತ್ತದೆ. ಕರ್ನಾಟಕವನ್ನು ಇತಿಹಾಸದ ಮೂಲಕ ಗುರ್ತಿಸುವುದೇ ಆದರೆ ಇಡೀ ದಕ್ಷಿಣ ಭಾರತವನ್ನು ದಕ್ಷಿಣ ಕರ್ನಾಟಕ ಎಂದು ಪರಿಗಣಿಸಿದರೂ ತಪ್ಪಾಗಲಿಕ್ಕಿಲ್ಲ. ದಕ್ಷಿಣ ಭಾರತದ ಸಂಸ್ಕೃತಿ, ಭಾಷೆ, ಸಾಹಿತ್ಯ, ಧರ್ಮ, ರಕ್ತ, ಮಣ್ಣು ಎಲ್ಲವೂ ಒಂದೇ ಆಗಿದೆ. ಅದು ಪೂರ್ಣ ಕನ್ನಡಮಯವೆಂದರೂ ಮಣ್ಣು-ಮನಸ್ಸು ಒಪ್ಪುತ್ತದೆ. ಕನ್ನಡ ಜನಭಾಷೆಯಾಗಿ ಹಬ್ಬಿದ ವಿಸ್ತಾರ ಮುಂಬಯಿ, ಮದರಾಸು, ಕೊಡಗು, ಮೈಸೂರು ಮತ್ತು ಹೈದರಾಬಾದ ಎಂದು ಇತಿಹಾಸವು ಹೇಳುತ್ತದಲ್ಲವೆ? ವ್ಯವಹಾರ ವಿನಿಮಯ ಇದಕ್ಕೆ ಪೂರಕವಾಗಿ ಇಂದಿಗೂ ಸಾಗಿದ್ದೇ ಇದೆಯಲ್ಲವೇ?

[illegible]ರಿಂದ ಯೂರೋಪಿಯನ್ನರು ನಮ್ಮ ಈ ದೇಶವನ್ನು ಆಳತೊಡಗಿದರು. ಆಗಿನಿಂದಲೇ ನಾವು [illegible] ಮಹತ್ವನ್ನು ಮಸುಕುಗೊಳಿಸಿಕೊಳ್ಳಲು ತೊಡಗಿದ್ದು ಯಾಕೆಂದರೆ, ಬ್ರಿಟಿಷರ ಇಂಗ್ಲಿಷ್ ಭಾಷೆ




ನಮ್ಮ ದೇಶದಲ್ಲಿ ಶುರುವಾಯಿತು. ಯಾರು ನಮ್ಮ ದೇಶವನ್ನು ಆಳತೊಡಗಿದರೋ ಅವರು ತಮ್ಮ ಭಾಷೆಯನ್ನು ಆಡಳಿತ ಭಾಷೆಯಾಗಿ ಬಳಸುತ್ತಾರೆ. ಈಗ ನಾವು ಸ್ವತಂತ್ರ ಭಾರತದ ಪ್ರಜಾತಂತ್ರವನ್ನು ನಡೆಸುತ್ತಿದ್ದರೂ ಅವರು ಬಿಟ್ಟುಹೋದ ಭಾಷೆಯನ್ನು ಆರಾಧಿಸುತ್ತೇವೆ. ನಮ್ಮ ಜನ ಭಾಷೆಯ ಆಡಳಿತದ ಅನುಷ್ಠಾನಕ್ಕಾಗಿ ಅರ್ಧ ಶತಮಾನ ಸ್ವಾತಂತ್ರ್ಯ ದಿನಮಾನ ಕಳೆದರೂ ಪರದಾಡುತ್ತಲೇ ಇದ್ದೇವೆ. ಕಚ್ಚಾಡುತ್ತಲೇ ಇದ್ದೇವೆ. ಎಂದು ಇಂಗ್ಲಿಷ್ ಭಾಷೆ, ಇಂಗ್ಲಿಷ್ ಇತಿಹಾಸ ನಮ್ಮ ಮೇಲೆ ಹೇರಲ್ಪಟ್ಟಿತೋ ಅಂದಿನಿಂದಲೇ ಭಾರತೀಯ ಭಾಷೆ, ಸಾಹಿತ್ಯದ ಮೇಲೆ ಕೊಕ್ಕೆ ಬಿದ್ದಿದೆ. ಅಂದು ಬೆಳೆಯುತ್ತಿರುವ ಭಾರತೀಯ ಭಾಷೆಗಳು ಕುಗ್ಗತೊಡಗಿದ್ದವು. ಇನ್ನೊಂದು ವೈಶಿಷ್ಟ್ಯವೆಂದರೆ ದಕ್ಷಿಣ ಭಾರತದಲ್ಲಿ ಅಂದು ಕೇವಲ ಇಂಡೋ-ಆರ್ಯನ್ ಭಾಷೆಯಾದ ಸಂಸ್ಕೃತದ ಪ್ರಾಬಲ್ಯ ಹೆಚ್ಚಾಗಿತ್ತು. ಅದರ ಆಡುನುಡಿಯು ಜನಸಾಮಾನ್ಯರಿಗೆ ಕಠಿಣವಾಗಿತ್ತು, ನಿಜ. ಇದು ಬ್ರಿಟಿಷ್ ಮಿಷಿನರಿಗಳಿಗೆ ಅರ್ಥವಾಯಿತು. ಆಗ ನಮ್ಮ ದಕ್ಷಿಣ ಭಾರತದ ದ್ರಾವಿಡ ಭಾಷೆಗಳಾದ ಕನ್ನಡ, ತೆಲುಗು, ತಮಿಳು, ಮಲಯಾಳಿ ಮೊದಲಾದ ಭಾಷೆಗಳು ಜನಸಾಮಾನ್ಯರಿಗೆ ಹತ್ತಿರವಾಗಲು ಅವರು ಕಾರಣರಾದರು. ಆದರೆ ಅವರು ದೇಶ ಬಿಟ್ಟುಹೋದರೂ ಆ ಭಾಷೆ ಇಂದು ಕೆಲವರು ಭಾರತೀಯರ ಮನಸ್ಸನ್ನು ಆಳುತ್ತಿದೆ! ಈಗಲೂ ಬ್ರಿಟಿಷರ ಸರಕಾರವನ್ನು ಪ್ರಶಂಸಿಸುವ ಭಾರತೀಯರು ನಮ್ಮೊಳಗಿದ್ದಾರೆ! ಆಗ ಬ್ರಿಟಿಷರು ಇಂಗ್ಲಿಷ್ ಭಾಷೆಯನ್ನು ನಮ್ಮ ಮೇಲೆ ಹೇರಿದರೂ ಇಂದು ನಾವೇ ಹೊತ್ತು ಆಡಿಕೊಳ್ಳುತ್ತಿದ್ದೇವೆ. ಇನ್ನೊಂದು ಮಾತು ಒಪ್ಪಲೇಬೇಕಾದದ್ದು ಪಾಶ್ಚಿಮಾತ್ಯ ಭಾಷೆಯಿಂದ ದ್ರಾವಿಡ ಭಾಷೆಗಳು ಪಡೆದುಕೊಂಡದ್ದು ಹೆಚ್ಚು ಹಾಗೆಯೇ ಭಾರತೀಯ ಭಾಷೆಗಳಿಂದ ಜಗತ್ತು ಪಡೆದದ್ದು ಸಾಕಷ್ಟು. ಆದರೆ ಇಂಗ್ಲಿಷ್ ಭಾಷೆ

ಇಂದಿಗೂ ನಮ್ಮ ಅಜ್ಞಾನಕ್ಕೆ ಹಾಗೂ ಜ್ಞಾನಕ್ಕೆ ಎರಡಕ್ಕೂ ರಾದ್ಧಾಂತವಾಗಿರಲಿಕ್ಕೆ ಪಾಶ್ಚಿಮಾತ್ಯರು ಕಾರಣರಲ್ಲ; ನಾವೇ ಕಾರಣರು. ಭಾಷೆಯ ಬೇರು ಮಣ್ಣು ನೆಲವನ್ನು ಆಕ್ರಮಿಸಿದ ಮೇಲೆ ನಾವೇನು ಮಾಡಲು ಸಾಧ್ಯ? ಆಲೋಚನೆಯ ವಿಷಯ.

ಮನುಷ್ಯನ ದೃಷ್ಟಿ ಮತ್ತು ಮನಸ್ಸು ವಿಶಾಲವಾಗಿರಬೇಕು. ನಾವಿಂದು ಗೃಹದಿಂದ ಗ್ರಹ ಸಂಪರ್ಕ ದಾಟಿದ್ದೇವೆ. ಗೃಹದಿಂದ ಗ್ರಹಕ್ಕೆ ನಮ್ಮ ಜ್ಞಾನದ ವ್ಯವಹಾರ ವಿಜ್ಞಾನದ ಪಥವನ್ನು ವಿಸ್ತರಿಸಿಕೊಂಡಿದ್ದೇವೆ. ಈ ಸಂಪರ್ಕಕ್ಕೆ ಭಾಷೆ ಬೇಕೋ ಬೇಡವೋ? ಇದು ಚಿಂತನೀಯ ಮಾತು. ಸಾಧಕ ಬಾಧಕಗಳ ನಡುವೆ ಒಂದು ಹೊಸ ಮಾರ್ಗ ಹುಡುಕಬೇಕಾಗಿದೆ. ಯಾಕೆಂದರೆ ಭೂಮಿಯ ಆಚೆಗಿನ ಗ್ರಹದಲ್ಲಿ ಜೀವ ಸಂಚಲನದ ಸಂಶೋಧನೆ ನಡೆದಿದೆ. ಆದರೂ ಭಾಷೆಯ ದೃಷ್ಟಿಯಲ್ಲಿ ನಾವು ಧಾರಾಳರಾಗದಿದ್ದರೆ ಭವಿಷ್ಯವಿದೆಯೆಂದು ಅನಿಸಲಾರದು.

ಉತ್ತರ ಭಾರತದಲ್ಲಿ ನೇರವಾಗಿ ಇಂಗ್ಲಿಷ್ ಭಾಷೆಯನ್ನು ವಿರೋಧಿಸುತ್ತಾರೆ! ಹಿಂದಿ ಭಾಷೆಯ ಸ್ವಾಯತ್ತತೆಗಾಗಿ ಹೋರಾಟ ನಡೆಸಿದ್ದಾರೆ. ಅದು ರಾಷ್ಟ್ರಭಾಷೆಯೇ ಆಗಬೇಕೆಂದು ಸಂಪೂರ್ಣವಾಗಿ ಸದಾ ಚಿಂತನೆ ನಡೆಸಿದ್ದಾರೆ. ಭಾರತೀಯ ಎಲ್ಲ ಭಾಷೆ-ಭಾಷಿಕರಿಂದ ರಾಷ್ಟ್ರಭಾಷೆಯ ಬೆಳವಣಿಗೆಯೇ ಅವರ ಮೂಲ ಆಕಾಂಕ್ಷೆ, ಇದು ಪರಸ್ಪರ ಬೆಳವಣಿಗೆಯ ಸ್ಪಂದನವೇ ಆಗಿದೆ. ಆದರೆ ನಮ್ಮ ಕರ್ನಾಟಕದಲ್ಲಿ ಹೀಗಿದೆಯೇ? ನಾವು ನೇರವಾಗಿ ಕನ್ನಡವನ್ನೇ ವಿರೋಧಿಸುತ್ತೇವೆ. ಕನ್ನಡದ ಬೋರ್ಡು ಹಾಕಿಕೊಂಡು ಇಂಗ್ಲಿಷ್ ಕಲಿಸುತ್ತ ಜನಭಾಷೆಯ ಜನರಿಗೆ ದ್ರೋಹ ಮಾಡುತ್ತಿದ್ದೇವೆ. ಭಾಷಾ ಬಳಕೆಯೆನ್ನುವುದು ವ್ಯಾಪಾರೀಕರಣಗೊಂಡಿರುವುದು ಆಶ್ಚರ್ಯ ಹುಟ್ಟಿಸುತ್ತದೆ. ಇಂಥ ವಿಪರ್ಯಾಸಗಳು ನಮ್ಮ ಗೊಂದಲಗಳಿಗೆ ಆಹಾರವಾಗುತ್ತಿವೆಯೇ ವಿನಾ ಪರಿಹಾರವಾಗುತ್ತಿಲ್ಲ.

ಸ್ವಾತಂತ್ರ್ಯೋತ್ತರ ಭಾರತದಲ್ಲಿ ಯಾವುದೇ ಸರಕಾರದ ಆಡಳಿತ ಬಂದರೂ ಪರ್ಯಾಯ ಹಾಗೂ ಪರಿಹಾರ ಈ ಎರಡೂ ವಿಷಯದ ಸುದೀರ್ಘ ಚರ್ಚೆ-ಚಿಂತನೆ ಇದುವರೆಗೆ ನಡೆದುದೇ ಇಲ್ಲ. ದೇಶಕ್ಕೆ ಇದೊಂದು ಬಹು ದೊಡ್ಡ ಕೊರತೆಯಾಗಿದೆ. ನಾವು ಮತ ಚಲಾವಣೆಯ ಪ್ರಜೆಗಳಾಗಿದ್ದೇವೆ. ಜೀವನ ಚಲಾವಣೆಯ ನಾಗರಿಕರಾಗುವುದು ಯಾವಾಗ? ಇದು ಆತ್ಮಾವಲೋಕನ ಪ್ರಶ್ನೆಯಾಗಬೇಕೋ ಉತ್ತರವಾಗಬೇಕೋ...! ಒಂದು ಭಾಷೆಯ ಬೆಳವಣಿಗೆಯ ಜತೆಗೆ ಉಳಿದ ಭಾಷೆಗಳು ಭೋರ್ಗರೆಯದಿದ್ದರೂ ಹರಿಯುತ್ತ ಮುಂದೆ ಸಾಗಿದರೆ ಜೀವಂತಿಕೆಯ ಸಾಗರವನ್ನು ಸೇರುತ್ತವೆ.

ದಕ್ಷಿಣ ಭಾರತದವರಾದ ನಾವು ನಮ್ಮ ಕನ್ನಡ ಭಾಷೆಯ ಅವಸಾನ ನಡೆದಿದೆ ಎಂದು ಭಾವಿಸಿದ್ದೇವೆ. ಹಾಗಿಲ್ಲ ಇದು. ಕನ್ನಡ ಭಾಷೆಯ ಸಮೃದ್ಧಿಯ ಅಂತರಂಗವನ್ನು ನಾವು ಕಂಡುಕೊಳ್ಳಬೇಕಾದ ಚಿಂತನೆಗೆ ತೊಡಗಬೇಕಾಗಿದೆ. ಕನ್ನಡ ಭಾಷಾ ಸಾಹಿತ್ಯ ಇಂದು ವಿಶ್ವವ್ಯಾಪಿ ಹಾಗೂ ಪ್ರಿಯವಾಗಿ ಬೆಳೆಯುತ್ತಿದೆ.

ಇದು ಪರಿವರ್ತನಾ ಸಮೃದ್ಧಿಯ ಸಂಕೇತವಾಗಿದೆ. ಈಗ **ಕರ್ನಾಟಕದ ಸುತ್ತಲೂ ಈ ಭಾಷೆಯ ಸಮೃದ್ಧಿಯನ್ನೊಳಗೊಂಡು ಹೊಸ ಭಾಷೆಯೊಂದು ಹುಟ್ಟುತ್ತಿದೆ!** ಹೊಸ ಭಾಷೆಯ ಪಿಂಡ ಈಗ ಭ್ರೂಣವಾಗಿದೆ! ಒಂದು ಭಾಷೆಯ ಹುಟ್ಟು ಮತ್ತು ಬೆಳವಣಿಗೆ ಹೊಸ ಭಾಷೆಗೆ ನಾಂದಿ. ಅದು ಒಂದು ಭಾಷೆಯ ಪರಿವರ್ತನೆ ಇರಬಹುದು. ಹೊಸ ಸೃಷ್ಟಿಯೂ ಎನಿಸಬಹುದು. ಬಹುಭಾಷೆಗಳ ಸಮ್ಮಿಶ್ರಣವೇ ಹೊಸ ಭಾಷೆಯ ಸೃಷ್ಟಿಗೆ ಕಾರಣ. ಈಗ ನಾವು ನಮ್ಮ ಚಿಕ್ಕ ಮಕ್ಕಳನ್ನು ಗಮನಿಸಿದರೆ ನಮಗೆ ತಿಳಿಯುತ್ತಿದೆ. ಮಗುವೇ ಭಾಷೆಯ ತಾಯಿ. ತಾಯಿ ಭಾಷೆಗೆ ಮಗುವೇ ತಾಯಿ. ಭಾಷಾ ಸಮ್ಮಿಶ್ರ ಪದಗಳು ಮಕ್ಕಳಲ್ಲಿ ಬಳಕೆಯಾದಾಗ ನಮಗೆ ನಗು ಬರುತ್ತದೆ. ಆ ಮಕ್ಕಳ ಮಾತು ನಮ್ಮ ನಗೆಗೆ ಕಾರಣವಾಗುತ್ತದೆ. ಆದರೆ ಆ ಮಕ್ಕಳಲ್ಲಿಯೇ ಆ ಭಾಷೆ ಹುಟ್ಟತೊಡಗಿರುತ್ತದೆ. ಮತ್ತು ಅನಕ್ಷರಸ್ಥ ಜನಸಾಮಾನ್ಯರನ್ನು ಗಮನಿಸಬೇಕು. ಅವರಾಡುವ ಮಾತುಗಳತ್ತ ಒಂದಿಷ್ಟು ಲಕ್ಷ್ಯವಿಟ್ಟು ಗಮನಿಸಬೇಕು. ಆಗ ಗಮನಿಸಿದ ಸುಶಿಕ್ಷಿತರಿಗೆ ಮಜಾ ಬರುತ್ತದೆ. ನಗೆ ತರಿಸುತ್ತದೆ. ಭೇದವೂ ಹುಟ್ಟುತ್ತದೆ. ಈ ಭಾಷಾ ಭೇದವೂ ಕೂಡ ವರ್ಗಭೇದಕ್ಕೆ ಹತ್ತಿರವಾಗಿಬಿಡುತ್ತದೆ. ಒಂದು ಭಾಷೆ ಯಾವಾಗಲೂ ಅಜ್ಞಾನದಲ್ಲಿಯೇ ಹುಟ್ಟುತ್ತದೆ. ಅದು ಅಪಭ್ರಂಶವೇ ಆಗಿರುತ್ತದೆ. ಶಿಷ್ಟರಿಗೆ ಅಸಹ್ಯ ತರಿಸುತ್ತದೆ. ಆದರೆ ಹೀಗೆ ಹುಟ್ಟಿದ ಭಾಷೆಯೇ ನಾಳೆ ಸುಶಿಕ್ಷಿತರಿಂದ ಸಂಸ್ಕಾರಗೊಂಡು ಶಿಷ್ಟಸ್ಥಾನಕ್ಕೆ ಏರುತ್ತದೆ. ಇಲ್ಲವೆ ಆಡುಭಾಷೆಯಾಗಿ ಸಮ್ಮಿಶ್ರಗೊಂಡು ಬೆಳೆಯುತ್ತದೆ. ಈಗ ಕನ್ನಡ, ತೆಲುಗು, ತಮಿಳು, ಮರಾಠಿ, ಹಿಂದಿ, ಉರ್ದು, ಕೊಡವ ಮುಂತಾದ ಭಾಷೆಗಳನ್ನೊಳಗೊಂಡು ಒಂದು ಭಾಷೆ ನಮ್ಮಲ್ಲಿ ಹೊಟ್ಟತೊಡಗಿದೆ. ಆ ಭಾಷೆಯನ್ನು ಕನ್ನಡ ಭಾಷೆಯ ಪರಿವರ್ತನಾ ರೂಪವೆನ್ನಬಹುದು. ಈ ದಿಶೆಯಲ್ಲಿ ಭಾಷಾ ಚಿಂತಕರು ಗಮನಹರಿಸಬೇಕು. ಕರ್ನಾಟಕದ ಯಾವುದೇ ಗಡಿಯಲ್ಲಿ ಅಥವಾ ಗಡಿಯ ಒಳಗೆ ಅಥವಾ ಗಡಿಯ ಹೊರಗೆ ವಾಸಿಸುವವರಿಗೆ ಮಾತ್ರ ಇದು ವೇದ್ಯವಾಗುತ್ತದೆ. ನಡುನಾಡ ಜನರಿಗೆ ತಡವಾಗಿ ತಿಳಿಯುತ್ತದೆ. **ಈ ಭಾಷೆ ವಿಶಿಷ್ಟವಾದುದು ಹೌದು, ಸಮ್ಮಿಶ್ರವೂ ಹೌದು, ಹೊಸದೂ ಹೌದು. ಇದು ಅಚ್ಚಗನ್ನಡದ ದೇಟಿಗೆ ಟಿಸಿಲೊಡೆದ ಭಾಷೆ.** ಈ ಪ್ರದೇಶವು ನಿಜವಾದ ಕನ್ನಡಿಗರು ವಾಸಿಸುವ ನೆಲವಾಗಿದೆ. ಈ ಸಂಗತಿಯು ನಡುನಾಡ ಜನರಿಗೆ ತಡವಾಗಿ ತಿಳಿಯುತ್ತದೆ.

ಇನ್ನೊಂದು ಬಹಳ ಮುಖ್ಯವಾದ ಸಂಗತಿಯೆಂದರೆ, ಭಾರತೀಯ ಬಹುಭಾಷೆಗಳಲ್ಲಿ ಅಂದರೆ ಕಾಶ್ಮೀರದ ಕಾಶ್ಮೀರಿ ಭಾಷೆಯನ್ನೊಳಗೊಂಡು ಬೆಂಗಾಲಿ, ಮರಾಠಿ, ತೆಲುಗು, ಕನ್ನಡ, ತಮಿಳು ಮೊದಲಾದ ಭಾಷೆಗಳು ಮತ್ತು ಈ ಭಾಷೆಗಳ ಸಾಹಿತ್ಯ ಉಚ್ಛ್ರಾಯವಾದುದೆಂದು ಹೇಳುವುದರಲ್ಲಿ ತುಂಬ ಸತ್ಯವಿದೆ. ಆದರೆ ಇಂದು ಉತ್ತರ ಭಾರತದ ತುತ್ತತುದಿಯ ಕಾಶ್ಮೀರದ ಕಾಶ್ಮೀರಿ ಭಾಷೆಯ ಸ್ಥಿತಿಯೇನಾಗಿದೆ? ವಿಸ್ಥಾಪಿತ ಸಂಸ್ಕೃತಿಯಿಂದ ಕಾಶ್ಮೀರಿ ಭಾಷೆ ಬೆಳೆಯುತ್ತಿರುವ ಭಾಷೆಯಾಗಿದ್ದು ಈಗ ಪಲಾಯನ ಸಂಸ್ಕೃತಿಯಿಂದಾಗಿ ಈ ಭಾಷೆ ಅವಸಾನದ ಹಾದಿ ಹಿಡಿದಿದೆ. ಆದರೆ ಈ ಕಾಶ್ಮೀರಿ ಭಾಷೆಗೆ ಇರುವ ಬಂಧನಗಳನ್ನು ಗಮನಿಸಿದರೆ, ಕಾಶ್ಮೀರಿ ಭಾಷಾ ಸಾಹಿತ್ಯ ಭಾರತದಾದ್ಯಂತ ಸಂಪರ್ಕವನ್ನು ಕಡಿದುಕೊಳ್ಳುತ್ತಿದೆ. ಆದರೆ ಕಾಶ್ಮೀರಿ ಸಾಹಿತ್ಯ ಭಾರತದ ಹೊರಗೆ ಹೆಚ್ಚು ಪ್ರಚಲಿತವಾಗುತ್ತಿದೆ. ಯಾಕೆಂದರೆ, ಕಾಶ್ಮೀರದ ಜೀವನ ಚಿಂತನೆ ಭಾರತೀಯರಿಗೆ ಮಾತ್ರ ಚಿಂತೆಗೀಡುಮಾಡಿಲ್ಲ, ಇಡೀ ಜಗತ್ತಿನ ಚಿಂತನೆಗೆ ಕಾರಣವಾಗಿದೆ ಮತ್ತು ಅಷ್ಟೇ ಭಾರತದ ಹೊರಗಿನವರಿಗೆ ಕುತೂಹಲಕ್ಕೂ ಕಾರಣವಾಗಿದೆ. ಅಲ್ಲಿ ನಿರ್ವಾಸನ ಸಾಹಿತ್ಯ ಹುಟ್ಟುತ್ತಿರುವುದು ಇಂದು ಅನಿವಾರ್ಯವಾಗಿದೆ. ಈ ಹತ್ಯಾಕಾಂಡದ – ಈ ವಧಾ ಸ್ಥಿತಿಯಿಂದ ಹುಟ್ಟಿಕೊಂಡ ಸಾಹಿತ್ಯದ ಒಳ ಚಿಂತನೆಗಳು ನಕಾರಾತ್ಮಕವಾಗಿ ದೇಶದ ಹೊರಗಿನವರಿಗೆ ಮಾಂಸಾಹಾರದ ತೃಪ್ತಿಯನ್ನು ನೀಡುತ್ತಿದೆ. ಹೀಗಾಗಿ ಕಾಶ್ಮೀರಿ ಭಾಷೆಯ ಅವಸಾನ – ಕಾಶ್ಮೀರಿ ಸಾಹಿತ್ಯದ ಉಚ್ಛ್ರಾಯ ಎರಡೂ ಏಕಕಾಲಕ್ಕೆ ನಡೆದಿದೆ. ಇದರಂತೆ ಕನ್ನಡ ಭಾಷೆಯ ಪರಿವರ್ತನೆ ಹಾಗೂ ಕನ್ನಡ ಸಾಹಿತ್ಯದ ವಿಶ್ವವ್ಯಾಪಿ ವಿಸ್ತಾರ ನಡೆದೇ ಇದೆ. ಇದು ನನ್ನ ತಿಳುವಳಿಕೆಗೆ ಹೊಳೆದ ಚಿಂತನೆಯಾಗಿದೆ. ಈ ಚಿಂತನೆ ಸರಿಯೋ ತಪ್ಪೋ ನಿಷ್ಕರ್ಷಿಸುವುದು ದೇಶೀ ಚಿಂತಕರಿಗೆ – ರಾಷ್ಟ್ರೀಯ ಚಿಂತಕರಿಗೆ ಬಿಟ್ಟಿದ್ದಾಗಿದೆ. ಚಿಂತನೆಗೊಂದು ಹೊಸ ಸಂಗತಿ ಹೊಳವನ್ನು ತಮ್ಮ ಗಮನಕ್ಕೆ ತಂದಿದ್ದೇನಷ್ಟೆ: ಮನಸ್ಸಿಗೆ ಹೊಳೆದದ್ದನ್ನು ತಿಳಿದದ್ದನ್ನು ಹಂಚಿಕೊಳ್ಳುವ ಅಭಿವ್ಯಕ್ತಿ ನನ್ನದಾದರೆ, ವಾದ-ವಿವಾದ -ಚರ್ಚೆ ನಡೆದರೆ ನನ್ನ ವಿಚಾರವು ಸಾರ್ಥಕವಾಯಿತೆಂದು ತಿಳಿಯುತ್ತೇನೆ. ಮತ್ತು ಇದು ನನ್ನ ವೈಯಕ್ತಿಕತೆಗೆ ನೆಮ್ಮದಿ ತರುವುದಲ್ಲ– ಕನ್ನಡ ಭಾಷೆಯ ಪರಿವರ್ತನೆಗೆಂದು ಭಾವಿಸುತ್ತೇನೆ.

ಸೃಜನಶೀಲ ಸಾಹಿತ್ಯದ ರಚನೆಯಲ್ಲಿಯೇ ಹೆಚ್ಚಿನ ಕೃಷಿ ನಡೆಯುತ್ತಿರುವುದರಿಂದಲೇ ಭಾಷಾ ಸಮೃದ್ಧಿ ಅಡಗಿರುತ್ತದೆ. ಕರ್ನಾಟಕದಲ್ಲಿ ಮರಾಠಿ ಭಾಷೆಯ ಭ್ರೂಣವಾಗುತ್ತಿರುವಾಗ ಕನ್ನಡ ಭಾಷೆಯು ಉಚ್ಛ್ರಾಯದ ಸ್ಥಿತಿಯಲ್ಲಿತ್ತು. ಇದು ಕರ್ನಾಟಕದಲ್ಲಿ ಹುಟ್ಟಿಕೊಂಡ ೮-೯ ನೂರು ವರ್ಷಗಳ ಇತಿಹಾಸ ಮಾತ್ರ ಇದಕ್ಕಿದೆ. ಆದರೆ ಬೆಳವಣಿಗೆಯಲ್ಲಿ ಕನ್ನಡಕ್ಕೆ ಕಡಿಮೆ ಎನಿಸಿಲ್ಲ. ದಲಿತ ಸಾಹಿತ್ಯದ ಪ್ರಗತಿಯಿಂದ ಮರಾಠಿ ಭಾಷೆಗೂ ಒಂದು ಸ್ಥಾನಮಾನ ಲಭಿಸಿದೆ. ಕನ್ನಡ ನಾಟಕಗಳ ಪ್ರಭಾವದಿಂದ ಮರಾಠಿ ತಮಾಷಾಗಳು ಹೆಚ್ಚಿ ಜನಪ್ರಿಯವಾಗಿವೆ. ಭಾರತೀಯ ಸಾಹಿತ್ಯದಲ್ಲಿ ಇದುವರೆಗೆ ಹೆಚ್ಚು ಗೌರವ ಲಭಿಸಿರುವುದು ಮಿಥಿಕ್ ಸಾಹಿತ್ಯಕ್ಕೆ ಮಾತ್ರ. ಈ ಮಿಥಿಕ್ ಸಾಹಿತ್ಯದ ಮೂಲ ಭಾರತೀಯ ಕೆಲವೇ ಕೆಲವು ಭಾಷೆಗಳಿಗೆ ಸಂಸ್ಕೃತ ಭಾಷೆಯ ಅಧ್ಯಯನ ಚಿಂತನೆಯ ಫಲವಾಗಿದೆ.

ಕೇಂದ್ರ ಸರಕಾರದ ಶಾಸ್ತ್ರೀಯ ಸ್ಥಾನಮಾನವು ತಮಿಳು ಭಾಷೆಗೆ ಲಭಿಸುವುದರಲ್ಲಿ ಕಿಂಚಿತ್ತು ತಪ್ಪಿಲ್ಲ. ನಮ್ಮ ಸಂವಿಧಾನಿಕ ಶಿಸ್ತಿನ ಪ್ರಯತ್ನ ಕನ್ನಡ ಭಾಷಿಕರಲ್ಲಿ ಇರುವುದಾದರೆ ಅದೇ ಹೊತ್ತಿನಲ್ಲಿ ಕನ್ನಡ ಭಾಷೆಗೂ ಶಾಸ್ತ್ರೀಯ ಭಾಷೆಯ ಸ್ಥಾನಮಾನದ ಗೌರವ ಲಭಿಸಿಯೇ ಲಭಿಸುತ್ತಿತ್ತು. ಈ ವಿಳಂಬವು ನಮ್ಮ ನಿರ್ಲಕ್ಷ್ಯಕ್ಕೆ ಕಾರಣವಾಗಿದೆ ಹೊರತು, ತಮಿಳು ಜನರ ಮೇಲೆ ಅಸೂಯೆ ಪಡುವುದು ಮಾನವೀಯತೆಯಲ್ಲ. ಹಾಗೆ ನೋಡಿದರೆ ಅವರು ನಮಗೆ ಅನುಸರಣೀಯರಾಗಿದ್ದಾರೆ. ಅವರಿಂದ ನಾವು ಎಚ್ಚೆತ್ತುಕೊಂಡಾದರೂ ಬೇಗ ಸಂತೃಪ್ತರಾಗಬೇಕು. ಶಾಸ್ತ್ರೀಯ ಭಾಷೆಯ ಬೆಳವಣಿಗೆಯ ಮೂಲ ಲಕ್ಷಣ ಹಿಂದಿನವರ ಅಧ್ಯಯನ ಸಿದ್ಧಾಂತಗಳನ್ನು ಬಳಸಿಕೊಂಡು ವಿಶ್ಲೇಷಣೆಗೆ ತೊಡಗಿಕೊಳ್ಳಬೇಕು. ನಮ್ಮ ಭಾಷೆಯ ಸ್ಥಾನಮಾನದ ಪ್ರಯತ್ನಕ್ಕೆ ಯಾವುದೇ ವ್ಯಕ್ತಿಗತ ಆಧಾರ ನಂಬಿಕೆಗಳಲ್ಲಿ ವಿಶ್ವಾಸವಿರಿಸಿ ಅಂಥವರ ಸಿದ್ಧಾಂತಗಳನ್ನು ಚಿಂತನ-ಮಂಥನಗಳಿಗೆ ಬಳಸಿಕೊಂಡು ವಿವೇಚಿಸುವ ದಾರಿ ಸೂಕ್ತವಾದುದು. ಭಾಷೆಗಳ ಕೆಲಸವು ಮನಸ್ಸುಗಳನ್ನು ಬೆಸೆಯುವುದೆಂದು ತಿಳಿದು ಬದುಕಿದರೆ ನಮ್ಮ ಬದುಕು ಜೀವನಗಳು ಹಸನಾಗುತ್ತವೆ.

ಕನ್ನಡ ಸಾರಸ್ವತ ಲೋಕದಲ್ಲಿ ಮಾತ್ರವಲ್ಲ, ಇಡೀ ಭಾರತೀಯ ಸಾರಸ್ವತ ಲೋಕದಲ್ಲಿ ಇಂದು ಹೆಚ್ಚು ಚರ್ಚಿತ ಸಂಗತಿಯೆಂದರೆ ಸಾಹಿತಿಯ ಬದುಕು ಮತ್ತು ಬರಹ ಒಂದೇ ಆಗಿರಬೇಕೆಂದು ಬಯಸುವುದಾಗಿದೆ. ಈಗ ಪ್ರಸ್ತುತ ವ್ಯವಸ್ಥೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಜನಜೀವನದಲ್ಲಿ ಹೊಸ ಚಿಂತನೆಯೊಂದು ಶುರುವಾಗಿದೆ. ಆ ಹೊಸ ಚಿಂತನೆಗೆ ಕೇವಲ ರಾಜಕೀಯ ವಿಪರ್ಯಾಸ ಮಾತ್ರ ಕಾರಣವಲ್ಲ – ಸಾಹಿತಿಗಳ ಜೀವನ ರೀತಿಯೂ ಕಾರಣವಾಗಿದೆ. ಹೀಗಾಗಿ ಈಗ ಚರ್ಚಿತ ಸಂಗತಿಯೆಂದರೆ ಸಾಹಿತಿಯ ಬದುಕು ಮತ್ತು ಬರಹ ಒಂದೇ ಆಗಿರಬೇಕೋ ಬೇಡವೋ ಎಂಬುದು. ಜಗತ್ತಿನ ಸಾಹಿತ್ಯ ಲೋಕವನ್ನು ನಾವು ಗಮನಿಸಿದಾಗ ಪ್ರತಿಯೊಬ್ಬ ಬರಹಗಾರನ ಬದುಕು ಮತ್ತು ಬರಹ ಒಂದೇ ಆಗಿರುತ್ತದೆ. ಆದರೆ ಜೀವನ ಮಾತ್ರ ಭಿನ್ನವಾಗಿರುತ್ತದೆ! ಅದು ಭಿನ್ನವಾಗಿರಬೇಕು ಕೂಡ!! ಯಾಕೆಂದರೆ ಬದುಕು ಬೇರೆ – ಜೀವನ ಬೇರೆ. ಬದುಕು ಮತ್ತು ಜೀವನಕ್ಕೆ ಅರ್ಥವ್ಯತ್ಯಾಸವಿದೆ. ಜೀವನವು ಸಾರ್ವತ್ರಿಕ ಸಂಹಿತೆಗೆ ಒಳಪಟ್ಟಿದೆ; ಅದಕ್ಕೊಂದು ಚೌಕಟ್ಟಿನ ಮಿತಿಯಿದೆ. ಬದುಕು ವೈಯಕ್ತಿಕ ಸಂಹಿತೆಗೆ ಒಳಪಟ್ಟಿದೆ. ನಾನು ಬೆತ್ತಲೆಯೇ ಇರುತ್ತೇನೆಂದರೆ ಬದುಕು ಸಹಿಸುತ್ತದೆ. ಆದರೆ ಜೀವನ ಅದನ್ನು ಸಹಿಸುವುದಿಲ್ಲ. ಬೆತ್ತಲಿರುವುದು ಅಸತ್ಯ. ನೋಡಿದವರೇನೆಂದು

## ಪಾಲು

ಹೆಣ್ಣು ಪಾಲಾಗಿದೆ
ಹೊನ್ನು ಪಾಲಾಗಿದೆ
ಮಣ್ಣು ಪಾಲಾಗಿದೆ
ಯುದ್ಧ ವ್ಯಾಪಾರ
ಮದುವೆ ವ್ಯಭಿಚಾರ
ನೇರ ದರೋಡೆಗಳಲ್ಲಿ.

ಬಸವರಾಜ ವಕ್ಕುಂದ
೧೨/೫, ವಸ್ತ್ರದ ಬಿಲ್ಡಿಂಗ್, ಬಾಲಬಳಗ ಎದುರು
ಮಹಿಷಿ ರಸ್ತೆ, ಧಾರವಾಡ - ೭

ಕೊಂಡಾರು ಎನ್ನುತ್ತದೆ. ಜೀವನ ಅಂದರೆ ಸರ್ವರೊಳು ಸಹ್ಯವಾಗಿರಬೇಕು ಎಂದಾಯಿತು. ಜೀವನವು ಸಾರ್ವತ್ರಿಕವಾದುದು. ಸಾರ್ವತ್ರಿಕ ಜೀವನವು ಗತಿಶೀಲ ವಾದುದು. ಹೀಗಾಗಿ ಜೀವನವು ಅನೇಕ ಸಂಹಿತೆಗಳನ್ನು ಅನುಸರಿಸಿಕೊಂಡು ಜೀವಿಸ ಬೇಕಾಗುತ್ತದೆ. ಈ ಸಂಹಿತೆಗಳು ಜಾಗತಿಕ ಸುಖಕ್ಕೆ- ಸಮೃದ್ಧಿಗೆ ಸಂಬಂಧಿಸಿರುತ್ತವೆ. ಆದರೆ ಇಂದು ಈ ರೀತಿಯ ಸಂಹಿತಾತ್ಮಕ ಜೀವನವು ಅರ್ಥ ಕಳೆದುಕೊಂಡಿದೆ. ಇವುಗಳ ವ್ಯವಸ್ಥೆ ದುರವಸ್ಥೆಗಿಳಿದಾಗ, ಸಾಹಿತಿಯ ಬದುಕು ಮತ್ತು ಜೀವನಗಳ ನಡುವೆ ವ್ಯತ್ಯಾಸವಾಗಿರುವುದು ಸಹಜವಾಗಿದೆ. ನನಗೆ ಈ ಯಾವ ಬಂಧನ-ಗೊಡವೆಗಳೂ ಬೇಡ, ನಾನು ಈ ಲೌಕಿಕ ಸಂಪರ್ಕದಿಂದ ದೂರ ಹೋಗಿ ಇರುತ್ತೇನೆಂದುಕೊಂಡು ಒಬ್ಬ ಬರಹಗಾರ ಅಡವಿ ಸೇರಿಕೊಂಡರೂ ಆ ಅಡವಿಯೂ ಕೂಡ ಸಾರ್ವತ್ರಿಕ ಸಂಹಿತೆಗೆ ಒಳಪಟ್ಟಿರುತ್ತದೆ. ಅದಕ್ಕೂ ಒಪ್ಪಿಗೆಯನ್ನು ಪಡೆಯುವ ಅಗತ್ಯವಿದೆ. ಇದೇ ಸಂಹಿತೆಗೆ ಬದ್ಧವಾದದ್ದು– ಇದೇ ಜೀವನ.

ಹೀಗೆ ಬದುಕು ಕೂಡ ಸಕಲ-ಸೌಕರ್ಯ-ಸೌಲಭ್ಯಗಳನ್ನು ಅಪೇಕ್ಷಿಸ ಬೇಕಾಗುತ್ತದೆ. ಈ ಅಪೇಕ್ಷೆಯ ಅನಿವಾರ್ಯತೆಗನುಗುಣವಾಗಿಯೇ ಜೀವನ ಸಂಹಿತೆಗಳು ರೂಪಗೊಂಡಿವೆ. ಹೀಗಾಗಿ ಬದುಕಿನ ನಿರ್ವಹಣೆಯು ಜೀವನವನ್ನು ಆಧರಿಸಿಕೊಂಡಿದೆ. ಆಧರಿಸಿಕೊಂಡ ಜೀವನ ಸಂಹಿತೆಗಳು ಕಾಲಮಾನಕ್ಕೆ ತಕ್ಕಂತೆ ಬದಲಾವಣೆಯಾಗುತ್ತಲೇ ಇರುತ್ತವೆ. ಆದರೆ ಈ ಬದಲಾವಣೆಯನ್ನು ಗಮನಿಸದೆಯೇ ಸಂಹಿತೆಗಳು ಹಾಗೆಯೇ ಮುಂದುವರೆದುಕೊಂಡು ಸಾಗಿರುತ್ತವೆ. ಆದರೆ ಜೀವನಕ್ಕೂ ಸಂಹಿತೆಗೂ ಹೊಂದಾಣಿಕೆ ಆಗದೆಯೇ ಹೋಗಬಹುದು. ಹೀಗಾಗಿ ನೈಜ ಜೀವನಕ್ಕೆ ಈ ಸಂಹಿತೆಗಳು ಸರಿಹೊಂದದೆ ವ್ಯತಿರಿಕ್ತವಾಗಿಯೂ ಇರುವುದು ವಿಪರ್ಯಾಸ ವಾಗಿದೆ. ಹೀಗಾಗಿ ಜೀವನದಲ್ಲಿ ಏರು-ಪೇರು-ವ್ಯತ್ಯಾಸಗಳು ಜರುಗುತ್ತವೆ. ಇದನ್ನೇ ನಾವು ವ್ಯವಸ್ಥೆ-ದುರವಸ್ಥೆ-ಅವಸ್ಥೆ ಇತ್ಯಾದಿ ಮಾನಸಿಕ ಅತಂತ್ರಗಳಲ್ಲಿ ನೋಡಿ ಕೊಳ್ಳುತ್ತೇವೆ. ಇಂಥ ಜೀವನದಲ್ಲಿ ಅನೇಕ ಸಂಹಿತೆಗಳು ನಮ್ಮನ್ನು ಸಹಜ ಬದುಕಿಗೆ ಬಿಡುವುದಿಲ್ಲ. ಈ ಅಸಹಜಗಳನ್ನು ಪರಿವರ್ತಿಸುವುದೇ ಸಾಹಿತ್ಯದ ಧ್ಯೇಯ ವಾಗಿರುತ್ತದೆ. ಹೀಗಾಗಿ ಸಾಹಿತಿಯ ಬದುಕು ಮತ್ತು ಬರಹ ಒಂದೇ ಆಗಿದ್ದರೂ ಜೀವನ ಭಿನ್ನವಾಗಿರುತ್ತದೆ. ಹಾಗೆ ಆಗಿರುವುದು ಅನಿವಾರ್ಯ. ಆದರೂ ಈ ಸಂಹಿತೆ ಗಳನ್ನು ತೊರೆದು ಬದುಕುವುದು ಅನಾಗರಿಕತೆಯೆನಿಸುತ್ತದೆ. ಹೊಂದಿಕೊಂಡು ಬದುಕುವುದು ಒಮ್ಮೊಮ್ಮೆ ನಿರರ್ಥಕ. ಈ ಸಂಹಿತೆಗಳ ಪರಿವರ್ತನೆಗಾಗಿ ಈ ಬರಹಗಾರ ಸದಾ ಹೋರಾಟ ಮಾಡಬೇಕಾಗುತ್ತದೆ. ಇದು ಆಶಾವಾದಿ ಚಿಂತಕನ ದೃಷ್ಟಿಕೋನ.


**ಅರ್ಜುನ ಕೋರಟಕರ 'ಭಾವಜ್ಞ'**
ಶ್ರೀ ರಾಘವೇಂದ್ರ ಬೋರ್ಡಿಂಗ್, ಜಮಖಂಡಿ - ೫೮೭ ೩೦೧




# ಕ್ಷಮಿಸು ಸೂರ್ಯನೇ

ಪ್ರತಿ ಬೆಳಗೂ ಹೊಸ ಆಸೆಯಿಂದ
ಅಕ್ಷರಗಳ ತಬ್ಬುತ್ತೇನೆ
ಹೇಳುತ್ತೇನೆ ಆ ಹಕ್ಕಿಯಂತೆ –
ಹಾಡೆಂದರೆ ಮಗು ಅದು ಬರಿಯ ದನಿಯಲ್ಲ
ಎದೆಯ ಉರಿ
ಬಣ್ಣವೆಂದರೆ ಅದು ರಂಗಲ್ಲ, ರಾಗನದಿ
ಹಸಿರಿಗೋ ಹತ್ತಾರು ಹೊಸ ರೂಪ
ನಿತ್ಯ ನಿಯತಿ
ಮೂಲೆಯಿಂದಲ್ಲೊ ತೂರುವ
ತಲೆಕಾಣದ ಸದ್ದು –
'ಹಸಿರಿಗಿಲ್ಲಿ ನಿಷೇಧವಿದೆ'
'ಸಂಜೆ ಕೂಟು ಕೂಟುಗಳಲಿ ಚರ್ಚೆ, ಎಚ್ಚರಿಕೆ'
'ನಿಷೇಧಗಳನ್ನು ಬಿಗಿಗೊಳಿಸಿ'
ಸೂರ್ಯನಿಗೆ ನೆತ್ತರುಂಡ ಬವಳಿ

ಎಷ್ಟೆಲ್ಲಕೂ ಸಾಕ್ಷಿಯಾದವನಿಗೆ
ಕಟಕಟೆಯಲಿ ನಿಲ್ಲಲನುವಿಲ್ಲ
ದನಿಯಿಲ್ಲ
ತನ್ನ ಮಾತ ಮುಟ್ಟಿಸಲು
ಚಿತ್ತಾರ ಬರೆಯುತ್ತಲೇ ಇರುವ
ಲಕ್ಷ ಹಕ್ಕಿಗಳ ಕೊರಳಲ್ಲಿ ಹಾಡು ಹೊಸೆವ
ಅವನ ಭಾಷೆಯೋ
ಒಂದೊಂದು ಕಿರಣಕ್ಕೆ ಒಂದೊಂದು ರಂಗೋಲಿ
ಒಂದೊಂದು ಉಸಿರಿಗೆ ಒಂದೊಂದು ಹೂ
ಬಣ್ಣದಲಿ ಹಕ್ಕಿಯಲಿ ಹೂವಿನಲಿ ನೆರಳಲ್ಲಿ
ಮಾತಾಡುತ್ತಲೇ ಇರುವ ಸಂಯಮಿ
ಏನಾದರಾಗಬೇಕು ದಿಢೀರನೆ
ಎಂದು ಹೊರಟಿದೆ ಹಿಂಡು
ಅಲಿಬಾಬಾನ ಚಾಪೆಯದೇ ಕನಸು

ಇಲ್ಲಿ ಹಾಡಿಲ್ಲ ಕೊಳಲಿಲ್ಲ ಇಲ್ಲ ಬಣ್ಣ
ಆ ಪಂಪನೆಂಬ ಮುತ್ತಜ್ಜನ ಒಂದು ಪಂಕ್ತಿ
ನನ್ನ ಜೋಳಿಗೆಯಲ್ಲಿ
ಬನವಾಸಿಯ ಬಕುಲದ ಗಂಧ
ಕದಳಿಯ ಬನವ ಮಿಥಿಲೆಯ ಮಣ್ಣ
ಬಣ್ಣಿಸಲೀಗ ತಾವಿಲ್ಲ
ಕಣ್ಣ ಬೋರ್ಡಿನಲ್ಲೊಂದು ಪ್ರಶ್ನೆ
ಅನವರತ –
ಈ ಮಾತಿಗೆ ಎಷ್ಟು ಮಾರ್ಕು ?
ಇದು ಉತ್ತರದ ಎಷ್ಟನೇ ಪಾಯಿಂಟು ?
ಎಷ್ಟೆಲ್ಲ ಹೇಳುತ್ತೀರಿ, ಪಾಪ ದಣಿಯುತ್ತೀರಿ.
ಗೌರವವಿದೆ ನಿಮ್ಮ ಬಗ್ಗೆ
ಈ ಸ್ಪರ್ಧೆಯ ಕಾಲದಲ್ಲೂ ಗಳಿಕೆಯ ದಾರಿ
ಕಂಡಿದ್ದಕ್ಕೆ
ಒಂದು ಗಂಟೆಯ ನಿಮ್ಮ ಮಾತ
ತಾಳದ ಸದ್ದಿನಂತೆ ಆಲಿಸುತ್ತೇವೆ.
ಉದ್ದಾನ ಉದ್ದದ ಆಯುಷ್ಯದ
ಗಂಟೆಗಳ ಬೇರೀಜಿನಲ್ಲಿ
ಈ ಹೊತ್ತ ವಜಾ ಮಾಡುತ್ತೇವೆ.
ನೆತ್ತರು ಮೆಟ್ಟಿದಂತೆ ಕಸಿವಿಸಿ
ಎಲ್ಲ ಅದಲು ಬದಲು ಕಂಚೀ ಕದಲು
ಇವರ ಬಿಟ್ಟು ಇವರ ಬಿಟ್ಟು ಇವರ್ಯಾರೋ ?
ಇಲ್ಲ ಯಾರಿಗೂ ಅಸಲೀ ಚಹರೆ,
'ಮಾತೆಂಬುದು ಜ್ಯೋತಿರ್ಲಿಂಗ'
ಎಂದ ಅಣ್ಣನೇ ತೋರು ಮುಂಬೆಳಗ.
ಕ್ಷಮಿಸು ಸೂರ್ಯನೇ
ನಾ ನಿನ್ನಷ್ಟು ಕುಶಲಕರ್ಮಿಯಲ್ಲ.


**ಡಾ॥ ವಿನಯಾ**
ಉಪನ್ಯಾಸಕಿ, ಶ್ರೀ ಸಿದ್ಧೇಶ್ವರ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ನರಗುಂದ. ಗದಗ ಜಿಲ್ಲೆ




"ಮರಗಳು ನಮ್ಮ ದಿನನಿತ್ಯದ ಜೀವನದಲ್ಲಿ ಕಾಣಸಿಗುವ ಸಾಮಾನ್ಯ ವಸ್ತುಗಳು." ಹೀಗೆ ಹೇಳುವುದರಲ್ಲಿ ತಪ್ಪು, ಒಂದಲ್ಲ, ಎರಡು. ಮರಗಳನ್ನು ವಸ್ತುಗಳೆನ್ನಬಹುದೇ ? ಅವು ಜೀವರಾಶಿಗಳು. 'ಸಾಮಾನ್ಯ' ಅಂದೆನೆ ? ಮರಗಳಷ್ಟು ಅಸಾಮಾನ್ಯ ಜೀವಿಗಳು ಇನ್ಯಾವುದಾದರೂ ಇರಲು ಸಾಧ್ಯವೆ ? ಮರಗಳ ಬಗ್ಗೆ ಸ್ವಲ್ಪ ಆಳವಾಗಿ ವಿಚಾರ ಮಾಡಿದರೆ, ಅವು ಎಷ್ಟು ಅಮೂಲ್ಯ ಮತ್ತು ಎಷ್ಟು ಅಸಾಮಾನ್ಯ ಜೀವಿಗಳೆಂದು ಅರ್ಥವಾಗುತ್ತದೆ. ಮರಗಳಿಗೆ 'ಮರ' ಎಂಬ ಹೆಸರು ಅವು ಅಮರವಲ್ಲ ಎಂಬ ಕಾರಣದಿಂದ ಬಂದಿರಬಹುದಲ್ಲವೆ ? ಮರಗಳ ಜೀವನ ಶಾಶ್ವತವಲ್ಲ, ನಿಜ, ಆದರೆ ಅವುಗಳ ಬದುಕೆಷ್ಟು ಸಾರ್ಥಕವೆಂದು ನೆನೆದಾಗ ಬೆರಗುಮೂಡುತ್ತದೆ.

ಮರಗಳು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಚಲಿಸಲಾರವು, ಆದರೆ ಅವು ಹುಟ್ಟುತ್ತವೆ, ಬೆಳೆಯುತ್ತವೆ. ಹೂವು, ಹಣ್ಣು ಬಿಡುತ್ತವೆ. ವಂಶಾಭಿವೃದ್ಧಿ ಮಾಡುತ್ತವೆ. ಕಾಲ ಬಂದಾಗ ಸಾಯುತ್ತವೆ. ನಮ್ಮಂತೆ ಮಾತನಾಡಲಾರವು, ಪ್ರಾಣಿಗಳಂತೆ ಕೂಗಲಾರವು. ಅಂದಮಾತ್ರಕ್ಕೆ ಅವಕ್ಕೆ ನೋವು-ನಲಿವು ಇಲ್ಲವೆ ? ಅವು ಹದವಾದ ಮಳೆ-ಎಳೆಬಿಸಿಲಿಗೆ ನಲಿಯುತ್ತ, ಬಿರುಗಾಳಿ-ಮಳೆ-ಬಿರುಬಿಸಿಲಿಗೆ ಬಳಲುತ್ತ ಬದುಕುತ್ತವೆ.

ಮರಗಳಲ್ಲಿ ಎಷ್ಟೊಂದು ವಿಧ ! ಈ ಕಾಲದಲ್ಲಿಯೂ, ನಗರ ಮಧ್ಯದಲ್ಲಿಯೇ ಕಣ್ಣಾಡಿಸಿದರೆ ಹತ್ತಾರು ಮರಗಳು ಕಣ್ಣಿಗೆ ಬೀಳುತ್ತವೆ. ಮಾವು, ಹಲಸು, ಬೇವು ಮುಂತಾದ ಮರಗಳಾದರೂ ಕಾಣಸಿಗುತ್ತವೆ. ಸ್ವಲ್ಪ ಕಷ್ಟಪಟ್ಟು ಕಾಡಿಗೆ ತೆರಳಿದರೆ ಕಾಣಸಿಗುವ ವೃಕ್ಷಗಳು ಲಕ್ಷ, ಲಕ್ಷ! ಮರಗಳನ್ನು ಯಾವ ರೀತಿಯಲ್ಲಿ ವಿಂಗಡಿಸಿದರೂ ವೃಕ್ಷರಾಶಿಗಳನ್ನೇ ಕಾಣಬಹುದು.

ಹಣ್ಣು ಬಿಡುವ ಮರಗಳಲ್ಲೇ ಎಷ್ಟೊಂದು ಬಗೆ ! ಮಾವು, ಗೇರು, ಪೇರಲ, ನೇರಳೆ, ಸಪೋಟದಂತೆ ದಿನನಿತ್ಯ ಕಾಣಬಹುದಾದ ಮರಗಳು. ಹೂ ಬಿಡುವ ಮರಗಳ ಚೆಲುವೇ ಇನ್ನೊಂದು ಬಗೆಯದು. ಸಂಪಿಗೆ, ನಾಗಸಂಪಿಗೆ, ಮರಗಳನ್ನು ಹೂವಿನ ಪರಿಮಳದಿಂದಲೇ ಗುರುತಿಸಬಹುದು. "ಹೂ ಬಿಟ್ಟ ಮುತ್ತುಗದ ಮರಗಳಿಂದ ತುಂಬಿದ ಕಾಡು, ಬೆಂಕಿಯ ಜ್ವಾಲೆಯನ್ನು ಉಗುಳುವಂತೆ ಕಾಣುತ್ತಿತ್ತು" ಎಂದು ಕಾದಂಬರಿಯೊಂದರಲ್ಲಿ ಡಾ॥ ಶಿವರಾಮ ಕಾರಂತರು ವರ್ಣಿಸುತ್ತಾರೆ. ಪರಿಮಳಭರಿತ ಪುಟ್ಟ ಸುರಗಿ ಹೂವುಗಳು ಬಿಡುವುದು ದೊಡ್ಡ ಮರಗಳಲ್ಲಿ ಎಂದರೆ ಅಚ್ಚರಿಯಾಗದೇ ? ಸುಕೋಮಲ ಬಕುಲದ ಹೂ ಕೂಡ ಬೃಹತ್ ವೃಕ್ಷದಲ್ಲಿಯೇ ಅರಳುತ್ತದೆ. ಅಶೋಕ ವೃಕ್ಷದ ಚೆಲುವು ಆದಿಕವಿ ವಾಲ್ಮೀಕಿಯ ರಾಮಾಯಣದಿಂದಾಗಿ ಅಮರವಾಗಿದೆ. ನಮಗೆ ಹೆಸರು ಗೊತ್ತಿರದ ಹಣ್ಣು-ಹೂವುಗಳನ್ನು ನೀಡುವ ಮರಗಳೆಷ್ಟಿವೆಯೋ ?

ಇನ್ನು ನಮ್ಮ ಧಾರ್ಮಿಕ ಕಾರ್ಯಗಳಿಗೆ ಬೇಕಾದ ಅಶ್ವತ್ಥ, ಆಲ, ಅತ್ತಿ, ಗಂಧ, ಬಿಲ್ವಪತ್ರೆ ಮುಂತಾದ ಪವಿತ್ರ ಮರಗಳ ರಾಶಿ ಒಂದು ಕಡೆ, ಔಷಧಿಗಳನ್ನು ನೀಡುವ ಮರಗಳು, ಸಾಂಬಾರ ಪದಾರ್ಥಗಳನ್ನು ಕೊಡುವ ದಾಲ್ಚಿನಿ, ಲವಂಗ, ಜಾಯಿಕಾಯಿ ಮರಗಳ ಸಮೂಹ ಇನ್ನೊಂದು ಕಡೆ !! ಪೀಠೋಪಕರಣಗಳಿಗೆ ಬಳಸುವ ಮರಗಳು, ಅಲಂಕಾರಕ್ಕಾಗಿ, ನೆರಳಿಗಾಗಿ ಬೆಳೆಸುವ ಮರಗಳು ಹತ್ತು ಹಲವು !!

ಮನುಷ್ಯನ ಜೀವನದಲ್ಲಿ ಮರಗಳ ಉಪಯೋಗ ಅಷ್ಟಿಷ್ಟಲ್ಲ. ಹೂವು, ಹಣ್ಣು, ಔಷಧಿಗಳಿಗಾಗಿ, ಮನೆ ಕಟ್ಟಲು, ಮನೆಯಲ್ಲಿ ಬಳಸುವ ಆಸನಗಳಿಗಾಗಿ ಮರಗಳು ನಮಗೆ ಬೇಕೇ ಬೇಕು. ಪ್ರತ್ಯಕ್ಷವಾಗಿ ಮರಗಳಿಂದಾಗುವ ಉಪಯೋಗದಂತೆ, ಅಪ್ರತ್ಯಕ್ಷವಾಗಿ ಆಗುವ ಉಪಯೋಗಗಳು ಹಲವಿವೆ. ಮರಗಳಿಲ್ಲದೆ ಮಳೆ ಇಲ್ಲ, ಮಳೆ ಇಲ್ಲದೆ ಬೆಳೆ ಇಲ್ಲ! ಮರಗಳಿಲ್ಲದೆ ಪ್ರಾಣವಾಯು ಎಲ್ಲಿ ? ನಮ್ಮ ಪರಿಸರ ಶುದ್ಧವಾಗುವುದಾದರೂ ಹೇಗೆ ?

ಮರಗಳ ಮಹತ್ವವನ್ನು ಮನಗಂಡೇ ನಮ್ಮ ಹಿರಿಯರು ಮರಗಳನ್ನು ವೃಕ್ಷದೇವತೆಗಳೆಂದು ಪೂಜಿಸಿದರು. ನಮ್ಮ ಪುರಾಣಗಳು, ಇತಿಹಾಸಗಳು, ಸುಭಾಷಿತಗಳು, ಜಾನಪದ ಕಥೆಗಳು ಮರಗಳನ್ನು ನಾನಾ ರೀತಿಯಲ್ಲಿ ಹಾಡಿ ಹೊಗಳಿವೆ. ನಮ್ಮ ಋಷಿ-ಮುನಿಗಳೆಲ್ಲ ಬದುಕಿದುದು ಮರಗಳ ಮಧ್ಯೆ, ಅಂದರೆ ಅರಣ್ಯಗಳಲ್ಲಿ, ಪರ್ಣಕುಟೀರ ಕಟ್ಟಿಕೊಂಡು. ನಮ್ಮ ಪುರಾಣ ಪುರುಷರಾದ ಶ್ರೀರಾಮ-ಶ್ರೀಕೃಷ್ಣ ವಿದ್ಯಾಭ್ಯಾಸ ಮಾಡಿದ್ದೇ ಅರಣ್ಯಗಳ ಮಧ್ಯೆ ! ನಗರಗಳಲ್ಲಿ, ಅರಮನೆಯಲ್ಲಿ ವಾಸಿಸುವ ಅರಸರು ವೃದ್ಧಾಪ್ಯದಲ್ಲಿ ವಾನಪ್ರಸ್ಥಕ್ಕೆ ಅರಣ್ಯಕ್ಕೆ ತೆರಳಿದರೆಂದು ಓದುತ್ತೇವೆ. ಶ್ರೀಕೃಷ್ಣ ಪರಮಾತ್ಮ ಶಿಶುವಾಗಿ ಅರಳಿ ಮರದ ಎಲೆಯ ಮೇಲೆ ಪವಡಿಸಿಯೇ ಈ ಭೂಮಂಡಲವನ್ನು ಸೃಷ್ಟಿಸಿದ್ದಾಗಿ ನಾವು ನಂಬುತ್ತೇವೆ. ಅಶ್ವತ್ಥದ ಸಸಿಗೆ ನೀರೆರೆದು, ಕಟ್ಟೆ ಕಟ್ಟಿ, ಉಪನಯನ ಮಾಡಿ, ಅಶ್ವತ್ಥನಾರಾಯಣ ಎಂದು ಪೂಜಿಸುತ್ತಾರೆ. ವೃಕ್ಷಗಳನ್ನು ದೇವತೆಗಳೆಂದು ಭಾವಿಸಿ, ಪೂಜಿಸಿ, ಪ್ರೀತಿಸಿ, ಅವುಗಳಿಂದ ನಮಗೆ ಬೇಕಾದುದನ್ನು ಬೇಡಿ ಪಡೆಯುವುದನ್ನು ನಮ್ಮ ಪೂರ್ವಜರು ರೂಢಿಸಿಕೊಂಡಿದ್ದರು.

"ವೃಕ್ಷಗಳೂ ಜೀವರಾಶಿಗಳೇ." ಅವಕ್ಕೆ ನೋವನ್ನುಂಟುಮಾಡಬಾರದೆಂಬ ಅರಿವಿನಿಂದ ಮರವನ್ನು ಕಡಿಯದೆ ಮನೆಗೆ ಮರಳಿದ ಸೂಕ್ಷ್ಮ ಸಂವೇದಿ ಬಾಲಕ ಮುಂದೆ ಸಂತ ನಾಮದೇವನಾದನಂತೆ !

"ಪರೋಪಕಾರಾಯ ಫಲಂತಿ ವೃಕ್ಷಾಣಿ" ಎಂದೂ ಅದರಿಂದ ನಮ್ಮ ಈ ಶರೀರವಾದರೂ ಪರೋಪಕಾರಕ್ಕಾಗಿಯೇ ಇದೆ ಎಂಬ ಪಾಠ ಕಲಿಯಬೇಕೆಂದೂ ಸುಭಾಷಿತಕಾರರು ಸಾರಿ ಹೇಳಿದರು.

ಉದಾರಿಯಾದ, ಜ್ಞಾನಿಯಾದ ರಾಜನೊಬ್ಬ ತನ್ನ ಮಂತ್ರಿಯ ಜೊತೆಗೆ ವಾಯುವಿಹಾರಕ್ಕಾಗಿ ಹೋಗುತ್ತಿದ್ದನಂತೆ. ಹಣ್ಣಿನ ಆಸೆಗಾಗಿ ದಾರಿ ಬದಿಯ ಹಣ್ಣು ತುಂಬಿದ ಮಾವಿನಮರಕ್ಕೆ ಪುಟ್ಟ ಮಕ್ಕಳು ಕಲ್ಲು ತೂರುತ್ತಿದ್ದರು. ಒಬ್ಬ ಪುಟ್ಟ ಹುಡುಗ ಹೊಡೆದ ಕಲ್ಲು ಗುರಿ ತಪ್ಪಿ ಅರಸನ ಹಣೆಗೆ ತಾಗಿತು. ಮಂತ್ರಿ ಓಡಿಹೋಗಿ ಆ ಹುಡುಗನನ್ನು ಹಿಡಿದು ತರಿಸಿ, ರಾಜನೆದುರು ನಿಲ್ಲಿಸಿದ. ತನಗೇನು ಶಿಕ್ಷೆ ಯಾಗುವುದೋ ಎಂದು ಆ ಬಡ, ಪುಟ್ಟ ಹುಡುಗ ನಡುಗತೊಡಗಿದ. ರಾಜ ತನ್ನ ಅರಮನೆಯಿಂದ ಬುಟ್ಟಿ ತುಂಬ ಹಣ್ಣು ತರಿಸಿ ಆ ಹುಡುಗನಿಗೆ ನೀಡಿ, ಇನ್ನು ಮುಂದೆ ಈ ರೀತಿ ಕಲ್ಲು ಹೊಡೆದು ಮರಗಳಿಗೆ, ಮನುಷ್ಯರಿಗೆ ತೊಂದರೆ ಕೊಡಬಾರದೆಂಬ ಬುದ್ಧಿ ಮಾತು ಹೇಳಿ ಕಳಿಸಿದ. ಮಂತ್ರಿಗೆ ಆಶ್ಚರ್ಯ. ರಾಜನ ವರ್ತನೆಯ ಕಾರಣ ಕೇಳಿದ ! ರಾಜ ಹೇಳಿದ : "ಕಲ್ಲು ಹೊಡೆದಾಗ ಮರ ಹಣ್ಣು ಕೊಡುತ್ತದೆ. ರಾಜನಾದ ನಾನು ಮರಕ್ಕಿಂತ ಹೆಚ್ಚು ಬುದ್ಧಿ ಇರುವವನಲ್ಲವೆ ?" ಮಂತ್ರಿ ತಲೆದೂಗಿದ.

ಹಣ್ಣುಗಳಿಂದ ತುಂಬಿದ ಮರವು ಹೇಗೆ ಬಾಗಿರುತ್ತದೋ ಹಾಗೆ ಸಜ್ಜನರು ವಿನಯಶೀಲರಾಗಿರುತ್ತಾರೆ ಎಂದು ಇನ್ನೊಂದು ಸುಭಾಷಿತ ಸಾರುತ್ತದೆ. ಮರ-ಮರವೆಂದು ಜಪಿಸಿದ ಬೇಡನಿಗೆ ರಾಮ ಸಾಕ್ಷಾತ್ಕಾರವಾಯ್ತು, ಬೇಡ ಆದಿಕವಿಯಾಗಿ ರಾಮಾಯಣ ಬರೆದ.

"ಮರದಲ್ಲಿ ಮರ ಹುಟ್ಟಿ ಮರ ಚಕ್ರ ಕಾಯಾಗಿ ತಿನ್ನಬಾರದ ಹಣ್ಣು ಬಲು ರುಚಿ" ಎಂದು ನಮ್ಮ ವಂಶವೃಕ್ಷದ ಒಗಟನ್ನು ಜನಪದರು ಮರದ ರೂಪಕದಲ್ಲಿ ಹಿಡಿದಿಟ್ಟರು.

ಮರಗಳಿಲ್ಲದಿದ್ದರೆ ನಮ್ಮ ಜೀವನ ಹೇಗಿರುತ್ತಿತ್ತು ? ಒಂದು ಕ್ಷಣ ಅದರ ಕಲ್ಪನೆಯನ್ನು ಮಾಡಿಕೊಂಡರೆ, ಖಂಡಿತ ಅದು ಬೆಂಗಾಡು ಅಲ್ಲವೆ ? ಮರಗಳಿಂದ ಕೂಡಿದ ಈ ಸೃಷ್ಟಿ ಅದೆಷ್ಟು ಸುಂದರವಾಗಿದೆ ! ನಾವೂ ಮರಗಳನ್ನು ಪ್ರೀತಿಸಿ, ಪೂಜಿಸಿ, ಸಂರಕ್ಷಣೆ ಮಾಡಿ, ನಮ್ಮ ಬಾಳೂ ಸುಂದರವಾಗಿರುವಂತೆ, ಸಾರ್ಥಕವಾಗುವಂತೆ ಮಾಡಬೇಕು ಅಲ್ಲವೇ ?

ವಿಜಯಾ ಶ್ರೀಧರ್, ೧ನೇ ಮುಖ್ಯರಸ್ತೆ, ರಾಜೇಂದ್ರನಗರ, ಶಿವಮೊಗ್ಗ - ೫೭೭ ೨೦೪



# ಶನಿಗ್ರಹದ ನಿರ್ಗಮನ

ಕಳೆದ ತಿಂಗಳವರೆಗೂ ಸಂಜೆಯ ಆಕಾಶದಲ್ಲಿ ವಿಜೃಂಭಿಸುತ್ತಿದ್ದು ಮಂಗಳಗ್ರಹದೊಡನೆ ಓಟದ ಸ್ಪರ್ಧೆ ನಡೆಸಿದ ಶನಿಗ್ರಹ ಈ ತಿಂಗಳಲ್ಲಿ ವಿದಾಯ ಹೇಳಿ ಕಣ್ಮರೆಯಾಗುತ್ತಿದೆ. ಇದೊಂದು ತಾತ್ಕಾಲಿಕ ಘಟನೆ. ವರ್ಷದ ರಜೆ ಎನ್ನಬಹುದು. ಬರುವ ತಿಂಗಳುಗಳಲ್ಲಿ ಬೆಳಗಿನ ಜಾವ ಕಾಣಲಿದೆ ಎಂಬುದರ ಸೂಚನೆ.

ಶನಿಗ್ರಹದ ತಂಗುದಾಣವಾಗಿರುವ ಕಟಕರಾಶಿಯ ಮೂಲಕ ಸೂರ್ಯ ಹಾದುಹೋಗುತ್ತಿರುವುದರಿಂದ ಹೀಗೆ ಶನಿ ಕಾಣದಾಗುತ್ತಿದೆ. ಯುತಿ, ಅಂದರೆ ಸೂರ್ಯ ಮತ್ತು ಗ್ರಹದ ಕನಿಷ್ಠ ಕೋನಾಂತರ ಉಂಟಾಗಲಿರುವುದು ಆಗಸ್ಟ್‌ನಲ್ಲಿ. ಹೀಗಾಗಿ ಈ ತಿಂಗಳ ಕೊನೆಗೇ ಶನಿ ಸಂಜೆಗೆಂಪಿನಲ್ಲಿ ಕರಗಿಹೋಗಲಿದೆ. ಕೆಂಪುಗ್ರಹ ಮಂಗಳ ಇದನ್ನು ಹಿಂದೆ ಹಾಕಿ ಸಿಂಹರಾಶಿಗೆ ಓಡಿಬಂದಿದೆ. ದಿನಗಳೆದಂತೆ ಶನಿ ಗ್ರಹ ದಿಗಂತದ ಅಂಚಿಗೆ ಸರಿದರೂ ಮಂಗಳ ಮಾತ್ರ ಇನ್ನೂ ಎತ್ತರದಲ್ಲಿ ಕಾಣುತ್ತಿರುತ್ತದೆ. ೨೬ರಂದು ಬಾಲ ಚಂದ್ರನನ್ನು ಹುಡುಕುವುದು ಯಶಸ್ವಿಯಾದರೆ ಅದರ ಪಕ್ಕದಲ್ಲಿ ಶನಿಯನ್ನೂ ಕಾಣಬಹುದು. ಮರುದಿನ ಚಂದ್ರ-ಮಂಗಳ ಜೋಡಿ. ಆದರೆ ಈ ಎರಡೂ ಘಟನೆಗಳು ಸಂಜೆಗೆಂಪಿನಲ್ಲಿ ಕರಗಿ ಹೋಗುವ ಸಾಧ್ಯತೆಯೇ ಹೆಚ್ಚು. ೨೨ರಂದು ಮಂಗಳ ಗ್ರಹವು ಮಘಾ ನಕ್ಷತ್ರದೊಡನೆ ಜೋಡಿಯಾಗುವುದನ್ನು ಗಮನಿಸಿ.

ಉ
ವೀಣಾ
ಸಪ್ತರ್ಷಿಮಂಡಲ
ಭೀಮ
ಶನಿ
ಸಿಂಹ ಮಂಗಳ
ಪೂ
ಸ್ವಾತಿ
ಪ
ಉರಗಧರ
ತುಲಾ
ಕನ್ಯಾ
ಗುರು
ಹಸ್ತಾ
ವೃಶ್ಚಿಕ
ಧನು
ಶಶ
ಕಿನ್ನರ
ತ್ರಿಶಂಕು
ದ

ಸಂಜೆಯಲ್ಲಿ ಸ್ಫುಟವಾಗಿ ಕಾಣುವ ಗ್ರಹ ಗುರು. ದೂರ ದರ್ಶಕದ ಮೂಲಕ ಕೆಂಪು ಮಚ್ಚೆಯನ್ನು ಗಮನಿಸಲು ಇದು ಒಳ್ಳೆಯ ಅವಕಾಶ. ಶುಕ್ರಗ್ರಹ ಬೆಳಗಿನ ಜಾವ ಕಾಣುತ್ತದೆ. ಅದು ರೋಹಿಣಿಯ ಜೊತೆಗೂಡುವುದನ್ನೂ ಕಾಣಬಹುದು.

ಬುಧಗ್ರಹ ಸೂರ್ಯನ ಜೊತೆಗೂಡಿ (ಯುತಿ) ಪುನಃ ಬೆಳಗಿನ ಆಕಾಶಕ್ಕೆ ಓಡುವುದು, ಹಿನ್ನಡೆಯ ಆರಂಭ, ಯುತಿ ಮತ್ತು ಮುಕ್ತಾಯ ಈ ಎಲ್ಲ ಘಟನೆಗಳೂ ಈ ತಿಂಗಳಲ್ಲೇ ನಡೆಯುವುವು. ತಿಂಗಳ ಕೊನೆಗೆ ಬುಧ ಬೆಳಗಿನ ಜಾವ ಕಾಣುವುದು.

ಈ ತಿಂಗಳಲ್ಲಿ ಚಿತ್ರಾ, ಜ್ಯೇಷ್ಠಾ ನಕ್ಷತ್ರಗಳಲ್ಲದೇ ಯುರೇನಸ್ ಮತ್ತು ಮಂಗಳ ಗ್ರಹಗಳನ್ನೂ ಚಂದ್ರ ಮುಚ್ಚಿಹಾಕುವ ಆಚ್ಛಾದನೆಗಳಿವೆ. ಆದರೆ ಇವು ಯಾವುವೂ ನಮಗೆ ಕಾಣುವುದಿಲ್ಲ. ಆಯಾ ನಕ್ಷತ್ರ ಹಾಗೂ ಗ್ರಹಗಳನ್ನು ಗುರುತಿಸಲು ಈ ಸಂದರ್ಭಗಳನ್ನು ಉಪಯೋಗಿಸಬಹುದು.



೧೦ರಂದು ಚಂದ್ರ ಧನುರಾಶಿಯಲ್ಲಿ ಕಾಣುವುದು

ಸಂಜೆಯ ಆಕಾಶದಲ್ಲಿ ಕಾಣುವ ನಕ್ಷತ್ರ ಪುಂಜಗಳು ನಕ್ಷೆಯಲ್ಲಿವೆ. ನೆತ್ತಿಯಲ್ಲಿ ಕಾಣುವ ಗುರುಗ್ರಹದ ಸಹಾಯದಿಂದ ಚಿತ್ರಾ ಮತ್ತು ಸ್ವಾತಿ ನಕ್ಷತ್ರಗಳನ್ನು ಗುರುತಿಸಬಹುದು. ಹಾಗೆಯೇ ಉತ್ತರಕ್ಕೆ ಮುಂದುವರೆದು ಸಪ್ತರ್ಷಿ ಮಂಡಲವನ್ನು ಗುರುತಿಸಬಹುದು. ದಕ್ಷಿಣದಲ್ಲಿ ತ್ರಿಶಂಕು ಮತ್ತು ಕಿನ್ನರ ಇವು ಸುಂದರವಾಗಿ ಕಾಣುವುವು. ಪೂರ್ವದಲ್ಲಿ ಒಫಿಯೂಕಸ್ (ಉರಗಧರ) ಮತ್ತು ವೃಶ್ಚಿಕಗಳನ್ನು ಗುರುತಿಸಬಹುದು. ತನ್ನ ಕಕ್ಷೆಯ ಪುರರವಿ ಬಿಂದುವನ್ನು ಭೂಮಿ ೪ರಂದು ದಾಟಲಿದೆ. ಆದ್ದರಿಂದ ಅಂದು ಭೂಮಿ-ಸೂರ್ಯರ ದೂರ ಗರಿಷ್ಠವಾಗಲಿದೆ.

ಮಳೆಮೋಡಗಳ ಹಾವಳಿಯಲ್ಲಿ ಕ್ಷೀಣ ಪುಂಜಗಳನ್ನು ಗುರುತಿಸುವ ಅವಕಾಶ ಸಿಗದಿರಬಹುದು. ಆದರೆ ನೆತ್ತಿಯ ಮೇಲಿನ ಹಸ್ತಾ, ಸಿಂಹ ಇವುಗಳನ್ನು ಗುರುತಿಸುವ ಪ್ರಯತ್ನ ಮಾಡಬಹುದು. ಜುಲೈ ೧೦ರಂದು ಚಂದ್ರನ ಸ್ಥಾನವನ್ನು ಗಮನಿಸಿ. ಧನುರಾಶಿಯ ಚೌಕಟ್ಟಿನೊಳಗೇ ಕಾಣುವುದು. ಎರಡು ಮೂರು ದಿನಗಳ ತರುವಾಯ (ಚಂದ್ರನಿಲ್ಲದಾಗ) ಅದೇ ಭಾಗವನ್ನು ಗಮನಿಸಿ. ಮೋಡದಂತೆ ಕಾಣುವ ಆಕಾಶಗಂಗೆಯ ಸೌಂದರ್ಯವನ್ನು ಆಸ್ವಾದಿಸಿ.

ಕೆಲವೊಂದು ಉಲ್ಕಾವೃಷ್ಟಿಗಳು ಈ ತಿಂಗಳುಗಳಲ್ಲಿ ಗರಿಷ್ಠ ಮುಟ್ಟುತ್ತವೆ. ಆದ್ದರಿಂದ ಶುಭ್ರ ಆಕಾಶ ಉಲ್ಕಾವೃಷ್ಟಿಯನ್ನು ಪ್ರದರ್ಶಿಸಬಹುದು.

## ಖಗೋಳ ದಿನಚರಿ

೧ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೨ ಶುಕ್ರ - ರೋಹಿಣಿ ನಡುವೆ ೪ ಡಿಗ್ರಿ ಕೋನ
೩ ಭೂಮಿ - ಸೂರ್ಯ ನಡುವಿನ ಅಂತರ ಗರಿಷ್ಠ
ಚಾಂದ್ರಮಾಸದ ಮೊದಲ ಪಾದ
೪ ಚಂದ್ರನ ಪಕ್ಕ ಚಿತ್ರಾ ನಕ್ಷತ್ರ (ಆಚ್ಛಾದನೆ ಕಾಣುವುದಿಲ್ಲ)
ಬುಧ ಗ್ರಹದ ಹಿನ್ನಡೆ ಆರಂಭ
೬ ಚಂದ್ರನ ಪಕ್ಕ ಗುರು ಗ್ರಹ; ಗುರು ಗ್ರಹದ ಹಿನ್ನಡೆ ಮುಕ್ತಾಯ
೮ ಚಂದ್ರನ ಪಕ್ಕ ಜ್ಯೇಷ್ಠಾ ನಕ್ಷತ್ರ (ಆಚ್ಛಾದನೆ ಕಾಣುವುದಿಲ್ಲ)
೧೧ ಹುಣ್ಣಿಮೆ ೦೮:೩೨ಕ್ಕೆ
೧೩ ಚಂದ್ರ - ಭೂಮಿ ನಡುವೆ ಕನಿಷ್ಠ ದೂರ
೧೪ ಯುರೇನಸ್ ಗ್ರಹ ಚಂದ್ರನ ಪಕ್ಕ (ಆಚ್ಛಾದನೆ ಕಾಣುವುದಿಲ್ಲ)
೧೬ ಚಾಂದ್ರಮಾಸದ ಕೊನೆಯ ಪಾದ
೧೮ ಬುಧ ಗ್ರಹದ ಯುತಿ ಸೂರ್ಯನಿಂದ ೫ಡಿಗ್ರಿ ದಕ್ಷಿಣಕ್ಕೆ
೨೨ ಮಂಗಳ - ಮಘ ನಡುವೆ ಒಂದು ಡಿಗ್ರಿ ಅಂತರ
ಚಂದ್ರನ ಪಕ್ಕ ಶುಕ್ರ ಆರು ಡಿಗ್ರಿ ಅಂತರ
೨೪ ಚಂದ್ರ - ಬುಧ ನಡುವೆ ೧೦ ಡಿಗ್ರಿ ಕೋನ
೨೫ ಅಮಾವಾಸ್ಯೆ ೧೦:೦೧ಕ್ಕೆ
೨೬ ಚಂದ್ರನ ಪಕ್ಕ ಶನಿ ಅಂತರ ೫ ಡಿಗ್ರಿ
೨೭ ಚಂದ್ರನ ಪಕ್ಕ ಮಂಗಳ ಅಂತರ ೩ ಡಿಗ್ರಿ (ಆಚ್ಛಾದನೆ ಕಾಣುವುದಿಲ್ಲ)
೨೮ ಬುಧ ಗ್ರಹದ ಹಿನ್ನಡೆ ಮುಕ್ತಾಯ
೨೯ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೩೧ ಚಂದ್ರನ ಪಕ್ಕ ಚಿತ್ರಾ ನಕ್ಷತ್ರ (ಆಚ್ಛಾದನೆ ಕಾಣುವುದಿಲ್ಲ)

### ಆಗಸ್ಟ್

೨ ಚಾಂದ್ರಮಾಸದ ಮೊದಲ ಪಾದ, ಚಂದ್ರ - ಗುರು ನಡುವೆ ೫ ಡಿಗ್ರಿ ಕೋನ
೫ ಶುಕ್ರ - ಬುಧ ನಡುವೆ ಸುಮಾರು ೨ ಡಿಗ್ರಿ ಕೋನ
೬ ಬುಧ ಗ್ರಹದ ಗರಿಷ್ಠ ಕೋನೋನ್ನತಿ

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಬಂಡಾಯ ಸಾಹಿತ್ಯ ಚಳವಳಿಯ ದಿಕ್ಕುದೆಸೆ

ಬಂಡಾಯ ಸಾಹಿತ್ಯ ಸಮ್ಮೇಳನದಲ್ಲಿ ಹೊಸ ರಕ್ತದ ಯುವಕರು ಸ್ಪಷ್ಟತೆಯ ಬಗ್ಗೆ ಕೇಳಿದ ಪ್ರಶ್ನೆ ಅವರದು ಮಾತ್ರವಲ್ಲ, ಅದು ಈ ಶತಮಾನದ ಈ ಹೊಸ ಪೀಳಿಗೆಯ ಪ್ರಶ್ನೆಯೇ ಆಗಿದೆ. ಈ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವಲ್ಲಿ ಬಂಡಾಯ ಸಾಹಿತ್ಯ ಸಂಘಟನೆ ತನ್ನ ಮುಂದಿನ ದಿಕ್ಕು ದೆಸೆಗಳನ್ನು ನಿರ್ಧರಿಸಬೇಕಾಗಿದೆ.

**ಸನತ್‌ಕುಮಾರ ಬೆಳಗಲಿ**

"ಖಡ್ಗವಾಗಲಿ ಕಾವ್ಯ ಜನರ ನೋವಿಗೆ ಮಿಡಿವ ಪ್ರಾಣಮಿತ್ರ" ಎಂಬ ಘೋಷ ವಾಕ್ಯದೊಂದಿಗೆ ಬಂಡಾಯ ಸಾಹಿತ್ಯ ಸಂಘಟನೆ ಕಾಲು ಶತಮಾನದ ಹಿಂದೆ ಆರಂಭ ಗೊಂಡಾಗ ಕನ್ನಡ ಸಾಹಿತ್ಯ ಲೋಕದಲ್ಲಿ ಅಲ್ಲೋಲಕಲ್ಲೋಲ ಉಂಟಾಯಿತು. ೧೯೭೯ರಲ್ಲಿ ಬೆಂಗಳೂರಿನಲ್ಲಿ ನಡೆದ ಬಂಡಾಯದ ಸ್ಥಾಪನಾ ಸಮಾವೇಶವನ್ನು ಆಂಧ್ರದ ಕ್ರಾಂತಿಕಾರಿ ಕವಿ ಶ್ರೀ ಶ್ರೀ ಅವರು ಉದ್ಘಾಟಿಸಿದ್ದರು. ಕರ್ನಾಟಕದ ಹೊಸ ತಲೆಮಾರಿನ ಪ್ರಗತಿಪರ, ಎಡಪಂಥೀಯ ಲೇಖಕರೆಲ್ಲ ಒಂದೇ ವೇದಿಕೆಗೆ ಬಂದು ಒಕ್ಕೊರಲಿನಿಂದ ಅಸಮಾನತೆಯ ವಿರುದ್ಧ ಧ್ವನಿ ಎತ್ತಿದ್ದರು. ಮಾರ್ಕ್ಸ್‌ವಾದಿಗಳು, ಲೋಹಿಯಾವಾದಿಗಳು, ಅಂಬೇಡ್ಕರ್ ವಾದಿಗಳು, ಗಾಂಧಿವಾದಿಗಳು ಹಾಗೂ ಯಾವ ಸೈದ್ಧಾಂತಿಕ ಧಾರೆಯೊಂದಿಗೆ ಗುರುತಿಸಿಕೊಳ್ಳದ ಪ್ರಗತಿಪರರು ಒಂದೆಡೆ ಸೇರಿದ್ದರು. ಸಮತೆಯ ಸಮಾಜಕ್ಕೆ ಅಡ್ಡಿಯಾಗಿರುವ ಜಾತಿವಾದ, ಕೋಮುವಾದಗಳನ್ನು ಹಿಮ್ಮೆಟ್ಟಿಸಿ ಜನಸಂಸ್ಕೃತಿಯ ಆಶಯಗಳಿಗೆ ದನಿಯಾಗುವುದು ಬಂಡಾಯದ ಗುರಿಯಾಗಿತ್ತು. ರಾಜಿಯಿಲ್ಲದ ವ್ಯವಸ್ಥೆಯೊಂದಿಗಿನ ಹೋರಾಟಕ್ಕೆ ಆಗ ಕರೆ ನೀಡಿದ್ದ ಬಂಡಾಯ ಸಾಹಿತ್ಯ ಸಂಘಟನೆ ಪ್ರಭುತ್ವದ ಅಂಗಳದ ಆಸರೆಯ ತಾಣಗಳಾದ ಸಾಹಿತ್ಯ ಪರಿಷತ್ತು, ಸರ್ಕಾರಿ ಅಕಾಡೆಮಿಗಳನ್ನು ಬಹಿಷ್ಕರಿಸಿತ್ತು. ಬಂಡಾಯಸಾಹಿತ್ಯ ಪರಿಷತ್ತಿನ ಕಾರ್ಯ ಕ್ರಮಗಳಿಗೆ ಹೋಗಕೂಡದು, ಅಕಾಡೆಮಿಗಳ ಸದಸ್ಯತ್ವದ ಆಮಿಷಗಳಿಗೆ ಬಲಿಯಾಗ ಬಾರದು ಎಂಬ ಸ್ವಯಂ ಕಟ್ಟುಪಾಡುಗಳನ್ನು ಹಾಕಿಕೊಳ್ಳಲಾಗಿತ್ತು.

ಆದರೆ ಕ್ರಮೇಣ ಈ ಕಟ್ಟುಪಾಡು ಸಡಿಲಗೊಂಡಿತು. ದಶಕದ ನಂತರ ನಡೆದ ದಾವಣಗೆರೆ ಸಮ್ಮೇಳನದಲ್ಲಿ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮಗಳಿಗೆ ಹೋಗ ಬಹುದು ಎಂದು ಪ್ರಣಾಳಿಕೆಗೆ ತಿದ್ದುಪಡಿ ತರಲಾಯಿತು.

ಸರ್ಕಾರದ ಅಕಾಡೆಮಿಗಳ ಒಳಗೆ ಸೇರಿ ಪ್ರಗತಿಪರ ಆಶಯಗಳ ಪರವಾಗಿ ಕೆಲಸ ಮಾಡುವ ತೀರ್ಮಾನ ಕೈಗೊಳ್ಳಲಾಯಿತು. ಈ ಮಾರ್ಪಾಡಿನ ಪರಿಣಾಮವಾಗಿ ಅನೇಕ ಬಂಡಾಯ ಸಾಹಿತಿಗಳು ಅಕಾಡೆಮಿ-ಪ್ರಾಧಿಕಾರಗಳ ಅಧ್ಯಕ್ಷರಾಗಿ, ಸದಸ್ಯರಾಗಿ ಕೆಲಸ ಮಾಡುತ್ತ ಬಂದಿದ್ದಾರೆ.

ಪ್ರೊ॥ ಬರಗೂರು ರಾಮಚಂದ್ರಪ್ಪನವರು ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿದ್ದಾಗ ಕೆಲ ಉಪಯುಕ್ತ ಕೆಲಸಗಳೂ ಆದವು. ಆಗ ಉಪಸಂಸ್ಕೃತಿಗಳ ಅಧ್ಯಯನ ಮಾಲೆ ಮತ್ತು ಸಾಮಾಜಿಕ ಚಿಂತನ ಮಾಲೆಗಳ ಭಾಗವಾಗಿ ಪುಸ್ತಕಗಳನ್ನು ಪ್ರಕಟಿಸಿ ಏಕ ಸಂಸ್ಕೃತಿಯ ಪ್ರತಿಪಾದಕರಿಗೆ, ಪಟ್ಟಭದ್ರ ಹಿತಾಸಕ್ತಿಗಳಿಗೆ ಅಕಾಡೆಮಿಯನ್ನು ಬಳಸಿಕೊಂಡೇ ನೀಡಿದ ಏಟು ಮುಟ್ಟಿನೋಡಿಕೊಳ್ಳುವಂತಿತ್ತು. ಈ ಬಗ್ಗೆ ಯಾರಿಗೂ ಭಿನ್ನಾಭಿ ಪ್ರಾಯವಿಲ್ಲ. ಈ ಕಾಲು ಶತಮಾನದುದ್ದಕ್ಕೂ ಕರ್ನಾಟಕದಲ್ಲಿ ಸೆಕ್ಯುಲರ್ ಪಕ್ಷಗಳೇ ಅಧಿಕಾರದಲ್ಲಿದ್ದವು. ಈ ಪಕ್ಷಗಳಲ್ಲಿ ಜಾತಿವಾದಿಗಳು ಹಾಗೂ ಕೋಮುವಾದಿಗಳು ಸಾಕಷ್ಟಿದ್ದರೂ ಪಕ್ಷಗಳ ಸಿದ್ಧಾಂತ ಹಾಗೂ ಪ್ರಣಾಳಿಕೆ ಜನಾಂಗದ್ವೇಷಿಯಾಗಿರಲಿಲ್ಲ. ಆದರೆ ಈಗ ಕರ್ನಾಟಕದ ರಾಜಕೀಯ ಚಿತ್ರ ಸಂಪೂರ್ಣ ಬದಲಾವಣೆಯಾಗಿದೆ. ಹಿಂದೂರಾಷ್ಟ್ರ ಸಿದ್ಧಾಂತ ಪ್ರತಿಪಾದಿಸುವ ಭಾರತೀಯ ಜನತಾ ಪಕ್ಷ 'ಜಾತ್ಯತೀತ' ಜನತಾದಳ ಎಂಬ ಪಕ್ಷದೊಂದಿಗೆ ಸೇರಿ ರಾಜ್ಯದ ಅಧಿಕಾರಸೂತ್ರ ಹಿಡಿದಿದೆ.

ಕರ್ನಾಟಕದ ಪ್ರಭುತ್ವದ ಸೂತ್ರ ಹಿಡಿದ ಪಕ್ಷಗಳಲ್ಲಿ ಉಂಟಾದ ಈ ಬದಲಾವಣೆ ಬಂಡಾಯ ಸಾಹಿತ್ಯ ಸಂಘಟನೆಯ ಮೇಲೂ ಆಗಿದೆ. ಅಂತಲೇ ಕೋಮುವಾದಿಗಳು ಸರ್ಕಾರದ ಸೂತ್ರ ಹಿಡಿದಿರುವುದರಿಂದ ಬಂಡಾಯದ ಜೊತೆ ಗುರುತಿಸಿಕೊಂಡಿರುವ ಹಾಲಿ ಅಕಾಡೆಮಿ ಸದಸ್ಯರು, ಅಧ್ಯಕ್ಷರು ತಮ್ಮ ಸದಸ್ಯತ್ವಕ್ಕೆ ರಾಜೀನಾಮೆ ನೀಡಬೇಕು. ಈ ಕೋಮುವಾದಿ ಸರ್ಕಾರ ಅಸ್ತಿತ್ವದಲ್ಲಿರುವವರೆಗೆ ಅಕಾಡೆಮಿಯೂ ಸೇರಿದಂತೆ ಯಾವುದೇ ಸರ್ಕಾರಿ ಸ್ಥಾನಮಾನಗಳನ್ನು, ಪ್ರಶಸ್ತಿ ಪುರಸ್ಕಾರಗಳನ್ನು ಸ್ವೀಕರಿಸಬಾರದು ಎಂಬ ಅಭಿಪ್ರಾಯ ಈಗ ಬಲವಾಗಿ ಕೇಳಿಬರುತ್ತಿದೆ.

ಶಿವಮೊಗ್ಗದಲ್ಲಿ ಏಪ್ರಿಲ್ ೮ ಮತ್ತು ೯ರಂದು ನಡೆದ ಬಂಡಾಯ ಸಾಹಿತ್ಯ ಸಮ್ಮೇಳನದಲ್ಲಿ ಇದೇ ಮೊದಲ ಬಾರಿ ತೀವ್ರ ಸೈದ್ಧಾಂತಿಕ ತಾಕಲಾಟ ನಡೆಯಿತು. ಸರ್ಕಾರದ ಸ್ಥಾನಮಾನ ಪಡೆದವರು ಬಂಡಾಯ ಸಾಹಿತ್ಯ ಚಳವಳಿಯಿಂದ ದೂರ ಉಳಿಯಬೇಕು ಎಂದು ಸಂಚಾಲಕರಲ್ಲೊಬ್ಬರಾದ ಡಾ॥ ಕಾ. ವೆಂ. ಶ್ರೀನಿವಾಸ ಮೂರ್ತಿ ಅವರು ಹೇಳಿದ ಮಾತು ಇಡೀ ಎರಡು ದಿನ ಬಂಡಾಯ ಸಮ್ಮೇಳನದಲ್ಲಿ ಕೋಲಾಹಲದ ಅಲೆಯನ್ನೆಬ್ಬಿಸಿತು.

ಇನ್ನೊಂದೆಡೆ ಬಂಡಾಯ ಸಮ್ಮೇಳನವನ್ನು ಉದ್ಘಾಟಿಸಿದ ಖ್ಯಾತ ಮರಾಠಿ ಸಾಹಿತಿ ಲಕ್ಷ್ಮಣ ಗಾಯಕವಾಡ ಅವರು ಸರ್ವರಿಗೂ ಸಮಪಾಲು ಕೇಳುತ್ತಿರುವ ನಕ್ಸಲೀಯರನ್ನು ಅಪರಾಧಿಗಳು ಎನ್ನುವ ಸರ್ಕಾರ ಕೋಮುವಾದಿ ಸಂಘಪರಿವಾರಕ್ಕೆ ರಕ್ಷಣೆ ನೀಡುತ್ತಿದೆ, ತೊಗಾಡಿಯಾನಂಥ ಭಯೋತ್ಪಾದಕನಿಗೆ ಕಮಾಂಡೊ ರಕ್ಷಣೆ ನೀಡುತ್ತಿದೆ ಎಂದು ಹೇಳಿದರಾದರೂ ಬುಲೆಟ್‌ನಿಂದ ಕ್ರಾಂತಿ ಸಾಧ್ಯವಿಲ್ಲ, ಬ್ಯಾಲೆಟ್‌ನಿಂದ ಸಾಧ್ಯ ಎಂದು ಅವರು ಹೇಳಿದ ಮಾತಿನ ಬಗ್ಗೆ ಮಿಶ್ರ ಅಭಿಪ್ರಾಯ ವ್ಯಕ್ತವಾಯಿತು.

ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ ಹಾಗೂ ಗಾಯಕವಾಡ ಹೇಳಿದ ಮಾತುಗಳ ಸುತ್ತಲೂ ಇಡೀ ಎರಡು ದಿನ ಚರ್ಚೆ ನಡೆಯಿತು. ಬಂಡಾಯ ಲೇಖಕರು ಜನಪರ ಚಳವಳಿಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬೇಕೆಂಬ ಕಾ. ವೆಂ. ಅವರ ವಾದವನ್ನು ಒಪ್ಪದ ಬರಗೂರು ರಾಮಚಂದ್ರಪ್ಪನವರು ಇದೊಂದು ಸಾಂಸ್ಕೃತಿಕ ಸಂಘಟನೆ, ಜನಾಂದೋಲನಗಳಲ್ಲಿ ನೇರವಾಗಿ ಪಾಲ್ಗೊಳ್ಳುವ ಅಗತ್ಯವಿಲ್ಲ, ಅವುಗಳಿಗೆ ಪೂರಕವಾಗಿ ಕೆಲಸ ಮಾಡಿದರೆ ಸಾಕು ಎಂದು ಹೇಳಿದರು.

ಚುನಾವಣೆ ಮೂಲಕ ಬದಲಾವಣೆ ಎಂಬ ಗಾಯಕವಾಡರ ಮಾತು ಅನೇಕರಿಗೆ ಹಿಡಿಸಲಿಲ್ಲ. ಜಾಗತೀಕರಣದ ಶಕೆ ಆರಂಭ ವಾದ ನಂತರ ಅಹಿಂಸಾತ್ಮಕ ಶಾಂತಿಯುತ ಆಂದೋಲನ ಗಳನ್ನು ಪ್ರಭುತ್ವವು ಪೊಲೀಸ್ ಬಲ ಬಳಸಿ ಹತ್ತಿಕ್ಕುತ್ತಿದೆ; ಮೇಧಾ ಪಾಟ್ಕರ್ ನಿರಶನ ಸತ್ಯಾಗ್ರಹ ಇದಕ್ಕೆ ಪ್ರತ್ಯಕ್ಷ ಉದಾಹರಣೆ; ಸರ್ಕಾರವೇ ಶೋಷಿತ ಜನತೆಯನ್ನು ಉಗ್ರ ಹೋರಾಟದ ದಾರಿಯತ್ತ ತಳ್ಳುತ್ತಿದೆ ಎಂಬ ಅಭಿಪ್ರಾಯವನ್ನು ಕೆಲ ಸ್ನೇಹಿತರು ವ್ಯಕ್ತಪಡಿಸಿದರು.

ಕೋಮುವಾದ ವಿರೋಧಿ ಹೋರಾಟದ ಬಗ್ಗೆ ಬಂಡಾಯದ ಗೆಳೆಯರಲ್ಲಿ ಯಾವುದೇ ಭಿನ್ನಾಭಿಪ್ರಾಯವಿರಲಿಲ್ಲ. ಅದ್ವಾನಿ ರಥಯಾತ್ರೆಯನ್ನು ನಿಷೇಧಿಸಬೇಕೆಂಬ ಗೊತ್ತುವಳಿ ಒಮ್ಮತದಿಂದ ಅಂಗೀಕರಿಸಲ್ಪಟ್ಟಿತು. ಆದರೆ ಕೋಮುವಾದಿ ಸರ್ಕಾರದ ಅಕಾಡೆಮಿಗಳಲ್ಲಿ ಸದಸ್ಯರಾಗಿರಬೇಕೆ ಬೇಡವೇ ಎಂಬ ಬಗ್ಗೆ ಸ್ಪಷ್ಟ ನಿಲುವು ತಾಳುವಲ್ಲಿ ಬಂಡಾಯ ಸಂಘಟನೆ ವಿಫಲಗೊಂಡಿತು. ಈ ಬಗೆಗಿನ ಗೊಂದಲ ಹಾಗೇ ಮುಂದು ವರಿಯಿತು. ಇದಕ್ಕಾಗಿ ಒಂದು ಸಮಿತಿಯನ್ನು ರಚಿಸಲು ನಿರ್ಣಯಿಸಲಾಯಿತು.

ಸಿದ್ಧಲಿಂಗಯ್ಯ ಹಾಗೂ ಹನುಮಂತಯ್ಯ ವಿಧಾನ ಪರಿಷತ್ ಸದಸ್ಯರಾದರು, ಬರಗೂರು ರಾಮಚಂದ್ರಪ್ಪ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದರು. ಬಂಡಾಯದ ಅನೇಕ ಗೆಳೆಯರು ಸರ್ಕಾರಿ ಕೃಪಾಶ್ರಯದ ಹುದ್ದೆಗಳನ್ನು ಅಲಂಕರಿಸಿ ದ್ದಾರೆ, ತಾವು ಏಕೆ ಈ ರೀತಿ ಮಾಡಬಾರದು ಎಂಬ ಭಾವನೆ ಸಹಜವಾಗಿ ಅನೇಕರಲ್ಲಿ ಮೂಡಿದೆ. ತಮ್ಮ ಆಂತರಿಕ ಆಸೆಗಳನ್ನು ಬಹಿರಂಗವಾಗಿ ಹೇಳಿಕೊಳ್ಳಲಾಗದೆ ಅಂಥವರು ಇದಕ್ಕಾಗಿ ಒಂದು ಸೈದ್ಧಾಂತಿಕ ನಿಲುವನ್ನು ರೂಪಿಸಿಕೊಂಡಿದ್ದಾರೆ: ಇದು ಪೂರ್ಣ ಕೋಮುವಾದಿ ಸರ್ಕಾರವಲ್ಲ; ಜೆಡಿಎಸ್ ಜೊತೆ ಅಧಿಕಾರ ಹಂಚಿಕೊಂಡಿದೆ ಎಂಬ ಸಮರ್ಥನೆಗಳ ಮೂಲಕ ತಮ್ಮ ಗುಪ್ತ ಆಸೆಗಳನ್ನು ಈಡೇರಿಸಿಕೊಳ್ಳಲು ಹೊರಟಿದ್ದಾರೆ.

ಈ ದೇಶದಲ್ಲಿ ವ್ಯವಸ್ಥೆಯ ವಿರುದ್ಧ ಸಿಡಿದೆದ್ದ ಎಲ್ಲ ಚಳವಳಿಗಳು ಇದೇ ರೀತಿ

ಸರ್ವನಾಶವಾಗಿಹೋಗಿವೆ. ತನ್ನನ್ನು ಪ್ರಶ್ನಿಸಿ ನಡೆಯುವ ಬಂಡಾಯಗಳನ್ನೆಲ್ಲ ಆಪೋಶನ ತೆಗೆದುಕೊಳ್ಳುವ ವ್ಯವಸ್ಥೆ ಎಂಜಲನ್ನು ಹಾಕಿ ಬಂಡೆದ್ದ ಅಸಹಾಯಕ ದುರ್ಬಲ ಮನಸ್ಸುಗಳನ್ನು ನಿರ್ವೀರ್ಯಗೊಳಿಸುತ್ತ ಬಂದಿದೆ.

ಗೌತಮ ಬುದ್ಧನನ್ನು ವಿಷ್ಣುವಿನ ಹತ್ತನೇ ಅವತಾರವನ್ನಾಗಿ ಮಾಡಿದ ವ್ಯವಸ್ಥೆ ರಾಜಿ ಮಾಡಿಕೊಳ್ಳದ ಬಸವಣ್ಣನನ್ನು ಕೊಂದು, ಅವನು ಕೂಡಲ ಸಂಗಮದಲ್ಲಿ ಐಕ್ಯವಾದ ಎಂಬ ಕತೆಯನ್ನು ಕಟ್ಟಿತು.

ಈಗ ಈ ಜಾಗತೀಕರಣದ ಶಕೆಯಲ್ಲಿ ಬಂಡಾಯ ಸಾಹಿತ್ಯ ಸಂಘಟನೆಯೂ ಇಂಥ ಪ್ರಾಣಸಂಕಟವನ್ನು ಅನುಭವಿಸುತ್ತಿದೆ. ವ್ಯವಸ್ಥೆ ಮತ್ತು ಪ್ರಭುತ್ವ ಎರಡೂ ಬೇರೆಯಲ್ಲ, ಸುಲಿಗೆಕೋರ ವ್ಯವಸ್ಥೆಯನ್ನು ರಕ್ಷಿಸಲೆಂದೇ ಪ್ರಭುತ್ವ ಎಂಬ ಯಂತ್ರ ಅಸ್ತಿತ್ವಕ್ಕೆ ಬಂದಿದೆ. ಅನ್ಯಾಯವನ್ನು ಪ್ರಶ್ನಿಸುವವರನ್ನು ಹತ್ತಿಕ್ಕಲೆಂದೇ ಪ್ರಭುತ್ವ ಪೊಲೀಸ್, ಮಿಲಿಟರಿ, ನ್ಯಾಯಾಲಯಗಳೆಂಬ ರಕ್ಷಾ ಕವಚಗಳನ್ನು ರೂಪಿಸಿಕೊಂಡಿದೆ. ಅಂತಲೇ ಈ ಶೋಷಕ ಪ್ರಭುತ್ವವನ್ನೇ ಕಿತ್ತುಬಿಸಾಡಿ ದುಡಿಯುವ ವರ್ಗ ಅಧಿಕಾರವನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಕಾರ್ಲ್‌ಮಾರ್ಕ್ಸ್ ಒಂದೂವರೆ ಶತಮಾನದ ಹಿಂದೆಯೇ ಕರೆ ನೀಡಿದರು. ಈ ಸಂಘರ್ಷದಲ್ಲಿ ರಾಜಿಗೆ ಅವಕಾಶವಿಲ್ಲ ಎಂದು ಹೇಳಿದ ರಷ್ಯಾದ ಕ್ರಾಂತಿಕಾರಿ ಲೇಖಕ ಮಕ್ಸೀಂ ಗೋರ್ಕಿ ನೀವು ಯಾರ ಪರವಾಗಿ ನಿಲ್ಲುತ್ತೀರಿ, ಶೋಷಕರ ಪರವಾಗಿಯೋ ಶೋಷಿತರ ಪರವಾಗಿಯೋ ಎಂದು ಜಗತ್ತಿನ ಲೇಖಕರನ್ನು ನೇರವಾಗಿ ಪ್ರಶ್ನಿಸಿದ್ದರು.

ಮಕ್ಸೀಂ ಗೋರ್ಕಿಯ ಈ ಪ್ರಶ್ನೆಗೆ ಜಗತ್ತಿನ ಸಾವಿರಾರು ಲೇಖಕರು, ಕಲಾವಿದರು ಸ್ಪಂದಿಸಿದ್ದಾರೆ. ಖ್ಯಾತ ನಟ ಚಾರ್ಲಿ ಚಾಪ್ಲಿನ್, ಜರ್ಮನಿಯ ನಾಟಕಕಾರ ಬ್ರೆಕ್ಟ್, ಚೀಣಾದ ಲಿ ಶ್ಯೂನ್, ಕ್ರಿಸ್ಟೋಫರ್ ಕಾಡ್ವೆಲ್, ಭಾರತದ ಪ್ರೇಮ್‌ಚಂದ್, ಸಜ್ಜಾದ್ ಜಹೀರ್, ಕೈಫಿಆಜ್ಮಿ, ಕನ್ನಡಿಗರಾದ ಕುವೆಂಪು, ಕಟ್ಟೀಮನಿ, ನಿರಂಜನ ಎಲ್ಲರೂ ತಾವು ಅನ್ಯಾಯಕ್ಕೊಳಗಾದವರ ಪರ ಎಂದು ಸಾರಿ ಹೇಳಿದ್ದಾರೆ. ವ್ಯವಸ್ಥೆಯ ವಿರುದ್ಧ ಹೋರಾಟದ ಈ ಸೈದ್ಧಾಂತಿಕ ಎಚ್ಚರ ಈ ಬಂಡಾಯದ ಎರಡನೇ ತಲೆಮಾರಿನ ಲೇಖಕರಲ್ಲಿ ಕಾಣುತ್ತಿಲ್ಲ. ಹೊಸ ತಲೆಮಾರಿನ ಬರಹಗಾರರಲ್ಲಿ ರಾಜಿ ರಹಿತ ಹೋರಾಟದ ಬದ್ಧತೆ ಕಾಣುತ್ತಿದ್ದರೂ ಬರಗೂರು, ಸಿದ್ಧಲಿಂಗಯ್ಯನವರ ನಂತರದ ತಲೆಮಾರಿನ ಲೇಖಕರಿಗೆ ತಮ್ಮ ಹಿರಿಯರು ಅನುಭವಿಸಿದ ಅಧಿಕಾರದ ಕುರ್ಚಿಗಳು, ಕಾಂಟೆಸಾ ಕಾರುಗಳು, ಪರಿಷತ್ತಿನ ಬಿರುದು ಬಾವಲಿಗಳು ಕನಸಿನಲ್ಲಿ ಬರುತ್ತಲೇ ಇವೆ. ಕವಿ ಸತೀಶ ಕುಲಕರ್ಣಿ ಅವರ ಜಾತಿ ಇಲ್ಲದ, ಭೀತಿ ಇಲ್ಲದ ನಾಡು ಕಟ್ಟುವ ಕನಸು ಆಶಯ ಮಸುಕಾಗಿ ಈ ಅಲ್ಪ ಜೀವಮಾನದಲ್ಲಿ ಒಂದು ಸಲವಾದರೂ ಸರ್ಕಾರಿ ಪ್ರಾಧಿಕಾರ, ಅಕಾಡೆಮಿಗಳ ಕುರ್ಚಿಗಳನ್ನು ಅಲಂಕರಿಸಬೇಕೆಂಬ ಆಸೆ ಬುರುಕುತನ (ಬರಗೂರು, ಚಂಪಾ ನಂತರದ ತಲೆಮಾರಿನಲ್ಲಿ) ಈಗೀಗ ದಟ್ಟವಾಗಿ ಕಂಡು ಬರುತ್ತಿದೆ. ಮಾರ್ಕ್ಸ್‌ವಾದದ ಆಳವಾದ ಅಧ್ಯಯನವಿದ್ದ ಬರಗೂರರಂಥವರಿಗೆ ಸರ್ಕಾರಿ ಹುದ್ದೆಗಳನ್ನು ತಮ್ಮ ತಾತ್ವಿಕ ಆಶಯಗಳಿಗಾಗಿ ಸೀಮಿತವಾಗಿಯಾದರೂ ಬಳಸಿಕೊಳ್ಳುವ ಸಾಮರ್ಥ್ಯವಿತ್ತು. ಕೆಲವರಂತೂ ಆ ಉಸಾಬರಿಗೂ ಹೋಗಲಿಲ್ಲ. ಆದರೆ ಅಂಥ ಯಾವ ಬದ್ಧತೆಯಿಲ್ಲದೆ ಕೇವಲ ಅಕಾಡೆಮಿ ಅಧಿಕಾರಕ್ಕಾಗಿ ಬಂಡಾಯದ ಏಣಿಯನ್ನು ಬಳಸಿಕೊಳ್ಳುವ ಹಸಿಬಿಸಿ ಲೇಖಕರಿಂದ ಏನನ್ನು ತಾನೆ ನಿರೀಕ್ಷಿಸಲು ಸಾಧ್ಯ ?




ವ್ಯವಸ್ಥೆಯ ಜೊತೆಗೆ ರಾಜಿಮಾಡಿಕೊಂಡ ಲೇಖಕರಿರುವಂತೆ ಪ್ರಭುತ್ವದ ಆಮಿಷಗಳನ್ನು ಧಿಕ್ಕರಿಸಿ ನಿಂತ ದಿಟ್ಟ ಚಿಂತನಶೀಲರು ನಮ್ಮ ನಡುವೆ ಇದ್ದಾರೆ. ಪ್ರಚಂಡ ಪ್ರತಿಭೆಯ ವರವರರಾವ್ ಪ್ರಭುತ್ವದೊಂದಿಗೆ ರಾಜಿ ಮಾಡಿಕೊಳ್ಳದೆ ಜೈಲಿಗೆ ಹೋದರು. ಇದೇ ಬಂಡಾಯ ಚಳುವಳಿಯ ಹಲವಾರು ಪ್ರತಿಭಾನ್ವಿತರು ಇಂದಿಗೂ ಬೀದಿ ಚಳುವಳಿಗಳಲ್ಲಿ ಭಾಗವಹಿಸುತ್ತಾರೆ. ಬಂದ ಅವಕಾಶಗಳನ್ನು ಎಡಗಾಲಿನಿಂದ ಒದ್ದ ಕ್ರಾಂತಿಕವಿ ಗದ್ದರ್ ಬಂದೂಕಿಗೆ ಎದೆಯೊಡ್ಡಿನಿಂತರು. ಹೊಸ ತಲೆಮಾರಿನ ಬಂಡಾಯ ಲೇಖಕರು ಸ್ಫೂರ್ತಿ ಪಡೆಯಬೇಕಾದುದು ಇಂಥ ಅದಮ್ಯ ಚೇತನಗಳಿಂದ. ಆದರೆ ಕರ್ನಾಟಕದ ಬಂಡಾಯ ಸಾಹಿತ್ಯ ಚಳವಳಿ ಈಗ ಬೇರೆ ಬೇರೆ ದಿಕ್ಕುಗಳಿಂದ ಪ್ರೇರಣೆಗಳನ್ನು ಪಡೆಯುತ್ತಿದೆ. ಇದಕ್ಕೆ ರಾಜ್ಯದ ರಾಜಕೀಯ, ಸಾಮಾಜಿಕ ಸ್ಥಿತಿಯೂ ಕಾರಣವಿರಬಹುದು.

ಸಾಮಾಜಿಕ ಜೀವನದಲ್ಲಿ ಇಂಥ ಜನಾಂದೋಲನಗಳು ನಿರಂತರವಾಗಿ ನಡೆಯುತ್ತಿದ್ದರೆ ಬಹುಶಃ ಬಂಡಾಯ ಲೇಖಕರು ಅವುಗಳ ಪ್ರಭಾವದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಒಟ್ಟಾರೆ ಅಸ್ತಿತ್ವಕ್ಕೆ ಬಂದ ಕಾಲು ಶತಮಾನದ ನಂತರ ಬಂಡಾಯ ಸಾಹಿತ್ಯ ಸಂಘಟನೆ ವ್ಯವಸ್ಥೆಯ ವಿರುದ್ಧದ ಸಂಘರ್ಷದ ಸ್ವರೂಪದ ಬಗ್ಗೆ ಯಾವ ದಿಕ್ಕಿನತ್ತ ಸಾಗಬೇಕೆಂಬ ಗೊಂದಲದ ಮಡುವಿಗೆ ಬಿದ್ದು ಒದ್ದಾಡುತ್ತಿದೆ. ಪ್ರಭುತ್ವದ ಅಸಲಿ ಸ್ವರೂಪದ ಬಗ್ಗೆ ಬಂಡಾಯ ಸಂಘಟನೆಗೆ ಇಂದಿಗೂ ಸ್ಪಷ್ಟ ಕಲ್ಪನೆಯಿಲ್ಲ.

ವ್ಯವಸ್ಥೆಯ ವಿರುದ್ಧ ರಾಜಿ ರಹಿತ ಹೋರಾಟ ನಡೆಸಬೇಕೆಂಬ ದನಿ ಬಂಡಾಯದಲ್ಲಿ ಕ್ಷೀಣಿಸುತ್ತಿದೆ. ಇಂಥ ಮಾತುಗಳನ್ನಾಡುವವರಿಗೆ ನಕ್ಸಲ್ ಪಟ್ಟ ಕಟ್ಟಿ ಸಮಾನತೆಯ ಹೋರಾಟದ ಚಟ್ಟ ಕಟ್ಟಲು ಹುನ್ನಾರ ನಡೆದಿದೆ. ಈಗ ಐವತ್ತರ ಆಸುಪಾಸಿನಲ್ಲಿರುವ ಬಂಡಾಯದ ಕೆಲ ಲೇಖಕರು ಸುಸ್ತಾಗಿದ್ದಾರೆ. ತಮ್ಮ ಕೊನೆಯ ದಿನಗಳಲ್ಲಿ ಒಂದಿಷ್ಟು ಸುಖ ಸಂತೋಷ ಅನುಭವಿಸುವ ಸಹಜ ಆಸೆ ಅವರಲ್ಲಿ ಮೂಡಿದೆ. ಇಂಥ ಆಸೆಗಳ ಈಡೇರಿಕೆಗಾಗಿ ವ್ಯವಸ್ಥೆಯ ಪ್ರಭುತ್ವದ ಒಳ ಸೇರಿ ಹೋರಾಟ ನಡೆಸಬೇಕೆಂಬ ಹುಸಿ ಸೈದ್ಧಾಂತಿಕ ಸಮರ್ಥನೆಗೆ ಇಂಥ ರಾಜಿಕೋರ ಲೇಖಕರು ಮುಂದಾಗಿದ್ದಾರೆ. ಒಟ್ಟುಸಮುದಾಯದ ಹಿತಾಸಕ್ತಿ ಕಡೆಗಣಿಸಲ್ಪಟ್ಟು ಸ್ವಹಿತಾಸಕ್ತಿ ಪ್ರಾಮುಖ್ಯತೆ ಪಡೆಯುತ್ತಿದೆ. ಜನಪರ ಆಶಯಗಳು ಬಂಡಾಯ ಲೇಖಕರ ಏಣಿಯ ಮೆಟ್ಟಿಲಾಗಿ ಬಳಕೆಯಾಗುವ ಅಪಾಯವಿದೆ.

ಜಾಗತೀಕರಣ, ಖಾಸಗೀಕರಣ, ಕೋಮುವಾದೀಕರಣದ ಇಂದಿನ ಸಂಕೀರ್ಣ ಸನ್ನಿವೇಶದ ಸವಾಲುಗಳನ್ನು ಹೇಗೆ ಸ್ವೀಕರಿಸಿ, ಹೇಗೆ ತನ್ನ ಮುಂದಿನ ದಿಕ್ಕು ದೆಸೆಗಳನ್ನು ನಿರ್ಧರಿಸುತ್ತದೆ ಎಂಬುದರ ಮೇಲೆ ಬಂಡಾಯ ಸಾಹಿತ್ಯ ಸಂಘಟನೆಯ ಅಳಿವು ಉಳಿವು ನಿರ್ಧರಿಸಲ್ಪಡಲಿದೆ.

ಶಿವಮೊಗ್ಗದಲ್ಲಿ ನಡೆದ ಬಂಡಾಯ ಸಾಹಿತ್ಯ ಸಮ್ಮೇಳನದಲ್ಲಿ ಮೂರು ತಲೆಮಾರಿನ ಪ್ರತಿನಿಧಿಗಳು ಪಾಲ್ಗೊಂಡಿದ್ದರು. ಬರಗೂರು, ಜಿ. ಆರ್., ಭಂಡಾರಿ ಅವರಂಥ ಅರವತ್ತರ ಆಸುಪಾಸಿನವರು, ಅವರ ನಂತರದ ಐವತ್ತು ಹಾಗೂ ನಲವತ್ತರ ಆಸುಪಾಸಿನವರು, ಇವರೆಲ್ಲ ರಿಗಿಂತ ಹೆಚ್ಚಾಗಿ ಇಪ್ಪತ್ತರಿಂದ ಮೂವತ್ತರೊಳಗಿನ ತರುಣರು ಬಂಡಾಯದ ಕಾಲು ಶತಮಾನದ ನಡೆಗೆ ಸಾಕ್ಷಿಪ್ರಜ್ಞೆಯಾಗಿದ್ದವರು.

ಸರ್ಕಾರಿ ಅಧಿಕಾರ ಸ್ಥಾನಮಾನಗಳನ್ನು ಅನುಭವಿಸಿದ ಹಿರಿಯರನ್ನು, ಈ ಅವಕಾಶಗಳನ್ನು ನಿರಾಕರಿಸಿದ ಇತರರನ್ನು, ಅನ್ಯಾಯದ ವಿರುದ್ಧ ರಾಜಿರಹಿತ ಮಾತುಗಳನ್ನಾಡಿದ ಶಿವಸುಂದರ, ಸೂಳೀಬಾವಿ ಅಂಥವರನ್ನು ಇಪ್ಪತ್ತರ ಆಸುಪಾಸಿನ ಯುವಕರು ಕುತೂಹಲದ ಕಣ್ಣುಗಳಿಂದ ನೋಡುತ್ತಿದ್ದರು. ಅವರ ಮಾತುಗಳಿಗೆ ಸ್ಪಂದಿಸುತ್ತಿದ್ದರು.

ವೇದಿಕೆಯಲ್ಲಿದ್ದವರಿಗೆ ಈ ತರುಣರು ಪದೇ ಪದೇ ಚೀಟಿ ಕಳಿಸಿ ಇಲ್ಲವೇ ಎದ್ದು ನಿಂತು ಕೇಳುತ್ತಿದ್ದ ಪ್ರಶ್ನೆ ಒಂದೇ : ಬಂಡಾಯದ ನಾಯಕರು ಸ್ಪಷ್ಟವಾಗಿ ಯಾಕೆ ಮಾತಾಡುತ್ತಿಲ್ಲ? ಅಸಮಾನತೆ ವಿರುದ್ಧ ಹೋರಾಡುವ ಸ್ವರೂಪದ ಬಗ್ಗೆ ಗೊಂದಲವೇಕೆ? ಸ್ಪಷ್ಟ ದಾರಿ ತೋರಿಸಿ ಎಂಬುದು ಅವರ ಸವಾಲಾಗಿತ್ತು.

ಬಂಡಾಯ ಸಾಹಿತ್ಯ ಸಮ್ಮೇಳನದಲ್ಲಿ ಹೊಸ ರಕ್ತದ ಯುವಕರು ಸ್ಪಷ್ಟತೆಯ ಬಗ್ಗೆ ಕೇಳಿದ ಪ್ರಶ್ನೆ ಅವರದು ಮಾತ್ರವಲ್ಲ, ಅದು ಈ ಶತಮಾನದ ಈ ಹೊಸ ಪೀಳಿಗೆಯ ಪ್ರಶ್ನೆಯೇ ಆಗಿದೆ. ಈ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವಲ್ಲಿ ಬಂಡಾಯ ಸಾಹಿತ್ಯ ಸಂಘಟನೆ ತನ್ನ ಮುಂದಿನ ದಿಕ್ಕು ದೆಸೆಗಳನ್ನು ನಿರ್ಧರಿಸಬೇಕಾಗಿದೆ.

**ಸನತ್‌ಕುಮಾರ ಬೆಳಗಲಿ**
ಎಲ್. ಎಫ್. ೧೭/೬, ಬಿ.ಡಿ.ಎ. ಫ್ಲಾಟ್ಸ್, ಬಿ.ಟಿ.ಎಂ. ಲೇಔಟ್
ಬೆಂಗಳೂರು - ೫೬೦ ೦೭೬

ಜಾಗತೀಕರಣಗೊಂಡಿರುವ ಈ ಜಗತ್ತಿನಲ್ಲಿ ಇಂದು ಮಾನವ ನಾಗರಿಕತೆಯು ಯಾವ ದಿಕ್ಕಿನಲ್ಲಿ ಸಾಗುತ್ತಿದೆ ಎಂಬುದನ್ನು ಎರಡು ತಂತ್ರಜ್ಞಾನಗಳು ನಿರ್ಧರಿಸುತ್ತಿವೆ. ಅವೆಂದರೆ – ಜೈವಿಕ ತಂತ್ರಜ್ಞಾನ ಹಾಗೂ ಮಾಹಿತಿ ತಂತ್ರಜ್ಞಾನ. ಇವೆರಡೂ ಒಟ್ಟಿಗೆ ಸೇರಿಕೊಂಡು ಟ್ಯಾಂಗೋ (ಪ್ರೇಮನೃತ್ಯ) ನರ್ತಿಸುವುವೋ ಇಲ್ಲವೇ ತಾಂಡವ (ವಿನಾಶ ನೃತ್ಯ) ನರ್ತಿಸುವುವೋ ಯಾರೂ ತಿಳಿಯರು. ಪ್ರಸ್ತುತದಲ್ಲಿ ಇದು ಅಸ್ಪಷ್ಟ. ಆದರೆ ಕೈಗಾರಿಕೀಕೃತ ದೇಶಗಳ ಬಹುರಾಷ್ಟ್ರೀಯ ಕಂಪನಿಗಳು ನಿರ್ವಹಿಸುತ್ತಿರುವ ಪಾತ್ರವನ್ನು ಗಮನಿಸಿದಲ್ಲಿ ಅವು – ಅದರಲ್ಲೂ ವಿಶೇಷವಾಗಿ ಮಾಹಿತಿ ತಂತ್ರಜ್ಞಾನ – ತಾಂಡವ ನೃತ್ಯವನ್ನೇ ನರ್ತಿಸಲಿರುವುವು ಎಂದು ಸ್ಪಷ್ಟವಾಗಿ ಹೇಳಬಹುದು.

ಜೈವಿಕ ತಂತ್ರಜ್ಞಾನದ ಅಥವಾ ತಳಿ-ಎಂಜಿನಿಯರಿಂಗ್‌ನ ಬೀಜವನ್ನು ಬಿತ್ತಿದುದು, ೧೮೬೫ರಲ್ಲಿ, ಕ್ರೈಸ್ತ ಸಂನ್ಯಾಸಿ ಮಠವೊಂದರ ತೋಟದಲ್ಲಿ ಆಸ್ಟ್ರಿಯಾದ ಕ್ರೈಸ್ತ ಪಾದ್ರಿ ಗ್ರೆಗೋರ್ ಮೆಂಡೆಲ್ ಬಟಾಣಿ ಗಿಡವೊಂದರ ಮೇಲೆ ಉಜ್ಜ್ವಲ ಪ್ರಯೋಗಗಳನ್ನು ನಡೆಸಿ ಆನುವಂಶಿಕತೆಯ ನಿಯಮಗಳನ್ನು ಪತ್ತೆಹಚ್ಚಿದಾಗ. ಅವನು ಆನುವಂಶಿಕತೆಯ ಘಟಕವಾದ ಜೀನ್‌ನ ಪ್ರಕಲ್ಪನೆಯನ್ನು ಮುಂದಿಟ್ಟ. ಅನಂತರ ೩೫ ವರ್ಷಗಳ ಕಾಲ ಅದು ಸ್ಥಗಿತಗೊಂಡಿದ್ದಿತು: ಮೆಂಡೆಲ್‌ರ ಮಹಾನ್ ಆವಿಷ್ಕರಣೆ ೧೯ನೆಯ ಶತಮಾನದಾದ್ಯಂತ ವೈಜ್ಞಾನಿಕ ಸಮುದಾಯದ ಗಮನಕ್ಕೆ ಬರಲೇ ಇಲ್ಲ. ೨೦ನೆಯ ಶತಮಾನದ ಆರಂಭದಲ್ಲಷ್ಟೆ ಅದನ್ನು ಪುನಃ ಜೀವಂತಗೊಳಿಸಲಾಯಿತು. ಆಗ ಅದು ತಳಿಶಾಸ್ತ್ರ ಎಂಬ ಒಂದು ಹೊಸ ವಿಜ್ಞಾನ ಶಾಖೆಗೆ ಜನ್ಮನೀಡಿತು. ಮೆಂಡೆಲ್ ಅವರನ್ನು ಸಹಜವಾಗಿಯೇ 'ತಳಿಶಾಸ್ತ್ರದ ಜನ್ಮದಾತ' ಎಂದು ಘೋಷಿಸಲಾಯಿತು. ಆಗ ಬಿತ್ತಿದ ಬೀಜ ಬೇಗನೆಯೇ ಮೊಳಕೆಯೊಡೆದು, ಚಿಗುರಿ ಬೃಹತ್ ವೃಕ್ಷವಾಗಿ ಬೆಳೆಯಿತು. ಇದಕ್ಕೆ ಅವಶ್ಯವಾದ ನೀರು ಎರೆದವರೆಂದರೆ ಥಾಮಸ್ ಎಚ್. ಮಾರ್ಗನ್. ಮಾರ್ಗನ್‌ರ ಆವಿಷ್ಕರಣೆಗಳು ಎಲ್ಲ ಜೀವಂತ ಜೀವಿಗಳ ವಿಘಟನೀಯ ಕೋಶಗಳ ನಾಭಿಕೇಂದ್ರಗಳಲ್ಲಿ ಕಂಡುಬರುವ ಕ್ರೋಮೋಸೋಮ್‌ಗಳೆಂಬ ತಂತುರೂಪದ ಕಾಯ (ವರ್ಣತಂತು) ದಲ್ಲಿ ಸ್ಥಾಪಿತವಾದ ಜೀನ್‌ಗಳ ಭೌತಿಕ ರೂಪವನ್ನು ತೋರಿಸಿಕೊಟ್ಟವು, ತಿಳಿಸಿಕೊಟ್ಟವು. ಅಷ್ಟೇ ಅಲ್ಲ, ಅವರ ಪ್ರಯೋಗಗಳು ೧೯೪೦ರ ದಶಕದಲ್ಲಿ ಜೀನ್ ಸಾಮಗ್ರಿಯ ಆಣ್ವಿಕ ರೂಪವನ್ನು ಮನಗಾಣಲೂ ದಾರಿಮಾಡಿಕೊಟ್ಟವು.

ಈ ಮಧ್ಯೆ, ಹಿಂದಿನ ಸೋವಿಯತ್ ಒಕ್ಕೂಟದ ವಿಜ್ಞಾನಿ ನಿಕೋಲಾಯ್ ಐ. ವಾವಿಲೋವ್‌ರು ತಮ್ಮ ವಿಶ್ವಪರ್ಯಟನೆಯ ಕಾಲದಲ್ಲಿ ಎಂಟು ಬೆಳೆ-ಸಸ್ಯಗಳ ಮೂಲ ಕೇಂದ್ರಗಳನ್ನು ಪತ್ತೆ ಹಚ್ಚಿದರು. ಈ 'ಕೇಂದ್ರ'ಗಳು ಉತ್ತಮ ಜೀನ್‌ಗಳ ಭಂಡಾರಗಳೆಂದೂ, ಅವು ಹೊಸ ಬೆಳೆಗಳ ಸುಧಾರಣೆಗೆ ತುಂಬ ಉಪಯುಕ್ತವಾದವು ಗಳೆಂದೂ ಘೋಷಿಸಿದರು. ಹೀಗೆ ಅವರು ಹೊಸ ಹೊಸ ಬೆಳೆಗಳ ತಳಿ ಸೃಷ್ಟನೆಗೆ ದೃಢವಾದ ಹಾಗೂ ವೈಜ್ಞಾನಿಕವಾದ ಅಡಿಪಾಯ ಹಾಕಿಕೊಟ್ಟರು.

ಅನಂತರ ೧೯೫೩ರಲ್ಲಿ ಜೇಮ್ಸ್ ವ್ಯಾಟ್ಸನ್ ಹಾಗೂ ಫ್ರಾನ್ಸಿಸ್ ಕ್ರಿಕ್ ಅವರು ಡೀಆಕ್ಸಿರೈಬೋನ್ಯೂಕ್ಲಿಯಿಕ್ ಆಮ್ಲ (ಡಿಎನ್‌ಎ)ದ ದ್ವಿಕುಂಡಲಿನಿ (ಡಬಲ್ ಹೆಲಿಕ್ಸ್) ಮಾದರಿಯನ್ನು ಪತ್ತೆಹಚ್ಚಿದುದು ಜೀವವಿಜ್ಞಾನದಲ್ಲಿ ಒಂದು ಕ್ರಾಂತಿಕಾರಿ ಘಟನೆಯಾಗಿದ್ದಿತು. ಅಂದಿನಿಂದ ಈ ವಿಜ್ಞಾನಶಾಖೆ ಅಣುಮೂಲದ್ದಾಗಿ ಪರಿವರ್ತನೆಗೊಂಡು ದಾಪುಗಾಲು ಹಾಕಿಕೊಂಡು ಮುನ್ನಡೆಯುತ್ತಿದೆ. ದ್ವಿಕುಂಡಲಿನಿ ಪತ್ತೆ ಹಚ್ಚಿದ ನಂತರ ಇಪ್ಪತ್ತು ವರ್ಷಗಳೊಳಗೇ ಜೀನ್ ಸಂಕೇತ (ಜೆನೆಟಿಕ್ ಕೋಡ್)ವನ್ನು – ಜೀನ್‌ಗಳ ಭಾಷೆಯನ್ನು – ಪತ್ತೆಹಚ್ಚಲಾಯಿತು. ಫಲವಾಗಿ ಜೀನ್‌ಗಳನ್ನು ಕೃತಕವಾಗಿ ಸಂಶ್ಲೇಷಿಸುವುದು ಸಾಧ್ಯವಾಯಿತು. ಇದು ತಳಿ ಎಂಜಿನಿಯರಿಂಗ್ (ಜೆನೆಟಿಕ್ ಎಂಜಿನಿಯರಿಂಗ್) ಹಾಗೂ ಜೈವಿಕ ತಂತ್ರಜ್ಞಾನಗಳಿಗೆ ಜನ್ಮನೀಡಿತು.

ಹೀಗೆ ೨೦ನೆಯ ಶತಮಾನವು ಮೆಂಡೆಲ್‌ವಾದದ ಪುನರಾವಿಷ್ಕರಣೆಯೊಂದಿಗೆ ಆರಂಭವಾಯಿತು. ಮತ್ತು ಆಣ್ವಿಕ ತಳಿವಿಜ್ಞಾನ (ಮಾಲೆಕ್ಯುಲರ್ ಜೆನೆಟಿಕ್ಸ್)ದ ತಾಂತ್ರಿಕತೆಗಳ ನೆರವಿನಿಂದ ವಿಶಿಷ್ಟ ಜೀನ್‌ಗಳನ್ನು, ಲೈಂಗಿಕ ಅಡೆತಡೆಗಳನ್ನು ದಾಟಿಕೊಂಡು, ವರ್ಗಾವಣೆ ಮಾಡುವ ಸಾಧನೆಯೊಂದಿಗೆ ಕೊನೆಗೊಂಡಿತು. ಆಣ್ವಿಕ ತಳಿವಿಜ್ಞಾನ ಇಂದು ಒಂದು ದೊಡ್ಡ ಆಲದ ಮರವಾಗಿ ಬೆಳೆದಿದೆ. ಜಿನೋಮಿಕ್ಸ್, ಪ್ರೋಟಿಯೊಮಿಕ್ಸ್, ಬಯೋಇನ್‌ಫರ್ಮ್ಯಾಟಿಕ್ಸ್, ಬಯೋ ಟೆಕ್ನಾಲಜಿ ಹಾಗೂ ಜೆನೆಟಿಕ್ ಎಂಜಿನಿಯರಿಂಗ್ – ಇವುಗಳನ್ನು ಅದರ ವಿವಿಧ ಕೊಂಬೆಗಳನ್ನಾಗಿ ಗುರುತಿಸಲಾಗಿದೆ. ಇಂದು ಮಾನವ ಸಂಕ್ಷೇಮದ ಪ್ರತಿಯೊಂದು ಕ್ಷೇತ್ರದಲ್ಲೂ ತಳಿಶಾಸ್ತ್ರದ ಹಾಗೂ

ಡಾ|| ನರಸಿಂಹ ದಯಾಳ್

# ಜೈವಿಕ ತಂತ್ರಜ್ಞಾನ

# ತೃತೀಯ ಜಗತ್ತಿಗೆ ವರವೋ, ಶಾಪವೋ?



ತಳಿತಂತ್ರಜ್ಞಾನದ ಪ್ರಭಾವ ಅಪರಿಮಿತವಾಗಿ ಬೆಳೆದಿದೆ. ಅದೊಂದು ಭಾರಿ ಕೈಗಾರಿಕೆಯಾಗಿಯೇ ವಿಕಾಸಗೊಂಡಿದೆ. ಜೈವಿಕ ತಂತ್ರಜ್ಞಾನವು ೨೧ನೆಯ ಶತಮಾನದಲ್ಲಿ ಮಾನವ ನಾಗರಿಕತೆ ಹಾಗೂ ಸಂಸ್ಕೃತಿಗಳ ದಿಕ್ಕನ್ನೇ ಬದಲಿಸುವ ಸಾಮರ್ಥ್ಯ ಹಾಗೂ ಅಂತಸ್ಸಾಧ್ಯತೆಗಳನ್ನು ಪಡೆದಿದೆಯೆಂದು ಹೇಳಲಾಗುತ್ತಿದೆ. ಹಾಗಾಗಿ ನಾವಿಂದು ಭಾರಿ ತಳಿಕ್ರಾಂತಿಯ ಹೊಸ್ತಿಲಿನಲ್ಲಿ ನಿಂತಿದ್ದೇವೆ.

ಜೈವಿಕ ತಂತ್ರಜ್ಞಾನವು ಇಂದು ಜಗತ್ತಿನಲ್ಲಿ ಒಂದು ಪ್ರಬಲ ಕೈಗಾರಿಕೆಯಾಗಿ ಬೆಳೆದಿದೆ. ತಾನು ಹಸಿವು ಅಪೌಷ್ಟಿಕತೆಗಳನ್ನು ಭೂಮಂಡಲದಿಂದ ಸಂಪೂರ್ಣವಾಗಿ ತೊಡೆದುಹಾಕಿ ಶಾಂತಿ ಸುಖ ಸಮೃದ್ಧಿಗಳ ಹೊಸಯುಗ ಪ್ರಾರಂಭಿಸುವುದಾಗಿ, ಅದು ಹೇಳಿಕೊಳ್ಳುತ್ತಿದೆ. ಹಾಗಾಗಿ ಬಡ ಹಾಗೂ ಅಭಿವೃದ್ಧಿಶೀಲ ದೇಶಗಳು ಕೃಷಿ-ಜೀವತಂತ್ರಜ್ಞಾನ ಹಾಗೂ ಜೈವಿಕ ಕೃಷಿ ವಿಧಾನಗಳನ್ನು ಅಂಗೀಕರಿಸಿ ಪ್ರೋತ್ಸಾಹಿಸುವುದು ಅವಶ್ಯಕವಾಗಿಬಿಟ್ಟಿದೆ. ತಳೀಯವಾಗಿ ಮಾರ್ಪಡಿಸಿದ ಅಥವಾ 'ಟ್ರಾನ್ಸ್‌ಜೆನಿಕ್' (ಕುಲಾಂತರಿ – ಬೇರೊಂದು ಜಾತಿಯಿಂದ ಜೀವದ್ರವ್ಯವನ್ನು ಪಡೆದ) ಬೆಳೆಗಳನ್ನು ಬೆಳೆಯುವುದೇ ಜೈವಿಕ-ಕೃಷಿ ಎನಿಸಿಕೊಳ್ಳುತ್ತದೆ. ಕೃಷಿ ವ್ಯವಸ್ಥೆಯಲ್ಲಿ ಕೃಷಿಜೈವಿಕ ತಂತ್ರಜ್ಞಾನವನ್ನು ಬಳಕೆಗೆ ತರುವುದನ್ನು 'ನಿತ್ಯ ಹರಿತ್ ಕ್ರಾಂತಿ' ಎಂದು ಕರೆಯಲಾಗುತ್ತಿದೆ. ಹೀಗೆ ಇದನ್ನು ೧೯೭೦ರ ದಶಕದ 'ಹಸುರುಕ್ರಾಂತಿ'ಯೊಂದಿಗೆ ಸಂಬಂಧಿಸಲಾಗಿದೆ. ಹಸುರುಕ್ರಾಂತಿಯೇನೋ ಹೆಚ್ಚಿನ ಬೆಳೆ ಬೆಳೆಯಲು ನೆರವಾಯಿತೆಂಬುದರಲ್ಲಿ ಸಂದೇಹವಿಲ್ಲ. ಆದರೆ 'ಹಸುರುಕ್ರಾಂತಿ'ಯು ಅನೇಕ ಧನಾತ್ಮಕ ಪರಿಣಾಮಗಳನ್ನು ಉಂಟು ಮಾಡಿದರೂ ಅದು ಅಭಿವೃದ್ಧಿಶೀಲ ದೇಶಗಳಲ್ಲಿನ ಪಾರಂಪರಿಕ ಕೃಷಿಪದ್ಧತಿಯ ಮೇಲೆ ನಕಾರಾತ್ಮಕ ಪ್ರಭಾವ ಬೀರಿತು ಎಂಬುದನ್ನೂ ಇಲ್ಲಿ ಎತ್ತಿ ತೋರಿಸಬೇಕಾಗಿದೆ. ಈ ಕೃಷಿಪದ್ಧತಿಯು ಕ್ರಿಮಿನಾಶಕಗಳನ್ನು, ರಸಗೊಬ್ಬರಗಳನ್ನು ಮತ್ತು ನೀರಾವರಿ ಸೌಲಭ್ಯಗಳನ್ನು ಬಳಸಿಕೊಂಡು ಆಹಾರೋತ್ಪಾದನೆಯನ್ನು ಹೆಚ್ಚಿಸಿತಷ್ಟೆ ಅಲ್ಲ ಪಾರಂಪರಿಕ ಕೃಷಿಪದ್ಧತಿಯನ್ನು ಸಂಪೂರ್ಣವಾಗಿ ಬೇರೆ ರೀತಿಗೆ ಪರಿವರ್ತಿಸಿತು. ಅದು, ರೈತರು ಶತಶತಮಾನಗಳಿಂದ ಸೃಜಿಸಿಕೊಂಡು ಬಂದಿದ್ದ, ಸ್ಥಳೀಯವಾಗಿ ಅಳವಡಿಸಿಕೊಂಡಿದ್ದ ಬೆಳೆಮಾದರಿಗಳಿಗೆ ಭಂಗತಂದು ಸಂಕರಜಾತಿಯ ಬೆಳೆಗಳನ್ನು ಜಾರಿಗೆ ತಂದಿತು, ರೈತರನ್ನು ಅವರ ಹೊಲಗಳಿಂದ ದೂರ ಸರಿಸಿತು, ಕೃಷಿಪದ್ಧತಿಯಲ್ಲಿ ಬದಲಾವಣೆಗಳನ್ನು ಬಲಾತ್ಕಾರದಿಂದ ಜಾರಿಗೆ ತಂದಿತು. ರೈತರು ಕ್ರಿಮಿನಾಶಕಗಳ ಮೇಲೆ, ರಸಗೊಬ್ಬರಗಳ ಮೇಲೆ ಮತ್ತು ನೀರಾವರಿ ಮೇಲೆ ಅವಲಂಬಿಸಿಕೊಂಡಿರುವಂತೆ ಮಾಡಿತು. ಇದರ ಫಲವಾಗಿ ವ್ಯವಸಾಯದ ಖರ್ಚು ವೆಚ್ಚ ಹೆಚ್ಚಿತು. ಭೂಮಿಯು ಕೆಲವೇ ಶ್ರೀಮಂತ ರೈತರ ಕೈಗಳಲ್ಲಿ ಕೇಂದ್ರೀಕೃತಗೊಳ್ಳುವಂತಾಯಿತು. ಕ್ರಿಮಿನಾಶಕಗಳನ್ನೂ ರಸಗೊಬ್ಬರಗಳನ್ನೂ ಹೆಚ್ಚಿನ ಪ್ರಮಾಣಗಳಲ್ಲಿ ಬಳಸತೊಡಗಿದುದು ಮಣ್ಣಿನ ಫಲವಂತಿಕೆಯನ್ನು ನಾಶಗೊಳಿಸಿತು. ಅದು ಅಂತರ್ಜಲದ ಮಟ್ಟ ಕುಸಿಯುವಂತೆಯೂ ಮಾಡಿತು. ಅಷ್ಟೇ ಅಲ್ಲದೆ ಅದು ಕೃಷಿ ಜೈವಿಕ ವೈವಿಧ್ಯತೆಯ ಮೇಲೂ ಮಾನವ ಆರೋಗ್ಯ ಸ್ಥಿತಿಯ ಮೇಲೂ ನಕಾರಾತ್ಮಕ ಪ್ರಭಾವ ಬೀರಿತು. ಅದು ಸ್ಥಳೀಯ ಕೃಷಿಯನ್ನು ವಸಾಹತೀಕರಿಸಿತು ಮತ್ತು ರೈತರ ಆತ್ಮಾವಲಂಬನೆಯ ಬೇರುಗಳನ್ನೇ ಕಿತ್ತೆಸೆಯಿತು.

ವಿಶ್ವ ವಾಣಿಜ್ಯ ಸಂಸ್ಥೆಯು ಹುಟ್ಟುಹಾಕಿದ 'ಗ್ಯಾಟ್' ಒಪ್ಪಂದದ ನಂತರ, ವಿಶ್ವ ಬ್ಯಾಂಕ್, ಅಂತಾರಾಷ್ಟ್ರೀಯ ಹಣಕಾಸುನಿಧಿ ಹಾಗೂ ಏಷ್ಯನ್ ಅಭಿವೃದ್ಧಿ ಬ್ಯಾಂಕ್ ಇವುಗಳ ಬೆಂಬಲದೊಂದಿಗೆ, ಜೈವಿಕ ಕುಲಾಂತರಿ ಬೆಳೆಗಳ ವ್ಯವಸಾಯವನ್ನು ತೃತೀಯ ಜಗತ್ತಿನಲ್ಲಿ ಪ್ರೋತ್ಸಾಹಿಸಲಾಗುತ್ತಿದೆ. ಜೈವಿಕ ಕೃಷಿಪದ್ಧತಿಯನ್ನು ಆಚರಣೆಗೆ ತರುವುದು ಕೃಷಿಯಲ್ಲಿ 'ನಿತ್ಯಹರಿತ್‌ಕ್ರಾಂತಿ'ಯನ್ನು ಉಂಟುಮಾಡುವುದೆಂದು ಅಭಿವೃದ್ಧಿಶೀಲ ದೇಶಗಳಿಗೆ ಹೇಳಲಾಗುತ್ತಿದೆ. ಜಗತ್ತಿನ ಮುಂದುವರಿದ ಕೈಗಾರಿಕೀಕೃತ ದೇಶಗಳೂ ಅವುಗಳ ಬಹುರಾಷ್ಟ್ರೀಯ ಜೈವಿಕ ತಂತ್ರಜ್ಞಾನ ಕಂಪನಿಗಳೂ ಅಭಿವೃದ್ಧಿಶೀಲ ದೇಶಗಳಲ್ಲಿ ಜೈವಿಕ ಕೃಷಿ ಹಾಗೂ ಕುಲಾಂತರಿ ತಾಂತ್ರಿಕತೆಯನ್ನು ಆಚರಣೆಗೆ ತರುವಂತೆ ಮಾಡಲು ಮತ್ತು ಪ್ರೋತ್ಸಾಹಿಸಲು ಆತುರಾತುರದಿಂದ ಕಾರ್ಯೋನ್ಮುಖವಾಗಿವೆ.

ಆದರೆ ಈ ಕುಲಾಂತರಿ ಬೆಳೆಗಳ ಹಾಗೂ ಆಹಾರ ಪದಾರ್ಥಗಳ ನಿಜವಾದ ಲಕ್ಷಣಗಳೇನೆಂಬುದನ್ನು ಬಳಕೆದಾರರಿಗೆ ತಿಳಿಸುವುದು ಇದೀಗ ಅತ್ಯವಶ್ಯವಾಗಿದೆ. ಜೈವಿಕ ಕೃಷಿಯನ್ನೂ ಜೀನ್ ಪರಿವರ್ತಿತ (ಕುಲಾಂತರಿ) ಆಹಾರ ಪದಾರ್ಥಗಳನ್ನೂ ಐರೋಪ್ಯ ಒಕ್ಕೂಟದ ದೇಶಗಳಲ್ಲಿ ಸಂಪೂರ್ಣವಾಗಿ ತಿರಸ್ಕರಿಸಲಾಗಿದೆ, ಮತ್ತು ಭಾರತವನ್ನು ಒಳಗೊಂಡಂತೆ ಜಗತ್ತಿನ ಅನೇಕ ದೇಶಗಳಲ್ಲಿ ಅವುಗಳ ವಿರುದ್ಧ ಪ್ರತಿಭಟನೆ ಹೆಚ್ಚುತ್ತಿದೆ. ಭಾರತದಲ್ಲಿ ನಾವು ಈಗಾಗಲೇ ತಳಿ-ಎಂಜಿನಿಯರಿಂಗ್, ಸೃಜಿತ ಬಿಟಿ-ಹತ್ತಿ ಕೃಷಿಯ ದುಷ್ಪರಿಣಾಮಗಳನ್ನು ಕಂಡಿದ್ದೇವೆ. ಅದು ಅನೇಕ ರಾಜ್ಯಗಳಲ್ಲಿ ರೈತರಿಗೆ ಸಾಲದ ಬಲೆಯಾಗಿ – ಇಲ್ಲ, ಸಾವಿನ ಬಲೆಯಾಗಿ – ಸಾಧಿತವಾಗಿದೆ.

ತಳಿ-ಎಂಜಿನಿಯರಿಂಗ್ ಎಂದರೇನು ? ಆ ತಂತ್ರಜ್ಞಾನದಲ್ಲಿ ಇರುವ ತಪ್ಪೇನು ? ಕುಲಾಂತರಿ ಬೆಳೆಗಳೂ ಆಹಾರಪದಾರ್ಥಗಳೂ ಸ್ವತಃ ಸುರಕ್ಷಿತವಲ್ಲವೇ ? ಕುಲಾಂತರಿ ತಂತ್ರಜ್ಞಾನವನ್ನು ನಿಯಂತ್ರಿಸುತ್ತಿರುವವರು ಯಾರು ? ಈ ತಾಂತ್ರಿಕತೆಯ ಉತ್ಪನ್ನಗಳು ಯಾರಿಗೆ ಲಭ್ಯ ? ಇದರಲ್ಲಿನ ಪ್ರಧಾನ ಜೈವಿಕ-ಸುರಕ್ಷಿತಾ ಸಮಸ್ಯೆಗಳು ಯಾವುವು ? ಅದು ಇಂದು ನಮ್ಮಲ್ಲಿ ಅಸ್ತಿತ್ವದಲ್ಲಿರುವ ಕೃಷಿಪದ್ಧತಿಯ ಮೇಲೆ ಹಾಗೂ ಕೃಷಿ ವೈವಿಧ್ಯತೆಯ ಮೇಲೆ ಯಾವ ಪ್ರಭಾವ ಬೀರಲಿರುವುದು ? ಎಲ್ಲಕ್ಕೂ ಮಿಗಿಲಾಗಿ, ಅದು ಭಾರತ ಮತ್ತಿತರ ತೃತೀಯ ಜಗತ್ತಿನ ದೇಶಗಳಿಗೆ ಎಷ್ಟರಮಟ್ಟಿಗೆ ಅಂಗೀಕಾರಾರ್ಹ ? ಕುಲಾಂತರಿ ಕೃಷಿಪದ್ಧತಿಯನ್ನು ಅಂಗೀಕರಿಸುವ ಮುನ್ನ ಮೇಲಿನ ಕೆಲವು ಪ್ರಶ್ನೆಗಳನ್ನು ಪರಿಶೀಲಿಸುವುದು ಅವಶ್ಯ.

ತಳಿ-ಎಂಜಿನಿಯರಿಂಗ್ ಒಂದು ಹೊಸ ತಂತ್ರಜ್ಞಾನ. ಜೀವಿಯೊಂದರ ಆನುವಂಶಿಕ ಲಕ್ಷಣಗಳನ್ನು ನಿರ್ಧರಿಸುವ ಜೀನ್‌ಗಳ ಸಮುದಾಯಕ್ಕೆ ಉದ್ದೇಶಪೂರ್ವಕವಾಗಿ ಅಪೇಕ್ಷಿತ ಜೀನ್‌ಗಳನ್ನು ಸೇರಿಸುವ ಮೂಲಕ ಅಥವಾ ಇನ್ನಾವುದೇ ರೀತಿಯಲ್ಲಿ ಜೀನ್‌ಗಳನ್ನು ಬದಲಾಯಿಸುವ ಮೂಲಕ ಜೀವಿಯ ಆನುವಂಶಿಕತೆಯನ್ನು ಬದಲಾಯಿಸುವುದು ಇದರ ಮುಖ್ಯ ಗುರಿ. ಇದು ಅಣುಜೀವವಿಜ್ಞಾನದ ಅನೇಕ ತಂತ್ರಗಳನ್ನು ಬಳಸಿಕೊಳ್ಳುತ್ತದೆ. ತನ್ಮೂಲಕ ಸಸ್ಯಗಳ, ಪ್ರಾಣಿಗಳ ಹಾಗೂ ಸೂಕ್ಷ್ಮಜೀವಿಗಳ ಮೂಲ ತಳಿ-ಪದಾರ್ಥಗಳನ್ನು ಸಹಜ ಪುನರುತ್ಪಾದನೆಯಿಂದ ಅಥವಾ ಸಾಂಪ್ರದಾಯಿಕ ಪೋಷಣ-ಸೃಜನ ವಿಧಾನಗಳಿಂದ ಸೃಜಿಸಲಾಗದಂಥ ರೀತಿಯಲ್ಲಿ, ಬದಲಾಯಿಸುತ್ತದೆ. ವಿಜ್ಞಾನಿಗಳು ಈಗ ಒಂದು ಜೀವಿಜಾತಿಯಿಂದ ಜೀನ್‌ಗಳನ್ನು ಅದರೊಂದಿಗೆ ಸಂಬಂಧವಿಲ್ಲದ ಮತ್ತೊಂದು ಜೀವಿಜಾತಿಗೆ ವರ್ಗಾಯಿಸಬಲ್ಲರು – ಪ್ರಾಣಿಗಳಿಂದ ಸಸ್ಯಗಳಿಗೆ ಅಥವಾ ಬ್ಯಾಕ್ಟೀರಿಯಾಗಳಿಂದ ಸಸ್ಯಗಳಿಗೆ ಹಾಗೂ ಮಾನವರಿಗೂ ಸಹ, ವರ್ಗಾಯಿಸಬಲ್ಲರು. ಉದಾಹರಣೆಗೆ, ಒಂದು ಮೀನಿನಿಂದ ಜೀನ್‌ಗಳನ್ನು ಹೊರತೆಗೆದು ಅವನ್ನು ಒಂದು ಟೊಮಾಟೋ ಸಸ್ಯಕ್ಕೆ ಅದರ ಆಹಾರ-ಪ್ರತಿರೋಧ ಹೆಚ್ಚಿಸಲೆಂದು ಅಥವಾ ಕ್ರಿಮಿ-ನಿರೋಧಕತೆಯನ್ನು ಹೆಚ್ಚಿಸಲೆಂದು ವರ್ಗಾಯಿಸಬಹುದಾಗಿದೆ. ಹೀಗೆ ಬ್ಯಾಕ್ಟೀರಿಯಾದಿಂದ ಸಸ್ಯಕ್ಕೆ ಜೀನ್‌ಗಳನ್ನು ವರ್ಗಾಯಿಸಬಹುದಾಗಿದೆ. 'ಬಿಟಿ-ಹತ್ತಿ' ವಿಷಯದಲ್ಲಿ ಇದನ್ನೇ ಮಾಡಲಾಗುತ್ತಿದೆ.

ತಳಿ-ಎಂಜಿನಿಯರಿಂಗ್ ಒಂದು ಸಾಂಸ್ಥಿಕ ತಂತ್ರಜ್ಞಾನ. ಆರು ಸಂಸ್ಥೆಗಳು – ಮಾನ್ಸಾಂಟೋ, ಸಿಂಗೆಂಟೋ, ಬೇಯರ್ ಕ್ರಾಪ್‌ಸೈನ್ಸ್, ಡ್ಯು-ಪಾಂಟ್, ಡೌವ್ ಹಾಗೂ ಬಿಎಎಸ್‌ಎಫ್ ಪ್ಲಾಂಟ್ ಸೈನ್ಸ್ ಈ ಆರು ಸಂಸ್ಥೆಗಳು – ಅದರ ಮೇಲೆ ಖಾಸಗಿ ಒಡೆತನ ಪಡೆದಿವೆ. ಇವು ಕುಲಾಂತರಿ ಬೆಳೆ ಕ್ಷೇತ್ರದಲ್ಲಿ ಇಡೀ ಸಂಶೋಧನೆ ಹಾಗೂ ಹುಟ್ಟುವಳಿಯ ಮೇಲೆ ನಿಯಂತ್ರಣ ಪಡೆದಿವೆ. ಸಂಶೋಧನಾ ವಿಧಾನ, ಪ್ರಕ್ರಿಯೆ ಹಾಗೂ ತಳಿ ಉತ್ಪನ್ನಗಳೆಲ್ಲ 'ಐ ಪಿ ಆರ್' ವ್ಯವಸ್ಥೆಯಲ್ಲಿ ಹಾಗೂ ವಿಶ್ವವಾಣಿಜ್ಯ ಸಂಸ್ಥೆಯ ಒಪ್ಪಂದಗಳಲ್ಲಿ ಪರಸ್ಪರ ಸಂಬಂಧಿತವಾಗಿವೆ. ಹಾಗಾಗಿ ಸಾಮಾನ್ಯ ರೈತರಿಗೆ ಇದರಲ್ಲಿ ಯಾವ ಪಾತ್ರವೂ ಇಲ್ಲ. ಈ ತಂತ್ರಜ್ಞಾನ ಸೃಜಿಸುವ ವಸ್ತುಗಳೆಲ್ಲ ಖಾಸಗಿ ಒಡೆತನದಲ್ಲಿವೆ. ಅವುಗಳ ಬೆಲೆ ಅತಿ ಹೆಚ್ಚು. ಅವು ಸಾಮಾನ್ಯ ರೈತರ ಕೈಗೆ ಎಷ್ಟು ಮಾತ್ರವೂ ಎಟುಕವು. ಬೀಜವು ಕಂಪನಿಗೆ ಸೇರಿದುದು. ಬೀಜದ ಸರಬರಾಜು ಮಾರಾಟಗಳೆಲ್ಲ ಕಂಪನಿಯ ನಿಯಂತ್ರಣದಲ್ಲಿರುತ್ತವೆ.

> **ಜಾಗತೀಕರಣಗೊಂಡಿರುವ ಈ ಜಗತ್ತಿನಲ್ಲಿ ಇಂದು ಮಾನವ ನಾಗರಿಕತೆಯು ಯಾವ ದಿಕ್ಕಿನಲ್ಲಿ ಸಾಗುತ್ತಿದೆ ಎಂಬುದನ್ನು ಎರಡು ತಂತ್ರಜ್ಞಾನಗಳು ನಿರ್ಧರಿಸುತ್ತಿವೆ. ಅವೆಂದರೆ – ಜೈವಿಕ ತಂತ್ರಜ್ಞಾನ ಹಾಗೂ ಮಾಹಿತಿ ತಂತ್ರಜ್ಞಾನ. ಇವೆರಡೂ ಒಟ್ಟಿಗೆ ಸೇರಿಕೊಂಡು ಟ್ಯಾಂಗೋ (ಪ್ರೇಮನೃತ್ಯ) ನರ್ತಿಸುವುವೋ ಇಲ್ಲವೇ ತಾಂಡವ (ವಿನಾಶ ನೃತ್ಯ) ನರ್ತಿಸುವುವೋ ಯಾರೂ ತಿಳಿಯರು. ಪ್ರಸ್ತುತದಲ್ಲಿ ಇದು ಅಸ್ಪಷ್ಟ. ಆದರೆ ಕೈಗಾರಿಕೀಕೃತ ದೇಶಗಳ ಬಹುರಾಷ್ಟ್ರೀಯ ಕಂಪನಿಗಳು ನಿರ್ವಹಿಸುತ್ತಿರುವ ಪಾತ್ರವನ್ನು ಗಮನಿಸಿದಲ್ಲಿ ಅವು – ಅದರಲ್ಲೂ ವಿಶೇಷವಾಗಿ ಮಾಹಿತಿ ತಂತ್ರಜ್ಞಾನ – ತಾಂಡವ ನೃತ್ಯದಲ್ಲೇ ತೊಡಗಿವೆ ಎಂದು ಸ್ಪಷ್ಟವಾಗಿ ಹೇಳಬಹುದು.**

'ಅಂತಕ' (ಟರ್ಮಿನೇಟರ್) ಬೀಜ ತಂತ್ರಜ್ಞಾನದ ಬೆಳವಣಿಗೆಯು ರೈತರನ್ನು ಗುಲಾಮಗಿರಿಗೆ ತಳ್ಳುತ್ತದೆ. ಈ 'ಅಂತಕ' ಬೀಜಗಳು ಮುಂದಿನ ಪೀಳಿಗೆಯಲ್ಲಿ ಬರಡು ಬೀಜಗಳನ್ನು ಉತ್ಪಾದಿಸುತ್ತವೆ. ಹಾಗಾಗಿ ರೈತರು ಪ್ರತಿವರ್ಷವೂ ಬೀಜಗಳನ್ನು ಕಂಪನಿಯಿಂದ ಹೊಸದಾಗಿ ಕೊಂಡುಕೊಳ್ಳಬೇಕಾಗುತ್ತದೆ. ಕೃಷಿ-ಜೈವಿಕ ತಂತ್ರಜ್ಞಾನದ ದೈತ್ಯ ಕಂಪನಿಗಳು – 'ನಿತ್ಯಹರಿತ್‌ಕ್ರಾಂತಿ'ಯ ಪ್ರತಿಪಾದಕರು – ಏನೆಲ್ಲ ಆಡಂಬರದ ಮಾತುಗಳನ್ನಾಡಿದರೂ, ಹಸಿವು ಅಪೌಷ್ಟಿಕತೆಯನ್ನು ಹೋಗಲಾಡಿಸುವುದಕ್ಕೆ ನೇರವಾಗಿ ಸಂಬಂಧಿಸಿದಂಥ ಏಕೈಕ ಬೆಳೆ ಮಾದರಿಯನ್ನೂ ಸಿದ್ಧಗೊಳಿಸಿಲ್ಲ. ಅವು ಹೆಚ್ಚಾಗಿ ಕಳೆ-ನಿರೋಧಕ ಅಥವಾ ಕ್ರಿಮಿ-ನಿರೋಧಕ ಬೆಳೆ ಮಾದರಿಗಳನ್ನಷ್ಟೇ ತಯಾರಿಸಿವೆ.

ತಾವು ಸಿದ್ಧಗೊಳಿಸಿರುವ ಬೆಳೆಗಳ ಕುಲಾಂತರಿ ಬೀಜಗಳು ಅಭಿವೃದ್ಧಿಶೀಲ ದೇಶಗಳ ರೈತರಿಗೆ ಅತ್ಯುಪಕಾರಿ. ಏಕೆಂದರೆ, ಅವರು ಗೊಬ್ಬರ ಹಾಗೂ ಕ್ರಿಮಿನಾಶಕಗಳಿಗಾಗಿ ಮಾಡುವ ಖರ್ಚು ಬಹಳಷ್ಟು ತಗ್ಗುತ್ತದೆ, ಎಂದು ಈ ರಾಷ್ಟ್ರಾತೀತ ಜೈವಿಕ ತಂತ್ರಜ್ಞಾನ ಕಂಪನಿಗಳು ಭರವಸೆ ನೀಡುತ್ತಿವೆ. ಅವು ಭಾರಿ ಪ್ರಚಾರ ಹಾಗೂ ಸರಕಾರೀ ಸಂಸ್ಥೆಗಳ ಮೇಲೆ ಎಲ್ಲ ರೀತಿಯ ಪ್ರಭಾವ ಬೀರುವ ಮೂಲಕ ತಮ್ಮ ಉತ್ಪನ್ನಗಳ ಬಗೆಗೆ ನಾನಾ ಬಗೆಯ ಹಕ್ಕು ಸಾಧಿಸುತ್ತಿವೆ. ವೈಟಮಿನ್-ಎ ಅಧಿಕವಾಗಿರುವ ತಮ್ಮ 'ಚಿನ್ನದ ಅಕ್ಕಿ'ಯು (ಬಂಗಾರದ ಬತ್ತವು) ಏಷ್ಯನ್ ದೇಶಗಳಲ್ಲಿನ ಮಕ್ಕಳನ್ನು ರಾತ್ರಿಗುರುಡಿನಿಂದ ಪಾರುಮಾಡುತ್ತದೆಂದು ಹೇಳಿಕೊಳ್ಳುತ್ತಿವೆ. ಅದೇ ರೀತಿ ತಮ್ಮ ಆಲೂಗೆಡ್ಡೆ (ಪೊಟ್ಯಾಟೋ – ಇದನ್ನವು 'ಪ್ರೊಟ್ಯಾಟೋ' ಎಂದು ಕರೆಯುತ್ತವೆ) ಹಸಿವು, ಅಪೌಷ್ಟಿಕತೆಯನ್ನು ನಿವಾರಿಸುತ್ತದೆಂದು ಪ್ರತಿಪಾದಿಸುತ್ತಿವೆ. ಹೀಗೆ ಅವು ಅಭಿವೃದ್ಧಿಶೀಲ ದೇಶಗಳಿಗೆ ನಾನಾರೀತಿಯ 'ಕನಸು'ಗಳನ್ನು ಮಾರಬಯಸುತ್ತಿವೆ.

ಇದುವರೆವಿಗೂ ಯಾವುದೇ ಕೃಷಿಕ್ರಾಂತಿಯೂ ಹಸಿವು ಅಪೌಷ್ಟಿಕತೆಗಳನ್ನು ತೊಡೆದು ಹಾಕುವುದರಲ್ಲಿ ಯಶಸ್ವಿಯಾಗಿಲ್ಲವೆಂಬುದನ್ನು ನಾವು ಗಮನದಲ್ಲಿಟ್ಟಿರಬೇಕು. ಹಸಿವು ಒಂದು ಸಾಮಾಜಿಕ ಸಮಸ್ಯೆಯೇ ಹೊರತು ಉತ್ಪಾದನಾ ತಾಂತ್ರಿಕತೆಯ ಸಮಸ್ಯೆಯಲ್ಲ. ಜಗತ್ತಿನಲ್ಲಿ ೮೦೦ ಮಿಲಿಯ ಜನ ಹಸಿವಿನಿಂದ ನರಳುತ್ತಿರುವುದಕ್ಕೆ ಮಿತಿಮೀರಿದ ಜನಸಂಖ್ಯೆಯೇ ಕಾರಣ ಎಂದು ಹೇಳಲಾಗದು. ಭಾರತದಲ್ಲಿ ಐದು ವರ್ಷಕ್ಕೂ ಕಡಿಮೆ ವಯಸ್ಸಿನ ಮಕ್ಕಳಲ್ಲಿ ಅರ್ಧದಷ್ಟು ಮಂದಿ ಅಪೌಷ್ಟಿಕತೆಯಿಂದ ತೊಳಲುತ್ತಿದ್ದಾರೆ, ನವಜಾತ ಶಿಶುಗಳಲ್ಲಿ ನೂರಕ್ಕೆ ಮೂವತ್ತು ಶಿಶುಗಳು ಕಡಿಮೆ ತೂಕದವರು. ದೇಶದಲ್ಲಿ ಸಾಕಷ್ಟು ಆಹಾರವಿದ್ದರೂ ಶೇ. ೬೦ರಷ್ಟು ಮಹಿಳೆಯರು ನಿತ್ರಾಣರಾಗಿದ್ದಾರೆ. ಗ್ರಾಮಾಂತರದ ಹಸಿವು ಬಡತನಗಳಿಗೆ ಅನೇಕ ಕಾರಣಗಳುಂಟು. ಸಂಪನ್ಮೂಲಗಳು ಲಭ್ಯವಿಲ್ಲದಿರುವುದು, ಭೂ ಹಿಡುವಳಿ ಹಾಗೂ ಆಹಾರ ವಿತರಣಾ ವಿಧಾನಗಳು, ಅಧಿಕಾರ ಸಂಬಂಧ ಹಾಗೂ ಅಸಮಾನತೆ, ಅವಿದ್ಯೆ, ರಾಜಕೀಯ ಶಕ್ತಿರಾಹಿತ್ಯ, ವಿಶ್ವವಾಣಿಜ್ಯ ಸಂಸ್ಥೆಯ ಅನುಚಿತ ಷರತ್ತುಗಳು – ಹೀಗೆ ಹತ್ತುಹಲವಾರು ಕಾರಣಗಳಿವೆ.

ತಳಿ-ಪರಿವರ್ತಿತ (ಕುಲಾಂತರಿ) ಮಾದರಿ ಬೆಳೆಗಳು ಪಾರಂಪರಿಕ ಸಸ್ಯಪ್ರಜನನ ಹಾಗೂ ಆಯ್ಕೆ ವಿಧಾನಗಳಿಂದ ವಿಕಾಸಗೊಳಿಸಿದ್ದ ಆಗಲೇ ಅಸ್ತಿತ್ವದಲ್ಲಿರುವ ಬೆಳೆಗಳಿಗಿಂತ ಯಾವ ರೀತಿಯಲ್ಲೂ ಉಚ್ಚತರವಲ್ಲವೆಂದು ವೈಜ್ಞಾನಿಕ ಅಧ್ಯಯನಗಳು ತೋರಿಸಿಕೊಟ್ಟಿವೆ.

ಅಂಧತ್ವ ನಿವಾರಿಸುವುದೆಂದು ಪ್ರಚಾರಮಾಡಿ ಜನರ ಮುಂದೊಡ್ಡುತ್ತಿರುವ 'ಚಿನ್ನದ ಅಕ್ಕಿ'ಯ ವಿಷಯದಲ್ಲೂ ಯಾವುದೇ ಸಮರ್ಥನೀಯ ವೈಜ್ಞಾನಿಕ ಆಧಾರಗಳಿಲ್ಲ. ಅವರ ಪ್ರಕಾರ, ಮಗುವು ಕುರುಡುತನ ಹೋಗಲಾಡಿಸಿಕೊಳ್ಳಲು, ಸಾಕಷ್ಟು ಪ್ರಮಾಣದಲ್ಲಿ ವೈಟಮಿನ್-ಎ ಪಡೆಯಲು ಪ್ರತಿದಿನವೂ ೯ ಕೆ.ಜಿ. 'ಚಿನ್ನದ ಅಕ್ಕಿ'ಯ ಅನ್ನ ಊಟ ಮಾಡಬೇಕಾಗುತ್ತದೆ! ಇದರ ಬದಲು ಮಗುವು ಪ್ರತಿದಿನವೂ ಕೇವಲ ಎರಡು ಕ್ಯಾರಟ್ ತಿಂದರೆ ಸಾಕು. ಅದಕ್ಕೆ ಬೇಕಾದಷ್ಟು ವೈಟಮಿನ್-ಎ ಲಭ್ಯವಾಗುತ್ತದಲ್ಲವೇ? ಪ್ರೋಟೀನ್-ಸಿರಿವಂತ 'ಪ್ರೊಟ್ಯಾಟೊ' ವಿಷಯ



ದಲ್ಲೂ ಇದೇ ನಿಜ. ಕುಲಾಂತರಿ ಬೆಳೆಗಳೂ ಆಹಾರ ಪದಾರ್ಥಗಳೂ ಜೀವವಿಜ್ಞಾನದ ದೃಷ್ಟಿಯಿಂದ ಸುರಕ್ಷಿತವಲ್ಲದವು. ತಳಿ-ಪರಿವರ್ತಿತ ಆಹಾರ ಪದಾರ್ಥಗಳು ನಾನಾ ರೀತಿಯ ಅಪಾಯಕಾರಿ ಆಹಾರ-ಅಲರ್ಜಿ (ಒಗ್ಗದಿರುವಿಕೆ) ಉಂಟುಮಾಡಬಹುದು, ಅನೇಕ ಅನಿಶ್ಚಿತ ಹಾಗೂ ಅನಿರೀಕ್ಷಿತ ರೋಗಗಳಿಗೆ ದಾರಿಮಾಡಿಕೊಡಬಹುದು. ತಳಿ-ಪರಿವರ್ತಿತ ಬೆಳೆಗಳು ಈಗಾಗಲೇ ಅಸ್ತಿತ್ವದಲ್ಲಿರುವ ಬೆಳೆ-ಮಾದರಿಗಳಿಗೆ ತಳೀಯ ಸಂಕರ ಉಂಟುಮಾಡಬಹುದು. ಮೆಕ್ಕೆಜೋಳದ ಹುಟ್ಟುರಾಷ್ಟ್ರವೆಂದು ಪ್ರಸಿದ್ಧವಾದ ಮೆಕ್ಸಿಕೋದಲ್ಲಿ ಮೆಕ್ಕೆಜೋಳ ಬೆಳೆಗಳಿಗೆ ಹೀಗೆಯೇ ಆಯಿತು. ಕುಲಾಂತರಿ ಬೆಳೆಗಳು ತಳೀಯ ಸಂಕರದ ಮೂಲಕ ಉಚ್ಚತರ ಕಳೆಗಳನ್ನು ಉಂಟುಮಾಡಿ ಅಕ್ಕಪಕ್ಕದ ಬೆಳೆಗಳಿಗೂ ಭಾರಿ ಗಂಡಾಂತರ ತಂದೊಡ್ಡಿದವು. ಹಾಗಾಗಿ ತಳಿ-ಪರಿವರ್ತಿತ ಬೆಳೆಗಳೂ ಪಾರಂಪರಿಕ ಬೆಳೆಗಳೂ ಪಕ್ಕಪಕ್ಕದಲ್ಲೇ ಜೊತೆಗೂಡಿ ಇರುವುದು ಸಾಧ್ಯವಿಲ್ಲ. ಮಾನ್ಸಾಂಟೋ ಕಂಪನಿಯ 'ಬಿಟಿ-ಹತ್ತಿ ಮಾದರಿಗಳೂ' ಇಂತಹುದೇ ಅನಾಹುತ ಉಂಟುಮಾಡಿವೆ. ಅವು ತಮ್ಮ ಗುರಿಗೂ ಮೀರಿ ಅನೇಕ ಇತರ ಕೀಟಗಳನ್ನು ನಾಶಮಾಡಿ ಹಿಂದೆ ನಿಸರ್ಗದಲ್ಲಿ ಅಸ್ತಿತ್ವದಲ್ಲಿರದಿದ್ದಂಥ ಹೊಸ ಜೀವಿಗಳನ್ನು ಸೃಜಿಸಿವೆ. ಅವನ್ನು ಮತ್ತೆ ನಿರ್ನಾಮ ಮಾಡಲು ಸಾಧ್ಯವಿಲ್ಲವಾಗಿದೆ. ತಳಿ-ಪರಿವರ್ತಿತ ತಂತ್ರಜ್ಞಾನವು ಅಸಹಜವಾದುದು, ಪ್ರಕೃತಿ-ವಿರುದ್ಧವಾದುದು. ಇದು ಉತ್ತಮವೆಂದು ಪ್ರಯೋಗಗಳಿಂದ ಸಾಧಿತವಾದುದಲ್ಲ, ಊರ್ಜಿತ ಕೃಷಿ ನಿಯಮಗಳಿಗೆ ವಿರುದ್ಧವಾದುದು. ಜೈವಿಕ ವೈವಿಧ್ಯತೆಯಿಂದ ಸಂಪದ್ಭರಿತವಾದ ಆದರೆ, ಜೈವಿಕತಂತ್ರಜ್ಞಾನದಲ್ಲಿ ಹಿಂದುಳಿದ ತೃತೀಯ ಜಗತ್ತಿನ ದೇಶಗಳು 'ಜೈವಿಕ ವೈವಿಧ್ಯತೆಯ ಸಮ್ಮೇಳನ'ದ ೮ನೇ ಹಾಗೂ ೧೫ನೇ ನಿಬಂಧನೆಗಳು ಒಳಗೊಂಡಿರುವ ಲಾಭಹಂಚಿಕೆಯ ನೈತಿಕ ಹಾಗೂ ಸಮಾನತಾ ಸೂತ್ರಗಳನ್ನು ಒಪ್ಪದಂತೆ ಮಾಡಿದಲ್ಲಿ ತುಂಬ ಪ್ರತಿಕೂಲ ಪರಿಣಾಮಗಳು ಉಂಟಾಗುತ್ತವೆ. ಜೈವಿಕ ವೈವಿಧ್ಯತೆಯ ಸಮ್ಮೇಳನವು ಜೀವವೈವಿಧ್ಯತೆಗೆ ಸಂಬಂಧಿಸಿದಂತೆ ಸಾಂಪ್ರದಾಯಿಕ ತಿಳಿವಳಿಕೆಯನ್ನು ಬಳಸಿಕೊಳ್ಳುವುದರ ಪರವಾಗಿದ್ದರೂ, ಅದನ್ನು ಆಚರಣೆಗೆ ತರಲು ಸಾಧ್ಯವಾಗುತ್ತಿಲ್ಲ.

ಐರೋಪ್ಯ ಒಕ್ಕೂಟದಿಂದ ತಿರಸ್ಕರಿಸಲ್ಪಟ್ಟು, ಕೈಗಾರಿಕೀಕೃತ ದೇಶಗಳಲ್ಲಿ ಹೆಚ್ಚುಹೆಚ್ಚಿನ ಪ್ರತಿರೋಧ ಎದುರಿಸುತ್ತಿರುವ ಜೈವಿಕ ತಂತ್ರಜ್ಞಾನ ಕಂಪನಿಗಳು ತಮ್ಮ ಗಮನವನ್ನು ಈಗ ಸಂಪದ್ಭರಿತ ಜೈವಿಕ ವೈವಿಧ್ಯತೆಯುಳ್ಳ ಆದರೆ ಯಂತ್ರತಾಂತ್ರಿಕವಾಗಿಯೂ ಆರ್ಥಿಕವಾಗಿಯೂ ಬಡವಾದ ಏಷ್ಯ, ಆಫ್ರಿಕ ಹಾಗೂ ಲ್ಯಾಟಿನ್-ಅಮೆರಿಕಾ ದೇಶಗಳತ್ತ ಕೇಂದ್ರೀಕರಿಸಿವೆ. ವಾವಿಲೋವ್‌ರ ೮ 'ಜೀನ್ ಕೇಂದ್ರ'ಗಳು ಬಹುಮಟ್ಟಿಗೆ ಈ ದೇಶಗಳಲ್ಲೇ ಸ್ಥಾಪಿತವಾಗಿವೆ. ಈ ದೇಶಗಳಲ್ಲಿ ಅವುಗಳ ಪರಂಪರೆ, ಸಂಸ್ಕೃತಿ ಹಾಗೂ ಭಾಷೆಗಳು ಹೇಗೋ ಹಾಗೆ ಅವುಗಳ ಆನುವಂಶಿಕ ತಳಿಬೆಳೆ ಮಾದರಿಗಳೂ ಅವುಗಳಿಗೆ ಒಂದೊಂದಕ್ಕೂ ವಿಶಿಷ್ಟವಾಗಿವೆ. ಹಾಗಾಗಿ ಈ ದೇಶಗಳಲ್ಲಿ ಸೂಕ್ತ ಚಿಂತನೆ ಹಾಗೂ ಸಾರ್ವಜನಿಕ ಚರ್ಚೆ ಇಲ್ಲದೆಯೇ ತಳಿ-ಪರಿವರ್ತನೀಯ ತಂತ್ರಜ್ಞಾನವನ್ನೂ ಕುಲಾಂತರಿ ಆಹಾರ ಪದಾರ್ಥಗಳನ್ನೂ ಒಪ್ಪಿಕೊಳ್ಳುವುದು, ಆಚರಣೆಗೆ ತರುವುದು, ಭಾರಿ ವಿಪತ್ಕಾರಕವಾಗುತ್ತದೆ – ಇಲ್ಲ, ಆತ್ಮಹತ್ಯಾಕಾರಕವಾಗುತ್ತದೆ.

ಆದರೆ ಕೃಷಿ ಜೈವತಂತ್ರಜ್ಞಾನ ಪ್ರತಿಪಾದಕರು, ಉತ್ತೇಜಕರು, ಜೈವವೈವಿಧ್ಯತೆಯನ್ನೂ ಪರಿಸರವನ್ನೂ ಸಂರಕ್ಷಿಸುವುದಕ್ಕೆ ಸಂಬಂಧಿಸಿ ಅಧಿಕೃತವಾಗಿ ತಾವು ಅವರ ಪರ ಇರುವುದಾಗಿ ಸೋಗುಹಾಕಿದರೂ, ಅವರು ಎಷ್ಟು ಮಾತ್ರವೂ ಅದರ ಬಗೆಗೆ ಆಸಕ್ತಿ ಪಡೆದಿಲ್ಲ. ಅವರು ಐಪಿಆರ್ ಹಾಗೂ ಪೇಟೆಂಟ್ ಮೂಲಕ ಕೃಷಿಯ ಜಗತ್ತಿನ ತಳಿ-

(೬೦ನೇ ಪುಟಕ್ಕೆ)



## ದೇಸಿ ಜೀವನ ಪದ್ಧತಿ

ಪ್ರಸನ್ನ

**ಪುಟ : ೧೩೦** **ಬೆಲೆ : ರೂ. ೧೦೦**

**ಒಂಟಿದನಿ ಪ್ರಕಾಶನ,** ಕವಿ ಕಾವ್ಯ ಟ್ರಸ್ಟ್, ಹೊನ್ನೇಸರ, ಹೆಗ್ಗೋಡು - ೫೭೭ ೪೧೭ ತಾಲ್ಲೂಕು : ಸಾಗರ

ರಂಗಭೂಮಿಯಲ್ಲಿ ಅನೇಕ ಪ್ರಯೋಗ ಮಾಡಿ ಯಶಸ್ವಿಯಾದ ಖ್ಯಾತ ನಿರ್ದೇಶಕ ಪ್ರಸನ್ನರ ಈ ಕೃತಿ ನಮ್ಮ ರೂಢಿಗತ ಜೀವನ ಕ್ರಮದ ಬಗ್ಗೆ ಮರುಚಿಂತನೆ ಮಾಡುವುದಕ್ಕೆ ಪ್ರೇರೇಪಿಸುತ್ತದೆ. ದೇಸಿ ಜೀವನದ ಬಗೆಗೆ ತಮ್ಮಲ್ಲಿ ಮೂಡುತ್ತಿದ್ದ ಚಿಂತನೆಗಳನ್ನು ಗೆಳೆಯರು ಹಿತೈಷಿಗಳೆದುರಿಗೆ ಹಂಚಿಕೊಳ್ಳುತ್ತ ಕಡೆಗೆ ಅದಕ್ಕೊಂದು ಮೂರ್ತರೂಪ ಕೊಟ್ಟಿದ್ದಾರೆ. ನಾವುಗಳು ಇಂದು ಬಳಸುತ್ತಿರುವ ಡಿಟರ್ಜೆಂಟ್‌ಗಳು, ಬಟ್ಟೆಗಳಿಗೆ ಇಸ್ತ್ರಿ, ಮೈಕೊಳೆ ತೊಳೆದುಕೊಳ್ಳಲಿಕ್ಕೆ ಬಳಸುವ ಸೋಪು ಮುಂತಾದವುಗಳಿಂದ ಪ್ರಾರಂಭವಾಗುವ ಚಿಂತನೆ ನಮಗೆ ಇವತ್ತು ಹೊಸದೆನಿಸಬಹುದಾದ ಆಯಾಮವನ್ನು ರೂಢಿಸಿಕೊಳ್ಳುತ್ತ ಕೆಲಮಟ್ಟಿಗೆ ಅದನ್ನು ಅನುಸರಿಸಿ ನೋಡುವ ಮಟ್ಟಕ್ಕೂ ಪ್ರೇರೇಪಿಸುತ್ತದೆ.



## ಒಂದೇ ಕಾಲು - ಮೂರು ಕೋಲು

(ಆತ್ಮಕಥೆ)

ಎನ್. ಪಿ. ಶಂಕರನಾರಾಯಣರಾವ್

**ಪುಟ : viii+೨೭೨** **ಬೆಲೆ : ರೂ. ೧೬೦**

**ಅಳಿಲು ಸೇವಾ ಸಂಸ್ಥೆ,** ನಂ. ೧೩೩, ಮೊದಲನೇ ಮಹಡಿ, ಕೆ.ಆರ್.ರಸ್ತೆ, ಓಬಳಪ್ಪ ಗಾರ್ಡನ್, ಬೆಂಗಳೂರು-೮೨




ಎನ್. ಪಿ. ಶಂಕರನಾರಾಯಣರವರ ಆತ್ಮಕಥನ ಇದು. ಪ್ರತಿಯೊಬ್ಬ ಮಹತ್ವದ ಲೇಖಕನೂ ತನ್ನ ಜೀವನ ಗಾಥೆಯನ್ನು ತನ್ನ ನಂಬಿಕೆಗನುಸಾರ ವಿಶ್ಲೇಷಿಸಿಕೊಳ್ಳುತ್ತಾನೆ. ಕೆಲವರು ವಿಚಾರವಾದಿಗಳಾಗಿ ಕಂಡುಬಂದರೆ, ಮತ್ತೆ ಕೆಲವರ ನೋಟಕ್ರಮದಲ್ಲಿ ಪೂರಾ ಪೂರಾ ದೈವಗಳನ್ನಾಧರಿಸಿದ ನಂಬಿಕೆ ಇತ್ಯಾದಿ. ಆತ್ಮಕಥನಗಳನ್ನು ಕೇವಲ ವಸ್ತುನಿಷ್ಠವಾಗಿ ಓದುವ ಪರಿಪಾಠ ಬೆಳೆಯಬೇಕು. ಈ ಕೃತಿಯಲ್ಲಿನ ನಿರೂಪಣೆಗಳಲ್ಲಿ ಎಲ್ಲೂ ನಾಟಕೀಯತೆ ಇದೆ ಎನಿಸುವುದಿಲ್ಲ. ತಮ್ಮ ನೆನಪಿಗೆ ದಕ್ಕಿದ್ದನ್ನು ಹಾಗಾಗೇ ಬರೆದಿರುವುದು ಇಲ್ಲಿ ಕಾಣುವ ವೈಶಿಷ್ಟ್ಯ.

## ಸದ್ಯಕಿದು ಹುಚ್ಚರ ಸಂತೆ (೧೯೪೭ರ ಕಥಾನಕಗಳು)

ಸಾದತ್ ಹಸನ್ ಮಂಟೊ

ಅನು : ಹಸನ್ ನಯೀಂ ಸುರಕೋಡ

**ಪುಟ : xiv+೧೩೮** **ಬೆಲೆ : ರೂ. ೫೦**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩




ಖ್ಯಾತ ಉರ್ದು ಕಥೆಗಾರ ಸಾದತ್ ಹಸನ್ ಮಂಟೊರವರ ಕೆಲ ಕಥೆಗಳನ್ನು ಹಸನ್ ನಯೀಂ ಸುರಕೋಡ ಕನ್ನಡಕ್ಕೆ ಸಮರ್ಥವಾಗಿ ಅನುವಾದಿಸಿದ್ದಾರೆ. ಅನುವಾದಗೊಳ್ಳುವ ಕೃತಿಗಳು ಮೂಲಭಾಷೆಯಿಂದ ಇಂಗ್ಲಿಷಿಗೆ ತರ್ಜುಮೆಯಾಗಿ ನಂತರ ಬೇರೆ ಬೇರೆ ಭಾಷೆಗಳಿಗೆ ಭಾಷಾಂತರವಾಗುವುದು ರೂಢಿ. ಇಲ್ಲಿನ ಅನುವಾದದ ವೈಶಿಷ್ಟ್ಯವೆಂದರೆ ಇಂಗ್ಲಿಷ್ ಸಂಪರ್ಕ ಭಾಷೆಯಾಗಿ ಬಳಕೆಯಾಗದೆ ಉರ್ದುವಿನಿಂದ ನೇರ ಕನ್ನಡಕ್ಕೆ ಬಂದಿರುವುದು. ದೇಶ ವಿಭಜನೆಯ ದುರಂತರವನ್ನು ಮಂಟೊ ತೀವ್ರವಾಗಿ ಅನುಭವಿಸಿರುವುದು ಕಥೆಗಳಲ್ಲಿ ಎಳೆಎಳೆಯಾಗಿ ಅನಾವರಣಗೊಂಡಿದೆ. ಈ ಕಥೆಗಳಲ್ಲಿನ ಹೊಸ ಅನುಭವ ಲೋಕವನ್ನು ಮತ್ತಷ್ಟು ತಮ್ಮದಾಗಿಸಿಕೊಳ್ಳಲು ರಹಮತ್ ತರೀಕೆರೆಯವರ ಮುನ್ನುಡಿ ಅನೇಕ ಹೊಳಹುಗಳನ್ನು ಒದಗಿಸಿಕೊಡುತ್ತದೆ.



## ಶಿವಾಜಿ ಮೂಲ ಕನ್ನಡ ನೆಲ

ಡಾ|| ಸರಜೂ ಕಾಟ್ಕರ್

**ಪುಟ : xxiv+೧೮೨** **ಬೆಲೆ : ರೂ. ೭೫**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

ಮರಾಠಿಯ ಖ್ಯಾತ ಸಂಶೋಧಕ ಡಾ|| ರಾ. ಚಿಂ. ಢೇರೆಯವರ 'ಶಿಖರ ಶಿಂಗಣಾಪುರಚಾ ಶಂಭು ಮಹಾದೇವ' ಕೃತಿಯನ್ನು ಆಧಾರವಾಗಿರಿಸಿಕೊಂಡು ಡಾ|| ಸರಜೂ ಕಾಟ್ಕರ್ ಈ ಕೃತಿ ರಚಿಸಿದ್ದಾರೆ. ಶಿವಾಜಿ ಮಹಾರಾಜನ ಮೂಲನೆಲೆ ಮಹಾರಾಷ್ಟ್ರ ಎಂದು ಭಾವಿಸಿರುವ ಅನೇಕರಿಗೆ ಈ ಪುಸ್ತಕದಲ್ಲಿ ಹೊಸ ಸಂಶೋಧನೆ ಕಾಣಸಿಗುತ್ತದೆ. ಶಿವಾಜಿ ಮಹಾರಾಜನ ಪೂರ್ವಜರ ಬಗ್ಗೆ ಸಾಗುವ ಸಂಶೋಧನೆ ಕಡೆಗೆ ಮಂಡಿಸುವ ವಿಚಾರಗಳು ಸಂಶೋಧನಾ ಕ್ಷೇತ್ರಕ್ಕಿರುವ ಆಯಾಮ ಮತ್ತು ಅದರ ಸಾಧ್ಯತೆಗಳನ್ನು ಮನದಟ್ಟು ಮಾಡಿಸುತ್ತದೆ. ಈ ಕೃತಿಯನ್ನು ಅರ್ಥೈಸಿಕೊಳ್ಳುವಲ್ಲಿ ಡಾ|| ಎಂ. ಚಿದಾನಂದಮೂರ್ತಿಯವರ ಕೆಲಮಾತುಗಳು ಬೆಳಕಿಂಡಿಯಾಗಿ, ಸಹಾಯಕ ಸಾಧನಗಳಾಗಿ ಒದಗಿಬರುತ್ತವೆ.




## ಮುನ್ನೋಟ

ಡಾ|| ಜಿ. ರಾಮಕೃಷ್ಣ

**ಪುಟ : ೧೯೨** **ಬೆಲೆ : ರೂ. ೭೫**

**ಮಾ-ಲೆ ಪ್ರಕಾಶನ,** ೨-ಎಫ್, ಪವನ್ ಪರಂಜ್ಯೋತಿ, ೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

ನಮ್ಮ ಸುತ್ತ ನಡೆಯುವ ಸಂಗತಿಗಳನ್ನು ಅದರ ಚರಿತ್ರೆಯ ಸಮೇತ ತಾರ್ಕಿಕವಾಗಿ, ವೈಜ್ಞಾನಿಕವಾಗಿ ವಿಚಾರ ಮಂಡಿಸುವ ವಿಚಾರವಂತರಲ್ಲಿ ಡಾ|| ಜಿ. ಆರ್. ಬಹುಮುಖ್ಯ ಪಾತ್ರ ವಹಿಸುತ್ತಾರೆ. ಮಾರ್ಕ್ಸ್‌ವಾದವನ್ನು ಆಳವಾಗಿ ಅಧ್ಯಯನ ಮಾಡಿರುವ ಇವರು ತಮ್ಮ ಮುನ್ನೋಟದ ಚಿಂತನೆಗಳಿಗೆ ಅದನ್ನು ಬಳಸಿಕೊಂಡು ತುಂಬು ವಿನಯದಿಂದ ವಿಚಾರ ಮಂಡಿಸುತ್ತಾರೆ. 'ಮುನ್ನೋಟ' ಕೃತಿ ೧೯೮೦ರಲ್ಲಿಯೇ ಮುದ್ರಣಗೊಂಡು ಈಗ ಎರಡನೇ ಮುದ್ರಣ ಕಾಣುತ್ತಿರುವ ಕೃತಿ. ಸಂಸ್ಕೃತಿಯ ಬಗೆಗಿನ ಅವರ ಇಣುಕುನೋಟಗಳು, ಸಾಹಿತ್ಯ ಮೀಮಾಂಸೆ, ಗಾಂಧಿ, ಲೆನಿನ್, ಚೆ ಗುವಾರರ ಬಗ್ಗೆ ಚಿತ್ರಣಗಳು ಹಾಗೂ ಪ್ರಗತಿಯ ಕುರಿತಂತೆ ಇಲ್ಲಿನ ಲೇಖನಗಳು ಜಿ. ಆರ್. ರವರ ಅಧ್ಯಯನದ ವ್ಯಾಪ್ತಿಯನ್ನು ತಿಳಿಸುತ್ತವೆ.

## ವಸುಂಧರೆಯ ಗ್ಯಾನ

ಎಚ್. ನಾಗವೇಣಿ

**ಪುಟ : xii+೧೦೪** **ಬೆಲೆ : ರೂ. ೩೫**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩



'ಮೀಯುವ ಆಟ', 'ಗಾಂಧಿ ಬಂದ' ಕೃತಿಗಳಿಂದ ಗಮನ ಸೆಳೆದಿದ್ದ ಎಚ್. ನಾಗವೇಣಿಯವರು 'ವಸುಂಧರೆಯ ಗ್ಯಾನ'ದಲ್ಲಿ ತಮ್ಮ ಬಾಲ್ಯದ ನೆನಪುಗಳನ್ನು ಕಥನಗಳಾಗಿ ಚಿತ್ರಿಸಿದ್ದಾರೆ. ತಮ್ಮ ಪರಿಸರದ ಕಥನಗಳಾಗಿ ಇಲ್ಲಿನ ಒಂದೊಂದೂ ಕಥನ ಗಮನ ಸೆಳೆಯುತ್ತದೆ. ಎಚ್. ಎಲ್. ಪುಷ್ಪರವರು ನಾಗವೇಣಿಯವರನ್ನು 'ತುಳುನಾಡಿನ ಹೆಣ್ತನದ ಸ್ವಾಭಿಮಾನಿ ದೇವತೆಸಿರಿಯ ಖಾಸಾ ತಂಗಿ' ಎಂದಿರುವುದಕ್ಕೆ ಕಾರಣಗಳು ಸಿಗುತ್ತವೆ. ನವನಾಗರಿಕತೆಯ ಬಗ್ಗೆ ಬೇಸರ ವ್ಯಕ್ತಪಡಿಸುವುದರ ಜೊತೆಜೊತೆಗೆ ತಮ್ಮ ನೆಲದ ಹಬ್ಬಗಳು, ಸಾಂಪ್ರದಾಯಿಕ ಖಾದ್ಯಗಳ ಬಗ್ಗೆ ಬರೆದು ತಮ್ಮ ಮನಸಿನ ಹದವನ್ನು ಇಲ್ಲಿ ಪರಿಚಯಿಸಿದ್ದಾರೆ.

– ಎನ್. ಸಿ. ಮಹೇಶ್, ಸೇಂಟ್ ಆ್ಯನ್ಸ್ ವುಮೆನ್ಸ್ ಪ್ರಥಮ ದರ್ಜೆ ಕಾಲೇಜು,
ನಂ. ೨, ಕೇಂಬ್ರಿಡ್ಜ್ ರಸ್ತೆ, ಹಲಸೂರು, ಬೆಂಗಳೂರು - ೫೬೦ ೦೦೮



# ಬದುಕು - ಬವಣೆಗಳ ಸಾರ್ಥಕ ನಿರೂಪಣೆ

ಡಾ॥ ಎಚ್. ಎಸ್. ಗೋಪಾಲ ರಾವ್

**ಹು**ಟ್ಟಿನಿಂದ ಬದುಕನ್ನು ಒಟ್ಟಾರೆ ಒಳ್ಳೆಯದು ಎಂದಾಗಲೀ, ಕೆಟ್ಟದ್ದು ಎಂದಾಗಲೀ ತೀರ್ಮಾನಿಸುವಂತಿಲ್ಲ. ಹುಟ್ಟಿನಿಂದ ಶ್ರೀಮಂತರಾದ ಎಷ್ಟೋ ಜನ ಸಾಯುವ ವೇಳೆಗೆ ಬಡವರಾಗಿರುತ್ತಾರೆ. ಬಡತನದಲ್ಲಿ ಹುಟ್ಟಿದ ಹಲವರು ಶ್ರೀಮಂತರಾಗಿ ಬದುಕುತ್ತಾರೆ. ಬದುಕು ಚಲನಶೀಲ. ಆದ್ದರಿಂದ ಚಲನೆಯ ಹಾದಿಯಲ್ಲಿ ಏರುಪೇರುಗಳು ಸಹಜ. ಈ ಏರುಪೇರಿನ ಹಾದಿಯನ್ನು ವಿಶ್ಲೇಷಿಸಿ, ದಾಖಲಿಸುವುದರಿಂದ ಮುಂದಿನ ಜನತೆಗೆ ಒಂದಷ್ಟು ಅನುಕೂಲ ಮತ್ತು ಸಾಮಾಜಿಕ ಇತಿಹಾಸದ ಪರಿಶೀಲನೆಗೆ ಒಂದಷ್ಟು ಅವಕಾಶ ದೊರೆಯುತ್ತದೆ. ಪ್ರತಿಯೊಬ್ಬ ವ್ಯಕ್ತಿಯ ಬದುಕೂ ಸಹ ಏರಿಳಿತದ ಹಾದಿಯದು. ಏರಿಳಿತವಿಲ್ಲದಿದ್ದರೆ, ಅದು ಬದುಕಾಗಲು ಸಾಧ್ಯವಿಲ್ಲ. ಯಾವುದೇ ರಸ ಇಲ್ಲದ ಬದುಕು ಸಹ್ಯವಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಬದುಕಿನಲ್ಲಿ ಏರಿ, ಇಳಿದ ಎತ್ತರ ಮತ್ತು ಇಳುಕಲುಗಳನ್ನು ವಿಶ್ಲೇಷಿಸಿ, ದಾಖಲಿಸುವುದರಿಂದ ಅವು ಮುಂದಿನ ಜನತೆಗೆ ಮಾರ್ಗದರ್ಶಿಯಾಗುತ್ತವೆ. ಮನುಷ್ಯನು ತನ್ನ ಜೀವಿತಕ್ಕೆ ಯಾವುದೇ ವೃತ್ತಿಯನ್ನು ಅವಲಂಬಿಸಬಹುದು; ತಾನು ಕಲಿತ ವಿಷಯದಿಂದ ದೂರವಾದ ವೃತ್ತಿಯನ್ನೂ ಅವನು/ಳು ಅವಲಂಬಿಸಬಹುದು. ಅಂತಹ ಸಂದರ್ಭದಲ್ಲಿ ಅವನು/ಳು ತನ್ನ ಅನುಭವಗಳನ್ನು ದಾಖಲಿಸುವುದು ಹಲವು ಕಾರಣಗಳಿಂದ ಮುಖ್ಯವಾಗುತ್ತದೆ. ಅನುಭವಗಳ ದಾಖಲೆಯು ರಚನಾತ್ಮಕವಾಗಿ ಉಪಯೋಗಕ್ಕೆ ಬಂದರೆ ಉಪಕಾರವಾಗುತ್ತದೆ.

ಒಬ್ಬ ತಂತ್ರಜ್ಞನಿಗೆ ತನ್ನ ಕ್ಷೇತ್ರದ ಕಷ್ಟ-ನಷ್ಟಗಳ ಪರಿಚಯ ಚೆನ್ನಾಗಿಯೇ ಇರುತ್ತದೆ. ಅಂತೆಯೇ ಒಬ್ಬ ವೈದ್ಯನಿಗೆ ರೋಗ ಮತ್ತು ರೋಗಿಗಳ ಪರಿಚಯವಾಗುವುದರ ಜೊತೆಗೆ ತನ್ನ ವೃತ್ತಿಯಲ್ಲಿನ ಅಡ್ಡಿ, ಆತಂಕಗಳು, ನೋವು, ನಲಿವುಗಳು ಚೆನ್ನಾಗಿಯೇ ತಿಳಿದಿರುತ್ತವೆ. ಯಾವುದೇ ಮನುಷ್ಯ ವೈಯಕ್ತಿಕ ಅನುಭವಗಳ ಮೂಲಕವೇ ಕಲಿತು, ಪರಿಣತಿಯನ್ನು ಪಡೆಯುವುದು ತಿಳಿದಿರುವ ವಿಚಾರ. ಅನುಭವಗಳು ಕಲಿಸುವ ಪಾಠವು ಮುಖ್ಯವಾಗುತ್ತದೆ; ಸರಿಯಾದ ದಾರಿಯಲ್ಲಿ ಮುಂದಿನ ಹೆಜ್ಜೆಯನ್ನಿಡಲು ನೆರವಾಗುತ್ತದೆ.

ಡಾ॥ ಎಚ್. ಡಿ. ಚಂದ್ರಪ್ಪಗೌಡರ **ವೈದ್ಯಾಧಿಕಾರಿಯ ಬದುಕು-ಬವಣೆಯು** ಆ ನಿಟ್ಟಿನಲ್ಲಿ ಓದುಗರ ಗಮನ ಸೆಳೆಯುತ್ತದೆ. ಯಾವುದೇ ವ್ಯಕ್ತಿಯನ್ನು ಆತನ ಬಾಲ್ಯದ ಬಗೆಗೆ ಪ್ರಶ್ನಿಸಿದರೆ, ಆತ ತನ್ನ ಬಾಲ್ಯವನ್ನು ಕಷ್ಟದಿಂದ ಕಳೆದದ್ದಾಗಿಯೂ, ತನ್ನ ಪೋಷಕರ ಬಡತನವು ತನಗೆ ಆರ್ಥಿಕ ಬಲ ನೀಡಲಿಲ್ಲವೆಂದೂ ಅಹವಾಲು ಸಲ್ಲಿಸುತ್ತಾನೆ. ಅಂತಹ ಅಹವಾಲುಗಳು ಪ್ರಾಮಾಣಿಕವಾಗಿದ್ದರೆ, ಅದರಿಂದ ಮುಂದಿನ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ, ಶಿಕ್ಷಕರಿಗೂ ವಿಶೇಷ ಮಾಹಿತಿ ದೊರೆಯುತ್ತದೆ. ಬದುಕನ್ನು ಅರ್ಥೈಸಲು ಅವಕಾಶ ದೊರೆಯುತ್ತದೆ. ಬದುಕನ್ನು ಸಾರ್ಥಕಗೊಳಿಸಿಕೊಳ್ಳಲೂ ಅವಕಾಶಗಳು ಹೇರಳವಾಗಿ ಲಭ್ಯವಾಗುತ್ತವೆ.



ಲೇಖಕರು : ಡಾ॥ ಎಚ್. ಡಿ. ಚಂದ್ರಪ್ಪಗೌಡ
ಪ್ರಕಾಶಕರು
**ಮಲೆನಾಡು ಸಾಹಿತ್ಯ ಪ್ರಕಾಶನ ೬೪**
**ಮಿಷನ್ ಕಾಂಪೌಂಡ್, ಶಿವಮೊಗ್ಗ-೫೭೭೨೦೧**
ಪುಟ : ೩೫೨+೧೬+೪
ಪ್ರಕಟಣೆಯ ವರ್ಷ : ೨೦೦೨

ಕೃತಿಯ ಆರಂಭದ ಮುನ್ನುಡಿಯಲ್ಲಿ ಡಾ॥ ಸಿ. ಆರ್. ಚಂದ್ರಶೇಖರ್ ಅವರು ಸಾಮಾನ್ಯವಾಗಿ ವೈದ್ಯರ ಬಗ್ಗೆ ಇರುವ ಜನಾಭಿಪ್ರಾಯಗಳು ಮತ್ತು ಅವುಗಳಲ್ಲಿನ ವೈರುಧ್ಯಗಳ ಬಗ್ಗೆ ಅತ್ಯಂತ ಸ್ಪಷ್ಟವಾಗಿ ತಿಳಿಸಿದ್ದಾರೆ. ಇತ್ತೀಚೆಗೆ ವೈದ್ಯರುಗಳ ಬಗ್ಗೆ ಇರುವ ನಕಾರಾತ್ಮಕ ಧೋರಣೆಯಂತೂ ನೂರಕ್ಕೆ ನೂರರಷ್ಟು ಸತ್ಯ ಎಂದು ತಿಳಿಯಬಹುದು. ಆದರೆ, ಆ ವೈದ್ಯರೂ ಮನುಷ್ಯರೇ ಎಂದು ತಿಳಿಯಬೇಕಾದ್ದು ಅವಶ್ಯಕ. ಅವರಿಗೂ ಎಲ್ಲರಂತೆಯೇ ಸಮಸ್ಯೆಗಳಿರುತ್ತವೆ, ಕಷ್ಟಗಳಿರುತ್ತವೆ; ಅವರಿಗೂ ಅನ್ಯಾಯ, ಅನಾಚಾರಗಳನ್ನು ಗುರುತಿಸುವ ಮತ್ತು ಅವುಗಳನ್ನು ಸರಿಪಡಿಸುವ ಮನಸ್ಸು ಇರುತ್ತದೆ. ಎಲ್ಲ ವೈದ್ಯರೂ ಕೆಟ್ಟವರಲ್ಲ, ಎಲ್ಲ ರೋಗಿಗಳೂ ಒಳ್ಳೆಯವರಲ್ಲ ಅಥವಾ ರೋಗಿಗಳ ಪರ ನಿಲ್ಲುವ ಎಲ್ಲರೂ ಸಮಚಿತ್ತರಲ್ಲ. ಪ್ರತಿಯೊಬ್ಬರಿಗೂ ಒಂದಲ್ಲ ಒಂದು ಗುಣ, ದೋಷ ಇದ್ದೇ ಇರುತ್ತದೆ. ಆಯಾ ಕ್ಷೇತ್ರಕ್ಕೆ ಸಂಬಂಧಿಸಿದವರು, ಅಲ್ಲಿಯ ಗುಣ ಮತ್ತು ದೋಷಗಳ ಬಗ್ಗೆ ಸಂಬಂಧಿಸಿದವರಿಗೆ ಮನವರಿಕೆ ಮಾಡಿಕೊಟ್ಟರೆ, ಮತ್ತಷ್ಟು ಅಭಿವೃದ್ಧಿ ಅಥವಾ ಸುಧಾರಣೆಗೆ ಅವಕಾಶ ಕಲ್ಪಿಸಲು ಸಾಧ್ಯವಾಗುತ್ತದೆ. ಎಲ್ಲರೂ ತಮಗೆ ಯಾವುದೂ ಸಂಬಂಧಿಸಿದ್ದಲ್ಲ; ಸಂಬಳಕ್ಕೆ ತಕ್ಕಂತೆ, ಕೆಲಸದ ಅವಧಿಗೆ ಭಂಗ ಬರದಂತೆ, ಯಂತ್ರದಂತೆ ದುಡಿದರೆ, ತನ್ನ ಕೆಲಸ ಮುಗಿಯಿತು ಎಂದು ಭಾವಿಸಿದರೆ ತಪ್ಪಾಗುತ್ತದೆ. ಕರ್ತವ್ಯನಿಷ್ಠೆ ಎನ್ನುವುದು ಯಾಂತ್ರಿಕ ಕೆಲಸವಲ್ಲ. ಅದು ಮನುಷ್ಯ ಹೃದಯ ಮತ್ತು ಭಾವನೆಗಳ ಕೆಲಸ. ಈ ನಿಟ್ಟಿನಲ್ಲಿ ವಿಶೇಷವಾಗಿ ವೈದ್ಯನಾದವನ ಜವಾಬ್ದಾರಿ ಅಧಿಕವಾದ್ದು ಮತ್ತು ಮಹತ್ವದ್ದು.

ವರಾಹಿ ಯೋಜನೆಯಲ್ಲಿ ಮುಳುಗಿಹೋದ ಪುಟ್ಟಹಳ್ಳಿ **ಹೊಳೆಗದ್ದೆಯ** ಚಂದ್ರಪ್ಪಗೌಡರ ಬದುಕು ಮುಳುಗದೆ, ಪ್ರಖರವಾದ ಬೆಳಕಾಗಿ ಅನೇಕರಿಗೆ ಮಾರ್ಗದರ್ಶಕವಾಗಿರುವುದೇ ಅವರ **ವೈದ್ಯಾಧಿಕಾರಿಯ ಬದುಕು-ಬವಣೆಗಳ** ಆತ್ಮಕಥೆ. ಅನೇಕ ಆತ್ಮಕಥೆಗಳಂತೆ ಇದು, ಒಬ್ಬ ವ್ಯಕ್ತಿಯ ಹಿರಿಮೆ ಮತ್ತು ಗರಿಮೆಗಳ ಕಥೆ ಮಾತ್ರವಾಗದೆ, ಈಗ ಇಲ್ಲವಾಗಿರುವ ಒಂದು ಪುಟ್ಟಹಳ್ಳಿಯ ಸಾಮಾನ್ಯ ವ್ಯಕ್ತಿಯೊಬ್ಬನ ಸಾಹಸಗಾಥೆಯಾಗಿದೆ. ಸ್ವಪ್ರಶಂಸೆ, ಸಾಧನೆಗಳ ಹೆಗ್ಗಳಿಕೆ ಮತ್ತು ಕೇವಲ ಬವಣೆಗಳ ವೈಭವೀಕರಣಕ್ಕೆ ಮಾತ್ರ ಸೀಮಿತವಾಗಿದ್ದರೆ, ಇದೂ ಸಹ ಇತರ ಅನೇಕ ಆತ್ಮಕಥೆಗಳ ಪಾಲಿಗೆ ಸೇರಿ, ಗೌಣ ಎನಿಸಿಕೊಳ್ಳುತ್ತಿತ್ತು. ಆದರೆ, ಹಾಗಾಗದೆ ಚಂದ್ರಪ್ಪಗೌಡರ ಆತ್ಮಕಥೆಯು, ಒಬ್ಬ ಪ್ರಾಮಾಣಿಕ ವೈದ್ಯನು ತನ್ನ ವೃತ್ತಿಜೀವನದಲ್ಲಿ ಕಂಡ ಹಲವು ಸುಖ ಮತ್ತು ದುಃಖಗಳ ನೇರ ನಿರೂಪಣೆಯಾಗಿದೆ. ಆದ್ದರಿಂದಲೇ ಈ ಆತ್ಮಕಥೆ ಮೌಲಿಕ ಎಂಬುದು ನನ್ನ ಅಭಿಪ್ರಾಯ.

ಇತಿಹಾಸದ ವಿದ್ಯಾರ್ಥಿಯಾದ ನನಗೆ ಇಂತಹ ಕೃತಿಗಳು ಪ್ರತಿಕೃತಿಸುವ ಆಯಾ ಕಾಲದ ಬದುಕು ಮತ್ತು ಘಟನೆಗಳು ಹೆಚ್ಚು ಕುತೂಹಲಕ್ಕೆ ಕಾರಣವಾಗುತ್ತವೆ. ಮಲೆನಾಡಿನಲ್ಲಿ ಕಳೆದ ೨೦ನೆಯ ಶತಮಾನದ ಆರಂಭದ ದಿನಗಳಲ್ಲಿದ್ದ ದೊಡ್ಡ ಅವಿಭಕ್ತ ಕುಟುಂಬಗಳು, ಅವುಗಳಲ್ಲಿದ್ದ ಆರ್ಥಿಕ ಕೊರತೆಗಳ ನಡುವೆಯೇ ಇದ್ದ ಪ್ರೀತಿ ಮತ್ತು ವಾತ್ಸಲ್ಯಗಳ ಶ್ರೀಮಂತಿಕೆ, ಅವು ವ್ಯಕ್ತಿಯನ್ನು ರೂಪಿಸುತ್ತಿದ್ದ ಪರಿ ಇತ್ಯಾದಿಗಳನ್ನು ಈಗಿನ ಸ್ಥಿತಿ ಮತ್ತು ಗತಿಗಳಿಗೆ ಹೋಲಿಸಿ ಅಧ್ಯಯನ ಮಾಡುವುದು ಸಾಮಾಜಿಕ ಇತಿಹಾಸದ ಸಂದರ್ಭದಲ್ಲಿ ಮುಖ್ಯವಾಗುತ್ತದೆ. ಆಗಿನ ಐಗಳ ಶಾಲೆಯನ್ನು ಈಗ ಇಂತಹ ಕೃತಿಗಳ ಮೂಲಕವಷ್ಟೇ ಕಾಣಲು ಸಾಧ್ಯ.

ಚಂದ್ರಪ್ಪಗೌಡರ ತಾಯಿಯ ತವರೂರು ಮಾನಿ ಈಗಿಲ್ಲ. ವರಾಹಿ ಜಲ ವಿದ್ಯುತ್ ಯೋಜನೆಯು ಅದನ್ನು ತನ್ನ ಒಡಲಿನೊಳಗೆ ಸೇರಿಸಿಕೊಂಡಿದೆ. ಇಂತಹ ಕೃತಿಗಳ ಮೂಲಕವಷ್ಟೇ ಮುಳುಗಿಹೋದ/ಜನರಹಿತವಾದ ಹಳ್ಳಿಗಳನ್ನು ನೆನಪಿಗೆ ತಂದುಕೊಳ್ಳಬಹುದು. ಬಾಲ್ಯದ ನೆನಪುಗಳು ಪ್ರಾಮಾಣಿಕವಾಗಿರುತ್ತವೆಯಾದ ಕಾರಣ, ಅವೆಲ್ಲವೂ ಕೃತಿಯ ಮಹತ್ವವನ್ನು ಹೆಚ್ಚಿಸಿವೆ. ತೀರ್ಥಹಳ್ಳಿಯ ಪ್ರೌಢಶಾಲೆಯಲ್ಲಿ ಓದುತ್ತಿದ್ದಾಗ ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿ, ದಸ್ತಗಿರಿಯಾಗಿದ್ದ ಚಂದ್ರಪ್ಪಗೌಡರ ವೈದ್ಯಕೀಯ ಶಿಕ್ಷಣ ಪೂರ್ಣಗೊಳ್ಳುವವರೆಗಿನ ಘಟ್ಟಕ್ಕೆ ಲೇಖಕರು ಮೀಸಲಿಟ್ಟಿರುವುದು ಕೇವಲ ೬೨ ಪುಟಗಳು. ಉಳಿದ ೨೮೬ ಪುಟಗಳು ಚಂದ್ರಪ್ಪಗೌಡರ ವೈದ್ಯವೃತ್ತಿಯ ಬದುಕು ಮತ್ತು ಬವಣೆಗಳಿಗೇ ಸಾರ್ಥಕವಾಗಿ ಬಳಕೆಯಾಗಿವೆ. ಚಂದ್ರಪ್ಪಗೌಡರು ೧೯೫೬ರಿಂದ ೧೯೮೪ರವರೆಗೆ ನಡೆಸಿದ ೨೮ ವರ್ಷಗಳ ವೃತ್ತಿಜೀವನವನ್ನು ಇಂದಿನ ಯಾವುದೇ ವೈದ್ಯರ ವೃತ್ತಿಜೀವನದ ಜೊತೆಗೆ ತೌಲನಿಕವಾಗಿ ವಿಶ್ಲೇಷಿಸುವ ಕೆಲಸವು ಕೆಲವು ವಿಶಿಷ್ಟ ವಿಚಾರಗಳನ್ನು ಪ್ರಕಟಗೊಳಿಸುವ ಸಾಧ್ಯತೆಗಳಿವೆ.

ಮೈಸೂರಿನಲ್ಲಿ ಎಂ. ಬಿ. ಬಿ. ಎಸ್. ಶಿಕ್ಷಣ ಮುಗಿಸಿ ಮೈಸೂರಿನ ಕೆ. ಆರ್. ಆಸ್ಪತ್ರೆಯ ವಿವಿಧ ವಿಭಾಗಗಳಲ್ಲಿ ತರಬೇತು ಪಡೆದು

ಶಿಕಾರಿಪುರದಲ್ಲಿ ವೃತ್ತಿಜೀವನವನ್ನು ಆರಂಭಿಸಿದ ಡಾ॥ ಚಂದ್ರಪ್ಪಗೌಡರು, ತಮ್ಮ ವಿದ್ಯಾಭ್ಯಾಸ ಮತ್ತು ವೃತ್ತಿಜೀವನದ ಸಂದರ್ಭದಲ್ಲಿ ಕಂಡ ಅನುಭವಿಸಿದ ಕೆಲವು ವಿಪರ್ಯಾಸಗಳನ್ನು ಯಾವುದೇ ಸಂಕೋಚ ಅಥವಾ ಅಳುಕೂ ಇಲ್ಲದೆ ವ್ಯವಸ್ಥೆಯಲ್ಲಿನ ಲೋಪ ಮತ್ತು ದೋಷಗಳನ್ನು ದಾಖಲಿಸಿ, ಉಪಕರಿಸಿದ್ದಾರೆ. ಉತ್ತಮ ಕಟ್ಟಡವಿದ್ದರೂ, ಮಾನವ ಸಂಪನ್ಮೂಲದ ಕೊರತೆ ಇದ್ದ ಶಿಕಾರಿಪುರದ ಆಸ್ಪತ್ರೆಯಲ್ಲಿ ಚಂದ್ರಪ್ಪಗೌಡರು ಹಲವು ಬಗೆಯ ಅನುಭವಗಳನ್ನು ಪಡೆದು, ಒಳ್ಳೆಯ ವೈದ್ಯರಾಗಿ ರೂಪುಗೊಂಡ ಬಗೆ ಯಾರಿಗಾದರೂ ಒಂದು ದಂತಕಥೆಯಂತೆ ತೋರಿದರೆ ಆಶ್ಚರ್ಯಪಡಬೇಕಾಗಿಲ್ಲ. ಆದರ್ಶವಾದದ ಬೆನ್ನುಹತ್ತಿದ್ದ ಚಂದ್ರಪ್ಪಗೌಡರು ಯಾವ ರೋಗಿಯಿಂದಲೂ ಯಾವುದೇ ಬಗೆಯ ಪ್ರತಿಫಲವನ್ನು ಸ್ವೀಕರಿಸುವುದಿಲ್ಲ ಎಂಬ ನಿರ್ಧಾರವನ್ನು ಕೈಬಿಟ್ಟು ದೊರೆತ ಪ್ರತಿಫಲದಿಂದ ಇಂಜಕ್ಷನ್ ಮತ್ತು ಔಷಧಿಗಳಿಂದ ಉಪಚರಿಸತೊಡಗಿದ್ದನ್ನು ಪ್ರಾಮಾಣಿಕವಾಗಿ ದಾಖಲಿಸಿದ್ದಾರೆ. ಫ್ರೆಂಚ್ ಪಾಲಿಷ್ ಕುಡಿತದ ಅಪಾಯ, ಕ್ಯಾಸನೂರು ಕಾಡಿನ ಕಾಯಿಲೆ, ಗುದ್ದಮ್ಮನ ಜೇನೆ ಎಂದು ಕರೆಸಿಕೊಂಡ ಇನ್‌ಫ್ಲುಯೆಂಜ, ಕಾಲರ ಕಾಯಿಲೆ ಇತ್ಯಾದಿಗಳ ಬಗ್ಗೆ ತಿಳಿಯುವ ಪ್ರಯತ್ನದಲ್ಲಿದ್ದಾಗಲೇ, ತಾತ್ಕಾಲಿಕವಾಗಿ ಕೆಲಸದಿಂದ ಬಿಡುಗಡೆ ಪಡೆದ ಚಂದ್ರಪ್ಪಗೌಡರ ಅನುಭವಗಳು ಆಡಳಿತಾತ್ಮಕ ಲೋಪಗಳನ್ನು ಬಹಿರಂಗಗೊಳಿಸಿ ಸಾಮಾಜಿಕ ಅವ್ಯವಸ್ಥೆಯನ್ನು ದಾಖಲಿಸಿವೆ.

ಶಿಕಾರಿಪುರ, ಕೆ.ಜಿ.ಎಫ್., ಮೈಸೂರು, ಮಂಗಳೂರು, ಕೊಳ್ಳೇಗಾಲ, ಚಿಕ್ಕಮಗಳೂರು, ಶಿವಮೊಗ್ಗ ಇತ್ಯಾದಿ ಸ್ಥಳಗಳಲ್ಲಿ ಸಮರ್ಥವಾಗಿ ಕಾರ್ಯ ನಿರ್ವಹಿಸಿ, ತಮ್ಮ ಇಳಿವಯಸ್ಸಿನಲ್ಲಿ ಶಿವಮೊಗ್ಗದಲ್ಲಿ ನೆಲೆ ನಿಂತಿರುವ ಡಾ॥ ಚಂದ್ರಪ್ಪಗೌಡರು, ತಮ್ಮ ವೃತ್ತಿಜೀವನದ ಸಂದರ್ಭದಲ್ಲಿ ಆಯಾ ಸ್ಥಳಗಳಲ್ಲಿನ ಆಸ್ಪತ್ರೆಯ ಸ್ಥಿತಿಗತಿಗಳನ್ನು ಸುಧಾರಿಸಿ ಬಲಪಡಿಸಲು, ಜನತೆಯ ವಿಶ್ವಾಸವನ್ನು ಗಳಿಸಲು, ಮತ್ತು ತಮ್ಮ ಅರಿವನ್ನು ವಿಸ್ತರಿಸಿಕೊಳ್ಳಲು ಶ್ರಮಿಸಿರುವುದನ್ನು ಕಾಣಬಹುದು. ಚಂದ್ರಪ್ಪಗೌಡರು ತಮ್ಮ ವೃತ್ತಿಜೀವನದ ಉದ್ದಕ್ಕೂ ಶುದ್ಧಹಸ್ತರೆಂದು ಹೆಸರು ಪಡೆದದ್ದನ್ನು ಈ ಕೃತಿಯ ಎಲ್ಲಾ ಪುಟಗಳಲ್ಲಿ ಕಾಣಬಹುದು.

ಸ್ಥಳೀಯ ಪುಢಾರಿಗಳ ಮತ್ತು ಶ್ರೀಮಂತರ ದುರಹಂಕಾರ, ಸಿಬ್ಬಂದಿಯ ಲಂಚಕೋರತನ, ಕೆಲವು ಶವಪರೀಕ್ಷೆಗಳ ಹಿಂದಿನ ವಿಚಿತ್ರ ಸಂಗತಿಗಳು, ಕೋರ್ಟುಗಳಲ್ಲಿ ವಿಚಾರಣಾ ಸಂದರ್ಭದಲ್ಲಿ ವಕೀಲರ ವಿಚಿತ್ರ ಪ್ರಶ್ನೆಗಳು, ಕೆಲವು ಅಧಿಕಾರಿಗಳ ದೊಡ್ಡಸ್ತಿಕೆ ಮತ್ತು ಕೆಲವರ ಬೇಜವಾಬ್ದಾರಿತನ, ಆಡಳಿತಾತ್ಮಕ ಲೋಪ ಹಾಗೂ ದೋಷಗಳು, ಕೆಲವರ ಮಿತಿಮೀರಿದ ಸೌಜನ್ಯ ಮತ್ತು ದರ್ಪ, ಅತಿ ಜಾಣತನ ಮತ್ತು ದಡ್ಡತನ ಇತ್ಯಾದಿಗಳನ್ನು ಡಾ॥ ಚಂದ್ರಪ್ಪಗೌಡರು ದಾಖಲಿಸಿದ್ದಾರೆ. ಈ ದಾಖಲೆಗಳು ಪ್ರಾಮಾಣಿಕವೇ ಎಂದು ಯಾರಾದರೂ ಪ್ರಶ್ನಿಸಬಹುದು. ತಮ್ಮ ವೃತ್ತಿಜೀವನದ ಆರಂಭದ ಹಂತದಲ್ಲಿ ಕೆಲವು ಔಷಧಿ ಮತ್ತು ಇಂಜಕ್ಷನ್‌ಗಳ ವೆಚ್ಚವನ್ನು ನಿಭಾಯಿಸಲು, ರೋಗಿಗಳು ಸ್ವಇಚ್ಛೆಯಿಂದ ನೀಡಿದ ಹಣವನ್ನು ಸ್ವೀಕರಿಸುತ್ತಿದ್ದುದನ್ನು ತಿಳಿಸುವ ಪ್ರಾಮಾಣಿಕತೆಯ ಚಂದ್ರಪ್ಪಗೌಡರನ್ನು ಆ ಬಗ್ಗೆ ಪ್ರಶ್ನಿಸುವುದೂ ಕಷ್ಟವಾಗುತ್ತದೆ.

ವೃತ್ತಿಜೀವನದ ನಡುವೆಯೇ, ರಜೆ ಪಡೆದು, ಶಸ್ತ್ರಚಿಕಿತ್ಸಾ ಶಾಸ್ತ್ರದಲ್ಲಿ ಓದನ್ನು ಮುಂದುವರಿಸಿದ ಡಾ॥ ಚಂದ್ರಪ್ಪಗೌಡರ ಅಧ್ಯಯನಾಸಕ್ತಿಯು ಅಚ್ಚರಿ ಮೂಡಿಸುತ್ತದೆ. ಮಂಗಳೂರಿನ ವೆನ್‌ಲಾಕ್ ಆಸ್ಪತ್ರೆಯಲ್ಲೇ ಸ್ವಲ್ಪ ಕಾಲ ಅಸಿಸ್ಟೆಂಟ್ ಸರ್ಜನ್ ಆಗಿ ಕಾರ್ಯ ನಿರ್ವಹಿಸಿದ ಚಂದ್ರಪ್ಪಗೌಡರು, ನಂತರ ಕೊಳ್ಳೇಗಾಲದ ಸರ್ಕಾರಿ ಆಸ್ಪತ್ರೆಗೆ ಸರ್ಜನ್ ಆಗಿ ವರ್ಗಾವಣೆಗೊಂಡು ಹೋದರು. ತಮಗೆ ಬೇಕೆನಿಸಿದ ವೈದ್ಯರನ್ನು, ಅವರ ಒಪ್ಪಿಗೆ ಇಲ್ಲದೆಯೇ ಉಳಿಸಿಕೊಳ್ಳಲು ಮಾಡುವ ವಿಫಲ ಪ್ರಯತ್ನಗಳು, ಸ್ನಾತಕೋತ್ತರ ಪರೀಕ್ಷೆಗಳ ಫಲಿತಾಂಶಗಳಲ್ಲಿ ನಡೆಯುವ ಕೆಲವು ವಿಚಿತ್ರಗಳ ಬಗ್ಗೆ ಡಾ॥ ಚಂದ್ರಪ್ಪಗೌಡರ ಅನುಭವಗಳನ್ನು ಓದಿದಾಗ ಇಂತಹ ವಿಚಿತ್ರಗಳು ದೇಶ, ಕಾಲ, ವರ್ತಮಾನಗಳನ್ನು ಮೀರಿ ಇರುತ್ತವೆ ಎಂಬುದು ಸ್ಪಷ್ಟವಾಗುತ್ತದೆ.

ತಮ್ಮ ವೈದ್ಯಕೀಯ ವೃತ್ತಿಯ ಸಂದರ್ಭದಲ್ಲಿ, ತಾವು ಕಂಡ ಬದುಕು ಮತ್ತು ಜನ, ಅನುಭವಿಸಿದ ಸುಖ ಮತ್ತು ಸಂತೋಷಗಳನ್ನು ಯಾವುದೇ ಅಸ್ಪಷ್ಟತೆಗೆ ಅವಕಾಶವಿಲ್ಲದಂತೆ ಡಾ॥ ಚಂದ್ರಪ್ಪಗೌಡರು ವಿವರಿಸಿದ್ದಾರೆ. ಅಜ್ಞಾನದಿಂದ ಉಲ್ಬಣಗೊಳ್ಳುವ ರೋಗಗಳು, ಶಸ್ತ್ರಚಿಕಿತ್ಸೆಯ ಸಂದರ್ಭದಲ್ಲಿನ ಅಜಾಗರೂಕತೆಗಳಿಂದ ಸಂಭವಿಸುವ ಅಪಾಯಗಳು, ಸೂಕ್ತ ಮಾರ್ಗದರ್ಶನದ ಕೊರತೆಯಿಂದ ಎದುರಾಗುವ ಸಮಸ್ಯೆಗಳು, ತಪ್ಪು ಮಾರ್ಗದರ್ಶನದಿಂದ ಅನುಭವಿಸಬೇಕಾದ ಕಷ್ಟಗಳು, ದೊಡ್ಡಸ್ತಿಕೆಯ ಕಾರಣದಿಂದ ಉಂಟಾಗುವ ವೈಮನಸ್ಯ ಮತ್ತು ಅದರ ಫಲವಾದ ತೊಂದರೆಗಳು ಇತ್ಯಾದಿಗಳ ಬಗ್ಗೆ ಡಾ॥ ಚಂದ್ರಪ್ಪಗೌಡರು ತಮ್ಮ ಅನುಭವಗಳ ಹಿನ್ನೆಲೆಯಲ್ಲಿ ವಿಶ್ಲೇಷಣಾತ್ಮಕವಾಗಿ ತಿಳಿಸಿ, ತಪ್ಪು ತಿಳುವಳಿಕೆಗಳು ಉಂಟು ಮಾಡುವ ಹಾನಿಯನ್ನು ನಿವಾರಿಸಲು ಪ್ರಯತ್ನಿಸಿದ್ದಾರೆ.

**ವೈದ್ಯಾಧಿಕಾರಿಯ ಬದುಕು-ಬವಣೆ**ಯು ಒಂದು ಆತ್ಮಕಥೆಯಾದರೂ, ಅದು ಕೇವಲ ಡಾ॥ ಚಂದ್ರಪ್ಪಗೌಡರ ಆತ್ಮಕಥೆಯಾಗಿ ಮಾತ್ರ ಉಳಿಯದೆ, ಕಳೆದ ಶತಮಾನದ ೫ನೆಯ ದಶಕದ ಕೊನೆಯಿಂದ ೮ನೆಯ ದಶಕದವರೆಗೆ, ಕರ್ನಾಟಕದ ವೈದ್ಯಕೀಯ ವ್ಯವಸ್ಥೆಯ ಅಮೂಲ್ಯ ದಾಖಲೆಯಾಗಿಯೂ ಪ್ರಸ್ತುತವಾಗುತ್ತದೆ. ವೈದ್ಯಕೀಯ ಶಿಕ್ಷಣ, ವೈದ್ಯಕೀಯ ವೃತ್ತಿ, ಆಸ್ಪತ್ರೆಗಳು, ಅವುಗಳ ಒಳ ಮತ್ತು ಹೊರ ವಾತಾವರಣದಲ್ಲಿದ್ದ ಒಳ್ಳೆಯ ಮತ್ತು ಕೆಟ್ಟ ವಿಚಾರಗಳು ಇತ್ಯಾದಿಗಳನ್ನು ಚಂದ್ರಪ್ಪಗೌಡರು ತಮ್ಮ ಅನುಭವಗಳ ದಾಖಲೆಯೊಂದಿಗೆ ಕ್ಷ-ಕಿರಣ ಪರೀಕ್ಷೆಗೆ ಗುರಿಪಡಿಸಿದ್ದಾರೆ.

ಕರ್ನಾಟಕದ ಬಹುತೇಕ ಎಲ್ಲಾ ಪ್ರಮುಖ ನಗರಗಳಲ್ಲೂ, ರಸ್ತೆಗೊಂದರಂತೆ ಹೈಟೆಕ್ ಆಸ್ಪತ್ರೆಗಳು ಮತ್ತು ಬಹುತೇಕ ಎಲ್ಲಾ ತಾಲ್ಲೂಕು ಕೇಂದ್ರಗಳಲ್ಲೂ ಸುಸಜ್ಜಿತ ಸರ್ಕಾರಿ ಆಸ್ಪತ್ರೆಗಳಲ್ಲದೆ ಕನಿಷ್ಠ ಒಂದಾದರೂ ಖಾಸಗಿ ನರ್ಸಿಂಗ್ ಹೋಂಗಳು ಅಸ್ತಿತ್ವಕ್ಕೆ ಬಂದಿರುವ ಈ ಹೊತ್ತಿನಲ್ಲಿ, ಜಿಲ್ಲಾ ಕೇಂದ್ರಗಳಲ್ಲೂ ಸುಸಜ್ಜಿತ ಸರ್ಕಾರಿ ಆಸ್ಪತ್ರೆಗಳು ಆಗಷ್ಟೇ ಇನ್ನೂ ಬಾಲ್ಯಾವಸ್ಥೆಯಲ್ಲಿದ್ದ ಸಂದರ್ಭದಲ್ಲಿ ವೈದ್ಯಕೀಯ ವ್ಯವಸ್ಥೆ ಹೇಗಿತ್ತು ಎಂದು ತಿಳಿಯಲು, ಸುಮಾರು ಐವತ್ತು ವರ್ಷಗಳಲ್ಲಿ ಆಗಿರುವ ಭೌತಿಕ ಪ್ರಗತಿ ಮತ್ತು ಮಾನವಾಂತಃಕರಣದ ನಿಟ್ಟಿನಲ್ಲಿ ಆಗಿರುವ ಅವನತಿ ಇತ್ಯಾದಿಗಳನ್ನು ತಿಳಿಯಲು **ವೈದ್ಯಾಧಿಕಾರಿಯ ಬದುಕು-ಬವಣೆ**ಯು ಒಂದು ಒಳ್ಳೆಯ ಆಕರ ಗ್ರಂಥವಾಗಿದೆ.

ಈ ಮೊದಲೇ ತಿಳಿಸಿರುವಂತೆ ಕೃತಿಯ ಮೊದಲ ೬೨ ಪುಟಗಳು ಮಾತ್ರ ಚಂದ್ರಪ್ಪಗೌಡರಿಗೆ ಸಂಬಂಧಿಸಿದ, ಅವರು ಡಾಕ್ಟರ್ ಆಗುವುದಕ್ಕೆ ಮುಂಚಿನ ವೈಯಕ್ತಿಕ ವಿಚಾರಗಳು. ಉಳಿದ ವಿಚಾರಗಳೆಲ್ಲವೂ ಡಾ॥ ಚಂದ್ರಪ್ಪಗೌಡರ ಕಥನದ ಮೂಲಕ ತಿಳಿಯುವ ಸಾಮಾಜಿಕ ಮತ್ತು ವೈದ್ಯಕೀಯ ವಿಚಾರಗಳು. ಆದ್ದರಿಂದಲೇ **ವೈದ್ಯಾಧಿಕಾರಿಯ ಬದುಕು-ಬವಣೆ**ಯು ಒಂದು ಸಾರ್ಥಕ ಕೃತಿ.

**ಡಾ॥ ಎಚ್. ಎಸ್. ಗೋಪಾಲ ರಾವ್**
'ಸ್ವಸ್ತಿಶ್ರೀಸ್ಕಂದ', ಅರಸಿನಕುಂಟೆ, ನೆಲಮಂಗಲ ತಾಲ್ಲೂಕು ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨ ೧೨೩

**ಸುದ್ದಿಚಿತ್ರ**



ಗುಲಬರ್ಗಾದಲ್ಲಿ ನಗರ ಕೇಂದ್ರ ಗ್ರಂಥಾಲಯದ ಸಹಯೋಗದೊಂದಿಗೆ ೩೦.೫.೦೬ ರಂದು ಪ್ರಾರಂಭವಾದ ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ಕನ್ನಡ ಸಾಹಿತ್ಯ ಪರಿಷತ್ ಜಿಲ್ಲಾಧ್ಯಕ್ಷರಾದ ವೀರೇಂದ್ರ ಸಿಂಪಿಯವರು ಉದ್ಘಾಟಿಸಿದರು. ಶ್ರೀ ಗೋಪಾಲರಾವ್ ಗುಡಿ, ಡಾ॥ ಈಶ್ವರಯ್ಯ ಮಠ, ಗ್ರಂಥಾಧಿಕಾರಿ ಸತೀಶ್‌ಕುಮಾರ ಹೊಸಮನಿ, ಪ್ರೊ॥ ಆರ್. ಕೆ. ಹುಡಗಿ, ವಿಜಯೇಂದ್ರ ಕುಲಕರ್ಣಿ ಮತ್ತು ಡಾ॥ ಶಿವಗಂಗಾ ರುಮಾ ಇವರುಗಳ ಜೊತೆಗೆ ಭಾರಿ ಸಂಖ್ಯೆಯಲ್ಲಿ ಪುಸ್ತಕಾಸಕ್ತರೂ ಸಮಾರಂಭದಲ್ಲಿ ಭಾಗವಹಿಸಿದ್ದರು.

ಸ್ವಾತಂತ್ರ್ಯ ಹೋರಾಟಗಾರರಾಗಿ ಮತ್ತು ಸಮಕಾಲೀನ ಚಳುವಳಿಗಾರರಾಗಿ ಖ್ಯಾತರಾದ ಶ್ರೀ ಎಚ್. ಎಸ್. ದೊರೆಸ್ವಾಮಿಯವರಿಗೆ ಈ ವರ್ಷದ "ಎಂ. ವಿ. ಸೀತಾರಾಮಯ್ಯ ಪ್ರಶಸ್ತಿ" ಲಭಿಸಿದೆ. 'ಹೊಸತು' ಅವರನ್ನು ಗೌರವದಿಂದ ಅಭಿನಂದಿಸುತ್ತದೆ. ೧೯೪೦ರಲ್ಲಿ ಖ್ಯಾತ ಸಾಹಿತಿ ಶ್ರೀ ಬ. ನ. ಸುಂದರರಾವ್ ಅವರು ಪ್ರಕಟಿಸಿದ್ದ ರಾಜಕೀಯ ಹಾಗೂ ಸಾಮಾಜಿಕ ಕಾದಂಬರಿ 'ಚಲೋ ಮೈಸೂರು' ಕೃತಿಯ ಎಂಟನೆಯ ಅಧ್ಯಾಯವನ್ನು ನಮ್ಮ ಓದುಗರಿಗಾಗಿ ಇಲ್ಲಿ ಪ್ರಕಟಿಸಲಾಗುತ್ತಿದ್ದೇವೆ. ಮಾನ್ಯ ದೊರೆಸ್ವಾಮಿಯವರ ಜೀವನದ ಒಂದು ಪ್ರಮುಖ ಅಧ್ಯಾಯದ ಪರಿಚಯ ಇಲ್ಲಿದೆ. ಕಾದಂಬರಿಯ ಒಂದು ಪ್ರತಿಯನ್ನು ದಯಮಾಡಿ ದೊರಕಿಸಿಕೊಟ್ಟ ಡಾ|| ಬಿ. ಎಸ್. ಕೃಷ್ಣಾ ಅವರಿಗೆ ಕೃತಜ್ಞತೆಗಳು ಸಲ್ಲುತ್ತವೆ.

— ಸಂಪಾದಕ

# ಪೌರವಾಣಿಯ ಶೌರ್ಯ

ಬ. ನ. ಸುಂದರರಾವ್

**ಮೈ**ಸೂರು ಸಂಸ್ಥಾನದ ಎಲ್ಲ ಜಿಲ್ಲೆಗಳಲ್ಲಿಯೂ ಸತ್ಯಾಗ್ರಹ ಬಿರುಸಾಗಿ ನಡೆಯಿತು. ಗ್ರಾಮಾಂತರದ ಜನರೂ ಸಹ ತಂಡೋಪತಂಡವಾಗಿ ಈ ಸತ್ಯಾಗ್ರಹದಲ್ಲಿ ಭಾಗವಹಿಸಲು ಮುಂದೆ ಬಂದರು. ಯಾವ ಕಡೆ ದೃಷ್ಟಿಹರಿಸಿದರೂ ಖಾದಿ ಟೋಪಿಗಳು: ''ಮಹಾತ್ಮ ಗಾಂಧೀಕಿ ಜೈ'' – ಎಂಬ ಜೈಕಾರಗಳು. ಬಸವನಗುಡಿ, ಮಲ್ಲೇಶ್ವರ, ಚಾಮರಾಜಪೇಟೆ, ಶ್ರೀರಾಮಪುರ, ಕಬ್ಬನ್‌ಪೇಟೆ ಮೊದಲಾದ ಬಡಾವಣೆಗಳಲ್ಲಿಯೂ ಬಹಿರಂಗ ಸಭೆಗಳು ನಡೆದುವು. ಸತ್ಯಾಗ್ರಹಕ್ಕೆ ಸಂಪೂರ್ಣ ಸಹಾನುಭೂತಿ ದೊರೆಯಿತು. ಅಲ್ಲದೇ ಶಿವಮೊಗ್ಗ, ಸಾಗರ, ತೀರ್ಥಹಳ್ಳಿ, ಚಿಕ್ಕಬಳ್ಳಾಪುರ, ಕೋಲಾರ, ಬೌರಿಂಗ್‌ಪೇಟೆ, ಆನೇಕಲ್, ಸರ್ಜಾಪುರ, ಹೊಸಕೋಟೆ ಮೊದಲಾದ ಸ್ಥಳಗಳಲ್ಲಿ ಮೆರವಣಿಗೆಗಳು ವೈಭವದಿಂದ ನಡೆದುವು.

ಕೋಲಾರ ಜಿಲ್ಲೆಯ ಶಿಡ್ಲಘಟ್ಟದಲ್ಲಿ ಗೋಲೀಬಾರ್ ನಡೆಯಿತು. ಶಿವಮೊಗ್ಗೆಯಲ್ಲಿ ಪ್ರಚಂಡ ಹರತಾಳ ನಡೆಯಿತು. ಬೆಂಗಳೂರು ದಕ್ಷಿಣ ತಾಲ್ಲೂಕ್ ವರ್ತೂರು ಮತ್ತು ಗುಂಜೂರುಗಳಲ್ಲಿಯೂ ಸಭೆಗಳು, ಮೆರವಣಿಗೆಗಳು ನಡೆದವು. ಗುಂಜೂರು ಗ್ರಾಮದಲ್ಲಿ ನಡೆದ ಕೆ. ಹನುಮಂತಯ್ಯನವರ ಭಾಷಣಕ್ಕೆ ಸಹಸ್ರಾರು ಮಂದಿ ಸೇರಿದ್ದರು. ಎಂದಿನಂತೆ ಪೊಲೀಸರು ಹಾಜರಿದ್ದು ಭಾಷಣ ಮುಗಿದೊಡನೆಯೇ ಹನುಮಂತಯ್ಯನವರನ್ನು ದಸ್ತಗಿರಿ ಮಾಡಿ, ವ್ಯಾನ್‌ನಲ್ಲಿ ಕರೆದೊಯ್ದು ತಮ್ಮ ಕರ್ತವ್ಯವನ್ನು ಪಾಲಿಸಿದರು.

ಹೀಗೆ ಪರಿಸ್ಥಿತಿ ದಿನದಿನಕ್ಕೂ ಬಿಗಡಾಯಿಸುತ್ತಿರುವಾಗ ಸೆಪ್ಟೆಂಬರ್ ಎಂಟರಂದು ಮೈಸೂರು ಮಹಾರಾಜರು ಜವಾಬ್ದಾರಿ ಸರ್ಕಾರ ಸ್ಥಾಪಿಸುವ ಬಗ್ಗೆ ಒಂದು ಘೋಷಣೆ ಹೊರಡಿಸಿ ಪ್ರಜೆಗಳ ಸಹಕಾರ ಕೋರಿದರು. ಈ ಬಗ್ಗೆ ಸೆರೆಮನೆಯಲ್ಲಿದ್ದ ಕೆ. ಸಿ. ರೆಡ್ಡಿಯವರನ್ನು ಪ್ರಶ್ನೆ ಮಾಡಿದಾಗ ಅವರು ನಿರಾಶೆಯನ್ನೇ ವ್ಯಕ್ತಪಡಿಸಿ, ಸತ್ಯಾಗ್ರಹ ಮುಂದುವರಿಯಲೆಂದು ಸ್ಪಷ್ಟವಾಗಿ ತಿಳಿಸಿಬಿಟ್ಟರು. ಎಷ್ಟೋ ಮಂದಿ ಗಣ್ಯವ್ಯಕ್ತಿಗಳೂ, ವರ್ತಕಮುಖಂಡರೂ ಕೆ. ಸಿ. ರೆಡ್ಡಿಯವರನ್ನು ಭೇಟಿಮಾಡಿ ಒಂದು ಒಪ್ಪಂದಕ್ಕೆ ಒಡಂಬಡಿಸಲು ಪ್ರಯತ್ನಿಸಿದುದೂ ಉಂಟು. ಆದರೆ ದೃಢಮನಸ್ಕರಾದ ರೆಡ್ಡಿಯವರನ್ನು ಅಡ್ಡದಾರಿಗೆಳೆಯಲು ಅವರಿಂದ ಸಾಧ್ಯವಾಗಲಿಲ್ಲ.

ಮರುದಿನವೇ ಅಂದರೆ ಸೆಪ್ಟೆಂಬರ್ ೯ರಂದು ಪೊಲೀಸ್ ಅಧಿಕಾರಿಗಳು ಬಹಳ ರಹಸ್ಯವಾಗಿ ಸೆರೆಮನೆಯ ಕಡೆಗೆ ಧಾವಿಸಿದರು. ಅಲ್ಲಿಂದ ಕಾಂಗ್ರೆಸ್ ಮುಖಂಡರುಗಳಾದ ಕೆ. ಟಿ. ಭಾಷ್ಯಂ, ಟಿ. ಸುಬ್ರಹ್ಮಣ್ಯ, ಎ. ಜಿ. ರಾಮಚಂದ್ರರಾವ್, ಕೆ. ಆರ್. ಮಾಧವರಾವ್, ಕೆ. ಶಾಮರಾಜಯ್ಯಂಗಾರ್, ಕೆ. ರಾಮಸ್ವಾಮಿ, ಸಿದ್ದವನಹಳ್ಳಿ ಕೃಷ್ಣಶರ್ಮ – ಇವರುಗಳನ್ನು ಆ ನಡುರಾತ್ರಿಯಲ್ಲಿಯೇ ಬೆಂಗಳೂರಿನ ಸೆಂಟ್ರಲ್ ಜೈಲಿನಿಂದ ಹಾಸನದ ಜೈಲಿಗೆ ಸಾಗಿಸಿದರು. ಹಾಗೆಯೇ ಕೆ. ಸಿ. ರೆಡ್ಡಿ, ಎಸ್. ಚೆನ್ನಯ್ಯ, ಎಚ್. ಸಿದ್ದಯ್ಯ, ಟಿ. ಸಿದ್ಧಲಿಂಗಯ್ಯ ಇವರುಗಳನ್ನು ಚಿಕ್ಕಮಗಳೂರಿಗೆ ಸಾಗಿಸಿಬಿಟ್ಟರು. ಈ ಸಂದರ್ಭದಲ್ಲಿ ಪೊಲೀಸಿನವರಿಗೂ, ಕೆ. ಸಿ. ರೆಡ್ಡಿಯವರಿಗೂ ದೊಡ್ಡ ವಾಗ್ಯುದ್ಧವೇ ನಡೆದು, ರೆಡ್ಡಿಯವರು ಅವರೊಡನೆ ಹೊರಡಲು ನಿರಾಕರಿಸಿದರು. ಕೆ. ಸಿ. ರೆಡ್ಡಿಯವರು ಮಲಗಿದ್ದರೂ ಸಹ ಲೆಕ್ಕಿಸದೆ ಪೊಲೀಸಿನವರು ಅವರನ್ನು ಅನಾಮತ್ತಾಗಿ ಎತ್ತಿಕೊಂಡು ಹೋಗಿ ಪೊಲೀಸ್ ವ್ಯಾನ್ ಒಳಗೆ ಕುಳ್ಳಿರಿಸಿದರಂತೆ. ಸತ್ಯಾಗ್ರಹದ ಮುಖಂಡರಿಗೆ ಸರ್ಕಾರವು ತೋರಿದ ಗೌರವವಿದು.

ಪತ್ರಿಕೆಗಳ ಅಭಾವದಿಂದಾಗಿ ಈ ಸುದ್ದಿಗಳು ಜನರಿಗೆ ತಿಳಿಯುತ್ತಿದ್ದುದು ಸ್ವಲ್ಪ ತಡವೇ ಆಗುತ್ತಿತ್ತು. ಹಿಂದೂಪುರದಿಂದ ಹೊರಡುತ್ತಿದ್ದ 'ಪೌರವಾಣಿ' ಪ್ರಜೆಗಳ ಪಾಲಿಗೆ ಆಕಾಶವಾಣಿಯೇ ಆಗಿರುತ್ತಿತ್ತು. 'ಪೌರವಾಣಿ' ತನ್ನ ಶಕ್ತಿಮೀರಿ ಸುದ್ದಿಗಳನ್ನು ಸಂಗ್ರಹಿಸಿ ಪ್ರಜೆಗಳಿಗೆ ಒದಗಿಸುತ್ತಿತ್ತು. ಈ 'ಪೌರವಾಣಿ'ಯ ಸಾಹಸವನ್ನು ಸಂಸ್ಥಾನದ ಪ್ರಜೆಗಳು ಶ್ಲಾಘಿಸುತ್ತಿದ್ದರು. ಈ ಪತ್ರಿಕೆಯ ಹಿನ್ನೆಲೆಯಲ್ಲಿ ಸೇವೆ ಸಲ್ಲಿಸುತ್ತಿದ್ದ ಮಹಾನ್‌ಶಕ್ತಿಯೆಂದರೆ ಶ್ರೀ ಎಚ್. ಎಸ್. ದೊರೆಸ್ವಾಮಿಯವರು. ಇವರು ಆ ಕಾಲದಲ್ಲಿ ಒಂದು ವ್ಯಕ್ತಿಯಾಗಿರಲಿಲ್ಲ: ಮಹಾನ್‌ಶಕ್ತಿಯೇ ಆಗಿದ್ದರು. ಅಲ್ಲದೆ ಅಂದಿನ ವಿದ್ಯಮಾನಗಳ ಪ್ರತ್ಯಕ್ಷದರ್ಶಿಯೂ ಆಗಿದ್ದರು. ಇವರಿಂದಾಗಿ ಬೆಂಗಳೂರಿನ ಜನತೆಗೆ ಒಂದಿಷ್ಟು ಸುದ್ದಿ ಸಿಗುತ್ತಿತ್ತು.

ಇವರಿಗೆ ಸಹಾಯಕರಾಗಿದ್ದವರೆಂದರೆ ಎಂ. ಎನ್. ಸೀತಾರಾಮಯ್ಯ, ಕೆ. ಆರ್. ಶ್ರೀಧರ್, ಸಿರಾ ಕಡೆಯವರಾಗಿದ್ದು ಹಿಂದೂಪುರದಲ್ಲಿ ನೆಲೆಸಿದ್ದ ಲಿಂಗಣ್ಣ, ರುಮಾಲೆ ಚನ್ನಬಸವಯ್ಯ, ತಿ. ತಾ. ಶರ್ಮರವರ ಪುತ್ರ ಶ್ರೀರಂಗ, ಕೆ. ಎಲ್. ಶರ್ಮ, ಮೈಸೂರು ಸುಬ್ಬರಾಮಯ್ಯ, ಎಂ. ಎ. ಪರಶುರಾಂ – ಮೊದಲಾದವರು. ಹಿಂದೂಪುರದ ಸುದರ್ಶನ ಪ್ರೆಸ್ ಒಡೆಯರಾದ ಶ್ರೀ ಆದಣ್ಣಶೆಟ್ಟರ ಸಂಪೂರ್ಣ ಸಹಕಾರ ಇದ್ದಿತೆಂಬುದನ್ನು ಬೇರೆಯಾಗಿ ಹೇಳಬೇಕಾಗಿಲ್ಲ.

ಸರ್ಕಾರದ ಅಡಚಣೆಗಳನ್ನು ತಪ್ಪಿಸಿಕೊಳ್ಳುವುದಕ್ಕಾಗಿ 'ಪೌರವಾಣಿ' 'ಪೌರವೀರ'ನೆಂದು ಹೆಸರು ಬದಲಿಸಿಕೊಂಡು ಹಿಂದೂಪುರದಿಂದ ಪ್ರಕಟವಾಗುತ್ತಿತ್ತು. ಈ ಪತ್ರಿಕೆಯನ್ನು ನೇತಾಜಿ ಯುವಕ ಸಂಘದವರು ತಪ್ಪದೆ ತರಿಸಿ, ಶ್ರದ್ಧೆಯಿಂದ ಓದುತ್ತಿದ್ದುದಲ್ಲದೆ ಆ ಪತ್ರಿಕೆಯ ಮಾರಾಟದಲ್ಲೂ ನೆರವಾಗುತ್ತಿದ್ದರು.

ಹಿಂದೂಪುರದಲ್ಲಿ ಪ್ರಕಟವಾಗುವ ಮುನ್ನ ಈ ಪತ್ರಿಕೆಯು ಬೆಂಗಳೂರಿನಲ್ಲಿಯೇ ಪ್ರಕಟವಾಗುತ್ತಿತ್ತು. ಮೈಸೂರು ಕಾಂಗ್ರೆಸ್‌ನಲ್ಲಿ ಪ್ರಮುಖರಾಗಿದ್ದ ಎಂ. ಎನ್. ಜೋಯಿಸ್‌ರವರು ಈ ಪತ್ರಿಕೆಯ ಮುದ್ರಕರಾಗಿದ್ದರು. ಎಂ. ಎನ್. ಸೀತಾರಾಮಯ್ಯನವರು ಸಂಪಾದಕರಾಗಿದ್ದರು. ಆರ್. ವಿ. ಭದ್ರಣ್ಣ, ಎಂ. ಎಸ್. ಶಾಸ್ತ್ರಿಯವರು ಸಂಪಾದಕ ಮಂಡಲಿಯ ಸದಸ್ಯರಾಗಿದ್ದರು. ಕೆ. ಎಸ್. ಕುಮಾರನ್, ಕೆ. ಆರ್. ಶ್ರೀಧರ್, ಕೆ. ಜಿ. ನಾರಾಯಣ ಶೆಟ್ಟಿ, ಕೆ. ಎಲ್. ಶರ್ಮ ಮೊದಲಾದವರು ಸಹಾಯಕರಾಗಿದ್ದರು. ಭದ್ರಣ್ಣನವರು ಬ್ರಹ್ಮಚಾರಿ. ಅವರಿಗೆ ಎಂ. ಎನ್. ಸೀತಾರಾಮಯ್ಯನವರ ಮನೆಯಲ್ಲಿಯೇ ಊಟವಾಗುತ್ತಿತ್ತು. ಭದ್ರಣ್ಣನವರೆಂದರೆ ಸೀತಾರಾಮಯ್ಯನವರಿಗೆ ಬಲಗೈ ಇದ್ದಂತೆ. 'ಪೌರವಾಣಿ' ಪತ್ರಿಕೆ ಮುದ್ರಣಕಾರ್ಯ, ಅಂಚೆರವಾನೆ, ಪ್ರೂಫ್ ತಿದ್ದುವುದು, ಸುದ್ದಿಸಂಗ್ರಹ – ಇವೇ ಮೊದಲಾದ ಎಲ್ಲ ಕೆಲಸಗಳನ್ನೂ ಭದ್ರಣ್ಣನವರೇ ವಹಿಸಿಕೊಂಡಿದ್ದರು. ಭದ್ರಣ್ಣ ಬರಹಗಾರರೂ ಹೌದು. ಅವರ ಅವಿಶ್ರಾಂತ ದುಡಿಮೆ ಎಲ್ಲರನ್ನೂ ಅಚ್ಚರಿಗೊಳಿಸುತ್ತಿತ್ತು. ಇಂತಹ ಕರ್ಮಯೋಗಿಯ ವಿಚಾರದಲ್ಲಿ ವಿಧಿ ಎಷ್ಟು ಕ್ರೂರವಾಗಿತ್ತು!

ಒಂದು ದಿನ ಭದ್ರಣ್ಣ ರಸ್ತೆಯಲ್ಲಿ ಹೋಗುತ್ತಿದ್ದಾಗ ಎದುರಿಗೆ ನಾಯಿಯೊಂದು

ಬಂದಿತು. ಬಹುಶಃ ಅದು ಹುಚ್ಚುನಾಯಿಯಾಗಿದ್ದಿರಬೇಕು. ಸುಮ್ಮನೆ ಹೋಗದೆ ಭದ್ರಣ್ಣನವರನ್ನು ಕಚ್ಚಿಬಿಟ್ಟಿತು. ಕೂಡಲೇ ಆಸ್ಪತ್ರೆಗೆ ಮಿತ್ರರು ಸೇರಿಸಿದರು. ಆದರೂ ಫಲಕಾರಿಯಾಗದೆ ಭದ್ರಣ್ಣ ಮರಣವನ್ನಪ್ಪಿದರು. ಯಮಧರ್ಮರಾಯನೇ ನಾಯಿಯ ರೂಪದಲ್ಲಿ ಬಂದು ಭದ್ರಣ್ಣನನ್ನು ಅಪಹರಿಸಿದನೋ ಏನೋ? ದೈವ ಲೀಲೆ ಎಷ್ಟು ವಿಚಿತ್ರ! 'ಶರಣರನ್ನು ಮರಣದಲ್ಲಿ ನೋಡು' ಎಂಬ ಗಾದೆಗೆ ತಕ್ಕ ಉದಾಹರಣೆಯಾಗಿದ್ದರು. ಭದ್ರಣ್ಣನವರು ಕೊನೆಯುಸಿರನ್ನು ಎಳೆಯುವಾಗಲೂ ಅವರಿಗೆ ದೇಶದ ಸ್ವಾತಂತ್ರ್ಯದ ಚಿಂತೆ : ಪೌರವಾಣಿಯ ಚಿಂತೆ. ಪೂರ್ಣಪ್ರಜ್ಞರಾಗಿಯೇ ಇದ್ದು– ''ನಾನು ಹೊರಡುತ್ತಿದ್ದೇನೆ. ಬೇಗನೆ ಜವಾಬ್ದಾರಿ ಸರ್ಕಾರ ಬರಲಿ; ಪೌರವಾಣಿಯ ಕೈಬಿಡಬೇಡಿ'' ಎಂದು ಹೇಳುತ್ತಲೇ ಕಣ್ಮುಚ್ಚಿದರು. ಭದ್ರಣ್ಣ ನಿಜವಾದ ಶರಣ; ದೇಶಸೇವೆಯೇ ಈಶಸೇವೆಯೆಂಬುದನ್ನು ಕೃತಿಯಲ್ಲಿ ಮಾಡಿ ತೋರಿಸಿದ ಮಹಾಯೋಧ.

ಪೌರವಾಣಿಗೆ ಭದ್ರವಾಗಿದ್ದ ನೆರವು ಭದ್ರಣ್ಣನವರ ಆಕಸ್ಮಿಕ ಮರಣದಿಂದಾಗಿ ಅಭದ್ರವಾಯಿತು. ಎಂ. ಎನ್. ಸೀತಾರಾಮಯ್ಯನವರೂ, ತಿ. ತಾ. ಶರ್ಮರವರೂ, ಎಚ್. ಎಸ್. ದೊರೆಸ್ವಾಮಿಯವರೂ ಪರಸ್ಪರ ಚರ್ಚೆ ನಡೆಸಿ, ಪತ್ರಿಕೆಯನ್ನು ಮುಂದುವರಿಸಿಕೊಂಡು ಬರಬೇಕೆಂದು ತೀರ್ಮಾನಿಸಿದರು. ವಾರಪತ್ರಿಕೆಯಾಗಿದ್ದುದು ದಿನಪತ್ರಿಕೆಯಾಯಿತು. ಎಚ್. ಎಸ್. ದೊರೆಸ್ವಾಮಿಯವರೇ ಸಂಪಾದಕತ್ವದ ಹೊಣೆಯನ್ನು ಹೊತ್ತರು. ಆಗ್ಗೆ ಆ ಪತ್ರಿಕೆಯ ಬೆಲೆ ಕೇವಲ ಮೂರು ಕಾಸು. ಆದರೆ ಸುದ್ದಿ ಸಂಗ್ರಹ ಅಪಾರವಾಗಿ ಇರುತ್ತಿತ್ತು. ಪಿ.ಟಿ.ಐ. ಮತು ರಾಯಿಟರ್ ಸುದ್ದಿಗಳನ್ನೆಲ್ಲಾ ಸಂಗ್ರಹಿಸಿ ಈ ಪತ್ರಿಕೆಯಲ್ಲಿ ಪ್ರಕಟಿಸಲಾಗುತ್ತಿತ್ತು.

ಎಲ್ಲಕ್ಕಿಂತ ಮಿಗಿಲಾಗಿ ತಿ. ತಾ. ಶರ್ಮರು ಈ ಪತ್ರಿಕೆಯಲ್ಲಿ ಬರೆಯುತ್ತಿದ್ದ ಲೇಖನಗಳು ಸಕಲ ಜನರ ಮನಗಳನ್ನೂ ಸೂರೆಗೊಳ್ಳುತ್ತಿದ್ದುವು. ಮೈಸೂರು ರಾಜ್ಯದ ಅಂದಿನ ಆಡಳಿತದ ವೈಖರಿ, ಸರ್ಕಾರದ ಹುಚ್ಚು ದರ್ಬಾರು, ಆರ್ಕಾಟರ ಪೊಳ್ಳು ಕಟ್ಟುಕತೆಗಳು, ಮಹಾರಾಜರ ಪರಿವಾರ ಮೊದಲಾದ ವಿಷಯಗಳನ್ನು ಬಹಳ ಸ್ವಾರಸ್ಯವಾಗಿ ತಮ್ಮದೇ ಆದ ಗಂಡುಶೈಲಿಯಲ್ಲಿ ಶರ್ಮರವರು ಬರೆಯುತ್ತಿದ್ದರು.

'ಪೌರವಾಣಿ' ಪತ್ರಿಕೆಯೂ ಸಾಕಷ್ಟು ಕಿರುಕುಳಗಳನ್ನು ಅನುಭವಿಸಬೇಕಾಯಿತು. ಸರ್ಕಾರದವರು ಅದರ ಸಂಪಾದಕರಿಗೆ ಪತ್ರ ಬರೆದು, ''ನೀವು ನಿಮ್ಮ ಅಗ್ರ ಲೇಖನಗಳನ್ನು ಇನ್ನು ಮುಂದೆ ಸರ್ಕಾರದ ಮುಖ್ಯ ಕಾರ್ಯದರ್ಶಿಗಳಿಗೆ ತೋರಿಸಿ, ಅವರ ಅನುಮತಿ ಪಡೆದು ಪ್ರಕಟಿಸಬೇಕು'' ಎಂದು ಆಜ್ಞಾಪಿಸಿದ್ದರು. ಆದರೆ ದೊರೆಸ್ವಾಮಿಯವರಾಗಲೀ ಶರ್ಮರವರಾಗಲೀ ಈ ಕಡಿವಾಣಗಳಿಗೆ ಜಗ್ಗಲಿಲ್ಲ. ಸರ್ಕಾರದ ಆಜ್ಞೆಗಳನ್ನು ಉಲ್ಲಂಘಿಸಿ ಶರ್ಮರವರ ಲೇಖನಗಳನ್ನು ಪ್ರಕಟಿಸಿಯೇಬಿಟ್ಟರು. ಆದರೆ ಪ್ರತಿಭಟನೆ ತೀವ್ರವಾದುದರಿಂದ ''ಪತ್ರಿಕೆಯನ್ನು ಇನ್ನುಮುಂದೆ ಪ್ರಕಟಿಸುವುದಿಲ್ಲ'' ಎಂದು ಆ ಪತ್ರಿಕೆಯಲ್ಲಿಯೇ ಪ್ರಕಟಿಸಿ ಪ್ರಸಾರ ಮಾಡಲಾಯಿತು. ತತ್ಫಲವಾಗಿ ಪೌರವಾಣಿ ಹಿಂದೂಪುರದಲ್ಲಿ ಪ್ರಕಟವಾಗಬೇಕಾಯಿತು.

ಪತ್ರಿಕೆ ಹಿಂದೂಪುರದಲ್ಲಿ ಪ್ರಕಟವಾಗುತ್ತಿದ್ದುದೇನೋ ಸರಿ. ಆದರೆ ಅದನ್ನು ಬೆಂಗಳೂರಿಗೆ ತರುವುದು ಹೇಗೆಂಬುದೇ ಒಂದು ಸಮಸ್ಯೆಯಾಗಿತ್ತು. ಏಕೆಂದರೆ ಪತ್ರಿಕೆ ತರುತ್ತಿದ್ದವರನ್ನು ಮಾರ್ಗದಲ್ಲಿಯೇ ದಸ್ತಗಿರಿ ಮಾಡುವ ಸಂಭವವೂ ಇತ್ತು. ರೈಲ್ವೆ ಸತ್ಯಾಗ್ರಹದ ದೆಸೆಯಿಂದಾಗಿ ಪತ್ರಿಕೆ ಖಾಸಗಿ ಬಸ್‌ಗಳಲ್ಲಿಯೇ ಬೆಂಗಳೂರಿಗೆ ಬರಬೇಕಾಗಿತ್ತು. ಬೆಂಗಳೂರಿನ ಬಳೇಪೇಟೆಯಲ್ಲಿದ್ದ ಶಾಮಣ್ಣನವರು ಈ ಪತ್ರಿಕೆಯ ಏಜೆಂಟರಾಗಿದ್ದರು. ಅವರಿಗೆ ಸಕಾಲಕ್ಕೆ ಪತ್ರಿಕೆ ಹೇಗಾದರೂ ತಲುಪಲೇಬೇಕಾಗಿತ್ತು.

ಒಂದು ದಿನವಂತೂ ಪರಿಸ್ಥಿತಿ ಬಹಳ ಕಷ್ಟಕ್ಕಿಟ್ಟುಕೊಂಡಿತು. ಅಂದು ಬೆಂಗಳೂರಿನಲ್ಲಿ ಕರ್ಫ್ಯೂ ಬೇರೆ. ಬೆಳಗ್ಗೆ ಆರು ಘಂಟೆಯ ಒಳಗಾಗಿ ಪತ್ರಿಕೆಗಳನ್ನು ತಲುಪಿಸುವುದು ಹೇಗೆ? ಎಷ್ಟು ಆಲೋಚಿಸಿದರೂ ಈ ಸಮಸ್ಯೆ ಬಗೆಹರಿಯಲಿಲ್ಲ. ಈ ಸಮಯದಲ್ಲಿ ಉಪಾಧ್ಯಾಯರಾಗಿದ್ದ ಶೇಷಗಿರಿ ಎಂಬುವರೊಬ್ಬರು ಮುಂದೆ ಬಂದರು. ''ಏನೂ ಯೋಚಿಸಬೇಡಿ, ನಾನು ಬೆಂಗಳೂರಿಗೆ ಹೋಗಿ ಕೊಟ್ಟುಬರುತ್ತೇನೆ'' ಎಂದು ಹೇಳಿ ಗುರುತರವಾಗಿದ್ದ ಆ ಜವಾಬ್ದಾರಿಯನ್ನು ಹೊತ್ತುಕೊಂಡರು.

ಆದರೆ ಆ ಕೆಲಸ ಅಷ್ಟು ಸುಲಭವಾಗಲಿಲ್ಲ. ಮರುದಿನ ಪ್ರಾತಃಕಾಲ ಆರು ಘಂಟೆಯೊಳಗಾಗಿ ಪತ್ರಿಕೆ ಓದುಗರ ಕೈಯಲ್ಲಿರಬೇಕು – ಅಂದರೆ ಏಜೆಂಟರಿಗೆ ನಾಲ್ಕು ಘಂಟೆಯ ಹೊತ್ತಿಗೆ ತಲುಪಿಸಿರಬೇಕು. ಸರಿ ಶೇಷಗಿರಿಯವರು ಪತ್ರಿಕೆಗಳ ಕಟ್ಟನ್ನು ತಮ್ಮ ಸೈಕಲ್ಲಿಗೆ ಕಟ್ಟಿಕೊಂಡು ಸಂಜೆ ಏಳು ಘಂಟೆಗೇ ಹೊರಟರು. ಆದರೆ ಪ್ರಕೃತಿಯೂ ಅವರಿಗೆ ಅಸಹಕಾರವನ್ನು ತೋರುವುದೇ? ಅವರ ದುರಾದೃಷ್ಟವೆಂಬಂತೆ ಆ ರಾತ್ರೆ ಮಳೆ ಬೇರೆ. ಶೇಷಗಿರಿಯವರು ಮಳೆಗೆ ಜಗ್ಗಲಿಲ್ಲ. ಚಳಿಗೆ ಕುಗ್ಗಲಿಲ್ಲ. ಧೈರ್ಯದಿಂದ ಹೊರಟೇಬಿಟ್ಟರು. ಅಲ್ಲಲ್ಲಿ ನಿಂತು, ರಾತ್ರೆಯೆಲ್ಲಾ ಪ್ರಯಾಣಮಾಡಿ ಬೆಳಗಿನ ಜಾವ ನಾಲ್ಕು ಘಂಟೆಗೆ ಬೆಂಗಳೂರನ್ನು ತಲುಪಿದರು. ನೇರವಾಗಿ ಶಾಮಣ್ಣನವರ ಅಂಗಡಿಗೆ ಹೋಗಿ ಪತ್ರಿಕೆಗಳ ಕಟ್ಟನ್ನು ಅವರ ವಶಕ್ಕೊಪ್ಪಿಸಿ ಸಮಾಧಾನದ ನಿಟ್ಟುಸಿರನ್ನು ಬಿಟ್ಟರು. ಆರು ಘಂಟೆಯಿಂದ ಮುಂದೆ ಬೆಂಗಳೂರಿನಲ್ಲಿ ಕರ್ಫ್ಯೂ. ಅಷ್ಟರೊಳಗೆ ಪತ್ರಿಕೆ ಬೆಂಗಳೂರನ್ನು ತಲುಪಿ, ಯಥಾಪ್ರಕಾರ ಓದುಗರ ಕೈಯಲ್ಲಿ ರಾರಾಜಿಸಿತ್ತು. ■

## ಬೀಸುವ ಮರಳು



ಹೊಲಿದ ಹಾಗೆ ಮುಖ ಚರ್ಮ
ಮತ್ತು ಬೇರಿನ ಹಾಗೆ
ನೀರಿನ ಆಳಕ್ಕೆ
ಹುಗಿದುಕೊಳ್ಳುತ್ತಿರುವ ಮುಖ

ಅವನ ತಲೆ ಎಳೆದು
ಅವನ ಕಿವಿಯಲ್ಲಿ ತುತ್ತೂರಿ ಊದುವ
ಟಿ.ವಿ., ರೇಡಿಯೋ
ಅವನ ಮನಸಲಿ
ಕಂಪಿಸಿ ಇಲ್ಲವಾಗುವ ಹರಿವ-ಬಣ್ಣದ ದೃಶ್ಯಗಳು
ಸ್ವೇಚ್ಛಾಚಾರ

ಅವನ ಉಸಿರಲ್ಲಿ ಕತ್ತರಿಸಿ ಹರಡಿ
ಹೋಗಿರುವ
ಅವನು ತೀವ್ರವಾಗಿ ಜೀವಿಸಿದ
ಕಾಡಿನಂಥಾ ದಿನಗಳು

ಮುಂಬಾಗಿದ ಅವನ ತಲೆಯನ್ನು
ಎತ್ತಿ
ಬೀಸುವ ಮರಳು ಅವನ ಗಡ್ಡ, ಮೀಸೆ
ಮಮತೆಯಿಂದ ನೆಂದ ತುಟಿಗಳನ್ನು
ಅವನ ವಿಶಾಲ ಕಣ್‌ರೆಪ್ಪೆಗಳನ್ನು ಹೊಕ್ಕು

ಜ್ಞಾನದಿಂದ ತೂಗಿದ ಅವನ ಕಣ್ಣುಗಳೂ
ಕಾಣದಂತೆ ಮುಚ್ಚಿ
ಅವುಗಳನ್ನು ಒಳಗೇ
ಭಾರವಾಗಿಸಿವೆ.

ಅಂಕುರ್ ಬೆಟಗೇರಿ
೧೦೬, ಇ.ಎ.ಟಿ. ರಸ್ತೆ, ಬಸವನಗುಡಿ
ಬೆಂಗಳೂರು - ೫೬೦ ೦೦೪

# ಸಾಹಿತ್ಯ ಮತ್ತು ದಲಿತ ಚಳುವಳಿ

● ಡಾ॥ ಬಿ. ಎಂ. ಪುಟ್ಟಯ್ಯ

**ಸಾಹಿತ್ಯ ಎಂಬುದಕ್ಕೆ ಯಾವ ವ್ಯಾಖ್ಯಾನ ಮತ್ತು ವಿವರಣೆಯನ್ನು ಕೊಡುತ್ತೇವೆಯೋ ಅದಕ್ಕೆ ಅನುಗುಣವಾಗಿ ಚಳುವಳಿ/ದಲಿತ ಚಳುವಳಿಯ ಅರ್ಥವ್ಯಾಪ್ತಿ ರೂಪಿತವಾಗುತ್ತದೆ. ಚಳುವಳಿಯನ್ನು ತದ್ವಿರುದ್ಧ ಎರಡು ಧೋರಣೆಗಳ ಮೂಲಕ ನಿರೂಪಿಸಲು ಮತ್ತು ವ್ಯಾಖ್ಯಾನಿಸಲು ಸಾಧ್ಯವಿದೆ. ಯಾಕೆಂದರೆ ಅಸಮಾನತೆ ಇರುವ ವ್ಯವಸ್ಥೆಯಲ್ಲಿ ಯಾವಾಗಲೂ ಎರಡು ಬಗೆಯ ತದ್ವಿರುದ್ಧ ಚಳುವಳಿಗಳು ನಡೆಯುತ್ತಿರುತ್ತವೆ.**

ಸಾಹಿತ್ಯ ಎಂಬುದಕ್ಕೆ ಯಾವ ವ್ಯಾಖ್ಯಾನ ಮತ್ತು ವಿವರಣೆಯನ್ನು ಕೊಡುತ್ತೇವೆಯೋ ಅದಕ್ಕೆ ಅನುಗುಣವಾಗಿ ಚಳುವಳಿ / ದಲಿತ ಚಳುವಳಿಯ ಅರ್ಥ ವ್ಯಾಪ್ತಿ ರೂಪಿತವಾಗುತ್ತದೆ. ಚಳುವಳಿಯನ್ನು ತದ್ವಿರುದ್ಧ ಎರಡು ಧೋರಣೆಗಳ ಮೂಲಕ ನಿರೂಪಿಸಲು ಮತ್ತು ವ್ಯಾಖ್ಯಾನಿಸಲು ಸಾಧ್ಯವಿದೆ. ಯಾಕೆಂದರೆ ಅಸಮಾನತೆ ಇರುವ ವ್ಯವಸ್ಥೆಯಲ್ಲಿ ಯಾವಾಗಲೂ ಎರಡು ಬಗೆಯ ತದ್ವಿರುದ್ಧ ಚಳುವಳಿಗಳು ನಡೆಯುತ್ತಿರುತ್ತವೆ.

ಚಳುವಳಿ ಎಂದರೆ, ವ್ಯವಸ್ಥೆಯ ವೈರುಧ್ಯಗಳನ್ನು ಅಥವಾ ವೈರುಧ್ಯದ ಕಾರಣಗಳನ್ನು ಕಂಡುಕೊಳ್ಳುವುದು ಮತ್ತು ಅದರ ನಿವಾರಣೆಯ ಮಾರ್ಗಗಳನ್ನು ಕಾರ್ಯಗತಗೊಳಿಸುವುದು. ಇದಕ್ಕೆ ಬೇಕಾದ ದಾರಿ ಮತ್ತು ಗುರಿಯನ್ನು ಸೈದ್ಧಾಂತಿಕವಾಗಿ ಕಂಡುಕೊಂಡು ಆಚರಣೆಯಲ್ಲಿ ತೊಡಗುವುದು. ಇಂಡಿಯಾದಲ್ಲಿ ಈವರೆಗೆ ಮುಖ್ಯವಾಗಿ ವರ್ಣ, ಜಾತಿ, ವರ್ಗ ಹಾಗೂ ಲಿಂಗ ವೈರುಧ್ಯಗಳನ್ನು ಗುರುತಿಸಲಾಗಿದೆ. ಚಳುವಳಿಗಳು ಸಾಮಾನ್ಯವಾಗಿ ಈ ನಾಲ್ಕರಲ್ಲಿ ಯಾವುದಾದರೂ ಒಂದು ಚೌಕಟ್ಟಿನಲ್ಲಿ ಇರುತ್ತವೆ. ವ್ಯವಸ್ಥೆಯ ಸುಧಾರಣೆ, ಮೇಲ್ಪದರದ ಬದಲಾವಣೆ, ಪರಿಷ್ಕರಣೆ, ಮತ್ತು ಸಮಗ್ರ ಬದಲಾವಣೆ, ಇವುಗಳನ್ನು ಅವು ತಮ್ಮ ದಾರಿ ಮತ್ತು ಗುರಿಯನ್ನಾಗಿ ಹೊಂದಿರುತ್ತವೆ. ಇವು ಸ್ಥೂಲವಾಗಿ ಶೋಷಿತರ ಚಳುವಳಿಗಳು ಅಥವಾ ಶೋಷಿತರ ಪರವಾದ ಚಳುವಳಿಗಳು.

ಚಳುವಳಿಯನ್ನು ಹತ್ತಿಕ್ಕುವುದು ಎಂದರೆ, ವ್ಯವಸ್ಥೆಯ ವೈರುಧ್ಯಗಳನ್ನು ಅಥವಾ ವೈರುಧ್ಯದ ಕಾರಣಗಳನ್ನು ಮುಚ್ಚಿಡುವುದು ಮತ್ತು ಅದರ ನಿವಾರಣೆಯ ಮಾರ್ಗಗಳನ್ನು ಮುಚ್ಚಿಡುವುದು. ವ್ಯವಸ್ಥೆಯ ವೈರುಧ್ಯಗಳ ಜಾಗದಲ್ಲಿ ವೈರುಧ್ಯವಲ್ಲದ ನೆಪಗಳನ್ನು ಮತ್ತು ತೋರಿಕೆಗಳನ್ನು ಮೂಲಕಾರಣಗಳೆಂದು ತೋರಿಸುವುದು; ಅದಕ್ಕೆ ಅನುಗುಣವಾಗಿ ತೋರಿಕೆಯ ನೆಪಗಳನ್ನು ನಿವಾರಣೆಯ ಮಾರ್ಗಗಳೆಂದು, ಸಾಧನಗಳೆಂದು ಪ್ರಚುರಪಡಿಸುವುದು. 'ವ್ಯವಸ್ಥೆಯ ಬದಲಾವಣೆ'ಯ ಆಶಯದ ಚಳುವಳಿಗಳ ಸೈದ್ಧಾಂತಿಕ ದೌರ್ಬಲ್ಯಗಳನ್ನು ದುರುಪಯೋಗಪಡಿಸಿಕೊಂಡು, 'ಬದಲಾವಣೆ'ಗೆ ವಿರುದ್ಧವಾಗಿರುವ ವ್ಯವಸ್ಥೆಯ ಹಿತವನ್ನು ಕಾಯುವ ದಾರಿಗಳನ್ನು ಅವುಗಳಿಗೆ ತೋರಿಸುವುದು. ಅಂದರೆ ವ್ಯವಸ್ಥೆಯ ವೈರುಧ್ಯಗಳನ್ನು, ಬೇರೆ ಮಾತಿನಲ್ಲಿ ಹೇಳುವುದಾದರೆ ಮಾನವರಿಂದ ಮಾನವರ ಶೋಷಣೆಯನ್ನು, ಹಾಗೆಯೇ ನಯವಾಗಿ, ನಾಜೂಕಾಗಿ ಮುಂದುವರಿಸುವುದು. ಇವು ಸ್ಥೂಲವಾಗಿ ಶೋಷಕರ ಚಳುವಳಿಗಳು ಅಥವಾ ವ್ಯವಸ್ಥೆಯ ಪರವಾದ ಚಳುವಳಿಗಳು.

ಸಾಮಾನ್ಯವಾಗಿ ಶೋಷಿತರು ಮಾತ್ರವೇ ಸಂಘಟಿತರಾಗುತ್ತಾರೆ, ಹೋರಾಡುತ್ತಾರೆ, ಚಳುವಳಿ ಮಾಡುತ್ತಾರೆ – ಇತ್ಯಾದಿಯಾಗಿ ಹೇಳಲಾಗಿದೆ ಮತ್ತು ನಂಬಲಾಗಿದೆ. ವಾಸ್ತವ ಇಷ್ಟು ಸರಳವಿಲ್ಲ. ಜಗತ್ತಿನ ನುಂಗಣ್ಣನಾದ ಅಮೆರಿಕಾದ ಆಳುವ ವರ್ಗ ಕೂಡ (ಅಲ್ಲಿ ದುಡಿವ ವರ್ಗ ಇದೆ ಎಂಬುದನ್ನು ಮರೆಯಬಾರದು) ತಾನೂ ಹೋರಾಟಕ್ಕೆ, ಚಳುವಳಿಗೆ ಕರೆಕೊಡುತ್ತಿದೆ. ಅಲ್ಲಿಂದ ಮೊದಲುಗೊಂಡು ಇಂಡಿಯಾದ ಆಳುವ ವರ್ಗ ಕೂಡ ತನ್ನ ವ್ಯಾಪ್ತಿಯಲ್ಲಿ ಹೋರಾಟಕ್ಕೆ ಕರೆಕೊಡುತ್ತಿದೆ; ಅಂದರೆ ಹೋರಾಟಕ್ಕೆ ಕರೆಕೊಡದ, ಹೋರಾಟ ಮಾಡದ ವರ್ಗಶಕ್ತಿಗಳು ಇಲ್ಲವೆಂದೇ ಹೇಳಬೇಕು. ಶೋಷಕರು ಮತ್ತು ಆಳುವ ವರ್ಗಗಳು ತಾವೂ ಹೋರಾಟ ಮಾಡುತ್ತಾ ಅಥವಾ ಹೋರಾಟ ಮಾಡುತ್ತಿದ್ದೇವೆ ಎಂದು ತೋರಿಸುತ್ತಾ, ನಂಬಿಸುತ್ತಾ ಶೋಷಿತರ ಹೋರಾಟದ ಸಹಜ ಕೆಚ್ಚುಗಳ ತೀವ್ರತೆಯನ್ನು ಕಡಿಮೆ ಮಾಡುತ್ತಿವೆ, ಶೋಷಿತರ ಹೋರಾಟದ ಸೈದ್ಧಾಂತಿಕತೆಯನ್ನು ದುರ್ಬಲಗೊಳಿಸಲು ಶತಾಯಗತಾಯ ಪ್ರಯತ್ನಿಸಿವೆ. ಹೋರಾಟ ಮತ್ತು ಹೋರಾಟಗಾರರನ್ನು ಹತ್ತಿಕ್ಕಲು ಪ್ರಭುತ್ವದ ಯಂತ್ರಾಂಗಗಳು ಜನವಿರೋಧಿ ಕಪ್ಪು ಕಾನೂನುಗಳನ್ನು ಜಾರಿ ಮಾಡುತ್ತಲೇ ಸಾಗಿವೆ. ಹೋರಾಡುವುದೇ ಅಪರಾಧ, ಭಯೋತ್ಪಾದನೆ, ಎಂದೆಲ್ಲ ಪ್ರಚಾರ ಮಾಡಲಾಗುತ್ತಿದೆ. ಹಾಗಾಗಿ ಹೋರಾಟ ಮತ್ತು ಚಳುವಳಿಯನ್ನು ವ್ಯವಸ್ಥೆಯ ವಿರುದ್ಧ ಎಂದು ಮಾತ್ರ ಸರಳೀಕರಿಸುವಂತಿಲ್ಲ. ವ್ಯವಸ್ಥೆಯ ವಿರುದ್ಧದ ಹೋರಾಟ ಮತ್ತು ಚಳುವಳಿಗಳನ್ನು ಪ್ರಭುತ್ವ ಪ್ರೇರಿತ ಶಕ್ತಿಗಳು ತಮ್ಮ ಹೋರಾಟದ ಮೂಲಕ ಮಣಿಸಲು ಸದಾ ಹವಣಿಸುತ್ತವೆ. ಹಾಗಾಗಿ ವ್ಯವಸ್ಥೆಯ ವಿರುದ್ಧದ ಹೋರಾಟಗಳು ಮತ್ತು ಚಳುವಳಿಗಳು ಪ್ರಭುತ್ವದ ಹೋರಾಟಗಳನ್ನು/ಚಳುವಳಿಗಳನ್ನು ಗಂಭೀರವಾಗಿ ಪರಿಗಣಿಸಬೇಕಾಗುತ್ತದೆ. ವ್ಯವಸ್ಥೆಯ ಪ್ರಧಾನ ವೈರುಧ್ಯಗಳನ್ನು ಜನತೆಯ ಹೋರಾಟಗಳು ಕೆಣಕಿದಾಗಲೆಲ್ಲ ಪ್ರಭುತ್ವದ ವಿಷಗರ್ಭದಿಂದಲೇ ಹೋರಾಟಗಳು ಮೇಲೇಳುತ್ತವೆ.

ಚಳುವಳಿಗಳನ್ನು ಕುರಿತು ದುರ್ಬಲ ಅಗ್ಗದ ವೈಚಾರಿಕ ಧಾರಾಳತನದ ಶಾಬ್ದಿಕ ದುಂದುವೆಚ್ಚದ ಮುಗ್ಧ ಹೇಳಿಕೆಗಳು ಪುಂಖಾನುಪುಂಖವಾಗಿ ಉದುರುತ್ತಿವೆ. ಇವುಗಳನ್ನು ಸೈದ್ಧಾಂತಿಕ ಸ್ಪಷ್ಟತೆಯ ಆಳದ ಪರಿಪಕ್ವತೆಯಲ್ಲಿ ರಾಜಿರಹಿತವಾಗಿ ಮರುವಿಮರ್ಶೆ ಮಾಡಿಕೊಳ್ಳಬೇಕಿದೆ. ಇದಾಗದಿದ್ದರೆ, ಸುಧಾರಣವಾದಿ, ಪರಿಷ್ಕರಣವಾದಿ ಹಾಗೂ ಸಮಗ್ರ ಬದಲಾವಣೆಯ ಆಶಯದ ಚಳುವಳಿಗಳನ್ನು ಒಂದೇ ಚೌಕಟ್ಟಿನಲ್ಲಿ ವೈರುಧ್ಯ ರಹಿತವಾಗಿ ಗ್ರಹಿಸುವ ತಾತ್ವಿಕ ದೌರ್ಬಲ್ಯ ಹಾಗೆಯೇ ಮುಂದುವರಿಯುತ್ತದೆ. ಉದಾಹರಣೆಗೆ ಬುದ್ಧ, ಬಸವ, ಅಂಬೇಡ್ಕರ್ ಎನ್ನುವುದು. ಅಂಬೇಡ್ಕರ್, ಲೋಹಿಯಾ, ಗಾಂಧಿ, ಮಾರ್ಕ್ಸ್ ಎನ್ನುವುದು. ಇವರ ಚಿಂತನೆಗಳ ನಡುವೆ ಇರುವ ಅಗಾಧ ತಾತ್ವಿಕ ವೈರುಧ್ಯಗಳನ್ನು ಬಗೆದು ನೋಡದೆ ಕೇವಲ ಔದಾರ್ಯದಿಂದ ಎಲ್ಲರನ್ನೂ ಒಂದೇ ತಾತ್ವಿಕತೆಯಲ್ಲಿ ಸೇರಿಸುವುದು. ಹೀಗೆ ಮಾಡುವುದರಿಂದ ಕೇವಲ ಹೇಳಿಕೆಗಳಲ್ಲೇ ಹೋರಾಟ ಮುಂದುವರಿಯುತ್ತದೆ. ಬರಿಯ ಹೇಳಿಕೆಗಳು ಹೋರಾಟ/ಚಳುವಳಿಗೆ ಏನನ್ನೂ ಕೊಡುವುದಿಲ್ಲ.

ವ್ಯವಸ್ಥೆಯ ವೈರುಧ್ಯಗಳು ಸೂಕ್ಷ್ಮಗೊಂಡು ಚಲನಶೀಲವಾದಾಗ ಶೋಷಕ ವರ್ಗ ಮತ್ತು ಪ್ರಭುತ್ವ ತನ್ನ ಶೋಷಣೆಯ ವಿಧಾನಗಳನ್ನು ಹೋರಾಟದ ರೂಪದಲ್ಲೂ ಪರಿವರ್ತಿಸಿಬಿಡುತ್ತದೆ. ಅದನ್ನು ಜನರ ಪರವಾಗಿದೆ ಎಂಬುದಾಗಿ ನಂಬಿಸಿ ಒಪ್ಪಿಸುತ್ತದೆ. ಪ್ರಭುತ್ವ ತನ್ನ ಹಿತಾಸಕ್ತಿಯನ್ನು ಜನತೆಯ ಹಿತಾಸಕ್ತಿ ಎಂದು ಮಾಧ್ಯಮಗಳ ಮೂಲಕ ಸಾರುತ್ತದೆ, ವರ್ಣಿಸುತ್ತದೆ. ಇಂತಹ ಅನೇಕ ಉದಾಹರಣೆಗಳನ್ನು ನಾವಿಂದು ನೋಡಬಹುದು. ಇತ್ತೀಚೆಗಂತೂ ಒಂದೇ ಬೇಡಿಕೆಯ ಬಗ್ಗೆ ಎರಡು ತದ್ವಿರುದ್ಧ ಹೋರಾಟಗಳು ನಡೆಯುತ್ತಿವೆ. 'ಒಂದನೆ ತರಗತಿಯಿಂದ ಇಂಗ್ಲಿಷ್ ಕಲಿಕೆ ಕಡ್ಡಾಯವಾಗಲಿ' ಎಂಬ ಹೋರಾಟ. ಅದಕ್ಕೆ ತದ್ವಿರುದ್ಧವಾಗಿ 'ಇಂಗ್ಲಿಷ್ ಕಲಿಕೆ ಕಡ್ಡಾಯ ಬೇಡ' ಎಂಬ ಹೋರಾಟ. 'ಭದ್ರಾ ಮೇಲ್ದಂಡೆ ಯೋಜನೆ ಬೇಡ' ಎಂಬ ಹೋರಾಟ. ಅದಕ್ಕೆ ತದ್ವಿರುದ್ಧವಾಗಿ 'ಭದ್ರಾ ಮೇಲ್ದಂಡೆ ಯೋಜನೆ ಬೇಕು' ಎಂಬ ಹೋರಾಟ. 'ಖಾಸಗೀಕರಣದಲ್ಲೂ ಮೀಸಲಾತಿ ಕೊಡಿ' ಎಂಬ ಹೋರಾಟ. ತದ್ವಿರುದ್ಧವಾಗಿ 'ಮೀಸಲಾತಿ ಉಳಿಸಲು ಖಾಸಗೀಕರಣವನ್ನು ಒದ್ದೋಡಿಸಿ' ಎಂಬ ಹೋರಾಟ. ಈ ಎರಡೂ ಕೂಡ ಜನತೆಯ ಪರವಾಗಿವೆ ಎಂಬಂತೆಯೇ ಕಾಣುತ್ತಿವೆ. ಏಕೆಂದರೆ, ಎರಡೂ ಕಡೆ ಜನರಿದ್ದಾರೆ. ಇಷ್ಟೇ ಏಕೆ ? ಸಾಮ್ರಾಜ್ಯಶಾಹಿಯ ಜಾಗತಿಕ ಶೋಷಣೆಯ ವಿರುದ್ಧ ಜಗತ್ತಿನೆಲ್ಲೆಡೆ ಶೋಷಿತ ಜನತೆ ವಿವಿಧ ಬಗೆಯ ರಾಜಿರಹಿತ ವೀರೋಚಿತ ಹೋರಾಟಗಳಿಗೆ ಮುಂದಾಗಿದೆ. ಇಂತಹ ಸಂದರ್ಭದಲ್ಲಿ ಸಾಮ್ರಾಜ್ಯಶಾಹಿ ಅಂತಹ ಹೋರಾಟಗಳನ್ನು ದಾರಿ ತಪ್ಪಿಸಲು ಮತ್ತು ಅವನ್ನು ತನ್ನ ಹಿತಾಸಕ್ತಿಗೆ ಪೂರಕವಾಗಿ ಮಾರ್ಪಡಿಸಲು

ಜಾಗತಿಕ ಸಮಾಜ ವೇದಿಕೆಯನ್ನು ಜಾಗತೀಕರಣ ವಿರೋಧಿ ಪೋಷಾಕಿನಲ್ಲಿ ಕೈಗೆತ್ತಿಕೊಂಡಿತು. ಆ ವೇದಿಕೆಯಲ್ಲಿ ಕೂಡ ಜನರಿದ್ದರು! ಆದರೆ ಸಾಮ್ರಾಜ್ಯಶಾಹಿಯ ಕುತಂತ್ರಗಳ ಬಗ್ಗೆ ಸಾಮಾನ್ಯ ತಿಳುವಳಿಕೆ ಇರುವವರಿಗೆ ಅದರ ದಾರಿ ಮತ್ತು ಗುರಿ ಗುಟ್ಟಾಗಿ ಉಳಿಯಲಿಲ್ಲ.

ಶೋಷಣೆಯನ್ನು ಉಳಿಸಲು ಹಾಗೂ ಅದನ್ನು ಮುಂದುವರಿಸಿಕೊಂಡು ಹೋಗಲು ಶೋಷಕರ ಚಳುವಳಿ ಮತ್ತು ಶೋಷಣೆಯನ್ನು ಅಳಿಸಲು, ಶೋಷಿತರನ್ನು ವಿಮೋಚನೆಗೊಳಿಸಲು ಶೋಷಿತರ ಚಳುವಳಿ, ಈ ಎರಡೂ ಬಗೆಯ ಚಳುವಳಿಗಳು ನಮ್ಮ ಮುಂದಿವೆ.

ದಲಿತ ಚಳುವಳಿಯನ್ನು ನಾವು ಯಾವ ಮಾದರಿಯ ಚಳುವಳಿ ಎನ್ನಬೇಕು? ಅದನ್ನು 'ಸಮಗ್ರ ಬದಲಾವಣೆಯ ಆಶಯದ ಚಳುವಳಿ' ಎಂದೇ ಅದರೊಳಗಿನವರು ಕರೆಯುತ್ತಾರೆ. ಆದರೆ ಈ ತೀರ್ಮಾನವನ್ನು ಮರುವಿಮರ್ಶೆ ಮಾಡಬೇಕಾಗಿದೆ. ದಲಿತ ಚಳುವಳಿಗೆ ಕರ್ನಾಟಕದಲ್ಲಿ ಸಾಂಪ್ರದಾಯಿಕವಾಗಿ ೩೦ ವರುಷಗಳ ಇತಿಹಾಸವಿದೆ. ಈ ೩೦ ವರುಷಗಳಲ್ಲಿ ದಲಿತ ಚಳುವಳಿಯ ಆಲೋಚನೆಗಳು, ವಿಚಾರಗಳು, ಹೋರಾಟದ ರೂಪಗಳು ಒಂದೇ ರೀತಿಯಲ್ಲಿ ಇಲ್ಲ. ಈಗಂತೂ ಅದು ಛಿದ್ರಗೊಂಡು ಅನೇಕ ಗುಂಪುಗಳಾಗಿ, ಬಣಗಳಾಗಿಹೋಗಿದೆ. ಡಿಎಸ್‌ಎಸ್ ಗುಂಪುಗಳು ಸ್ಥೂಲವಾಗಿ ಒಂದು ಸಾಮಾನ್ಯ ತಾತ್ವಿಕ ಚೌಕಟ್ಟಿಗೆ ಬರುತ್ತವೆ. ಅವುಗಳಲ್ಲಿ ಹೋರಾಟಕ್ಕೆ ಬೇಕಾದ ಖಚಿತವಾದ ಒಂದು ಸಿದ್ಧಾಂತ ಇನ್ನೂ ರೂಪುಗೊಂಡಿಲ್ಲ ಮತ್ತು ಅದು ರೂಪುಗೊಳ್ಳಬಹುದಾದ ಯಾವ ತಾತ್ವಿಕ ಭರವಸೆಯ ಲಕ್ಷಣಗಳೂ ಕಾಣುತ್ತಿಲ್ಲ. ಸದ್ಯಕ್ಕೆ ಅವು ಕೇವಲ ಕೆಲವು ಚಿಂತನೆ, ಆಲೋಚನೆ ಮತ್ತು ಹೇಳಿಕೆಗಳ ಮೇಲೆ ನಿಂತಿವೆ. ಹೇಳಿಕೆಗಳಲ್ಲಿ ನಿಂತು ದಲಿತರ ಪರಿಸ್ಥಿತಿ ಮತ್ತು ಪರ್ಯಾಯವನ್ನು ಅತ್ಯಂತ ಮೇಲ್‌ಸ್ತರದಲ್ಲಿ ಪರಿಗಣಿಸುವ ಸಂಘಟನೆಯನ್ನು 'ಚಳುವಳಿ' ಎಂದು ಕರೆಯುವುದು ತಾತ್ವಿಕವಾಗಿ ಬಹಳ ದುಬಾರಿ ಪರಿಭಾಷೆಯಾಗುತ್ತದೆ. ಅದರಿಂದ 'ದಲಿತ ಚಳುವಳಿ' ಎನ್ನುವ ಬದಲು 'ದಲಿತ ಹೋರಾಟಗಳು' ಎಂದು ಕರೆಯಬಹುದು. ತಾತ್ವಿಕವಾಗಿ ಇವೆಲ್ಲವೂ ಸುಧಾರಣಾವಾದಿ ಹೋರಾಟಗಳೇ ಆಗಿವೆ.

**ದಲಿತ ಹೋರಾಟವನ್ನು ೧೯೮೮ರವರೆಗಿನ ಮೊದಲ ಘಟ್ಟ ಮತ್ತು ೧೯೮೮ರ ನಂತರದ ಎರಡನೇ ಘಟ್ಟ ಎಂದು ವಿಂಗಡಿಸಿಕೊಳ್ಳಬಹುದು.**

ಮೊದಲ ಘಟ್ಟದಲ್ಲಿ ಡಿಎಸ್‌ಎಸ್ ಅವಿಭಜಿತವಾಗಿತ್ತು. ಕರ್ನಾಟಕದಲ್ಲಿ ಕೆಲವು ಭೂ ಹೋರಾಟಗಳನ್ನು ನಡೆಸಿತು. ಸಂಸದೀಯ ಚುನಾವಣೆಗಳನ್ನು ಬಹಿಷ್ಕರಿಸುತ್ತಿತ್ತು. ಸರಕಾರಿ ಹೆಂಡದ ವಿರುದ್ಧ ಹೋರಾಟವನ್ನು ನಡೆಸಿತು. ದಲಿತರ ಮೇಲೆ ಕರ್ನಾಟಕದಾದ್ಯಂತ ಭೂಮಾಲಿಕರು ತಮ್ಮ ಹಕ್ಕೆಂಬಂತೆ ನಡೆಸಿದ ಕ್ರೂರ ದೌರ್ಜನ್ಯಗಳನ್ನು ವಿರೋಧಿಸಿ ಹೋರಾಟ ಮಾಡಿತು. ಪರೋಕ್ಷವಾಗಿ ಇಲ್ಲವೆ ಪ್ರತ್ಯಕ್ಷವಾಗಿ ಆಳುವ ವರ್ಗದ ವಿರುದ್ಧ ಸೆಣಸುತ್ತಿತ್ತು. ಕರ್ನಾಟಕದಾದ್ಯಂತ ಬಹುಸಂಖ್ಯಾತ ದಲಿತ ಶಿಕ್ಷಿತರನ್ನು ಮತ್ತು ಕೆಲವು ಅಶಿಕ್ಷಿತರನ್ನೂ ಸಾಮಾನ್ಯ ಕಾರ್ಯಕರ್ತರನ್ನಾಗಿ ರೂಪಿಸಿತು. ನಾಡಿನ ಕೇರಿಕೇರಿಗಳಿಗೆ ಡಾ॥ ಅಂಬೇಡ್ಕರ್ ಅವರನ್ನು 'ದಲಿತರ ಸ್ವಾಭಿಮಾನದ ಶಕ್ತಿ' ಎಂದು ಪರಿಚಯಿಸಿತು. ದಲಿತ ಹೋರಾಟದ ರಾಜಕೀಯ ಪರಂಪರೆಯನ್ನು ಸ್ಥಾಪಿಸಿತು ಮತ್ತು ಅದನ್ನು ದಲಿತರ ಸಾಮೂಹಿಕ ಪ್ರಜ್ಞೆಗೆ ತರುವ ಪ್ರಯತ್ನ ಮಾಡಿತು. ಬೆಲ್ಚಿ, ಪತ್ರೆ ಸಂಗಪ್ಪನ ಕಗ್ಗೊಲೆ ಮುಂತಾದ ನಾಟಕಗಳನ್ನು ಕೇರಿಕೇರಿಗಳಲ್ಲಿ ಆಡಿ ದಲಿತರ ದುರಂತ ಪರಿಸ್ಥಿತಿಯನ್ನು ಅವರ ಪ್ರಜ್ಞೆಗೆ ತಂದಿತು. ಆ ಮೂಲಕ ಕರ್ನಾಟಕದಲ್ಲಿ ದಲಿತರಿಗೆ ಒಂದು ಬಗೆಯ ಸ್ವಾಭಿಮಾನವನ್ನು, ಸಾಂಘಿಕ ಧೈರ್ಯವನ್ನು, ಶಿಕ್ಷಣ, ನೌಕರಿ ಪಡೆಯಬೇಕೆಂಬ ಛಲಗಳನ್ನು, ಶೋಷಣೆ, ಜಾತೀಯತೆ, ದೇವರು, ಹಿಂದೂಧರ್ಮ ಇವುಗಳನ್ನು ಪ್ರಶ್ನಿಸಬೇಕೆಂಬ ವೈಚಾರಿಕ ಪ್ರಜ್ಞೆಯನ್ನು ಐತಿಹಾಸಿಕವಾಗಿ ಮೊಟ್ಟಮೊದಲ ಬಾರಿಗೆ ತಂದುಕೊಟ್ಟಿತು. ದಲಿತರನ್ನು ಮಾನಸಿಕವಾಗಿ ಮತ್ತು ಬೌದ್ಧಿಕವಾಗಿ ಒಂದು ಬಗೆಯಲ್ಲಿ ಎಚ್ಚರಿಸಿದ ಸ್ಥಿತಿ ಇದು. ಇದು ಮೊದಲ ಘಟ್ಟದ ದಲಿತ ಹೋರಾಟದ ಒಂದು ಸ್ಥೂಲವಾದ ಸಾಮಾನ್ಯ ನೋಟ.

ಶಿಕ್ಷಣ ಪಡೆದ ದಲಿತರು ಸಂಘಟಿತರಾಗಿ ತಮ್ಮ ಮೇಲೆ ಊಳಿಗಮಾನ್ಯಶಾಹಿ ನಡೆಸುತ್ತಿದ್ದ ಹಲ್ಲೆ ಮತ್ತು ದೌರ್ಜನ್ಯಗಳನ್ನು ಚಾರಿತ್ರಿಕವಾಗಿ ಮೊದಲಬಾರಿಗೆ ವಿರೋಧಿಸಲು ಶುರುಮಾಡಿದರು. ಪಾರಂಪರಿಕವಾಗಿ ಏನೇ (ಜೀತ, ಹಲ್ಲೆ, ಅತ್ಯಾಚಾರ, ಮಾನಭಂಗ, ದೌರ್ಜನ್ಯ, ಕೊಲೆ ಇತ್ಯಾದಿ ಇತ್ಯಾದಿ) ಮಾಡಿದರೂ ಕಣ್ಣುಮುಚ್ಚಿಕೊಂಡು, ಸಹಿಸಿಕೊಂಡು (?), ಒಪ್ಪಿಕೊಂಡು (?), ಹೋಗುತ್ತಿದ್ದ ಈ ದಲಿತರು ಮೊದಲ ಬಾರಿಗೆ ಅದನ್ನು ಸಂಘಟಿತರಾಗಿ ವಿರೋಧಿಸಿದುದು ಊಳಿಗಮಾನ್ಯಶಾಹಿಯ ಕನಸಿನ ಕನಸಿನಲ್ಲಿಯೂ ಬಂದಿರಲಿಲ್ಲ. (ಅನಂತರವೇ ಅಮಾಸನ ಹುಲಿವೇಷದ ಕುಣಿತಕ್ಕೆ ಗೌಡರ ನಿದ್ದೆ ಕೆಟ್ಟಿದ್ದು.) ಹಾಗಾಗಿ ದಲಿತರ ಸಂಘಟಿತ ವಿರೋಧವು ಶೋಷಕರಲ್ಲಿ ಯಾವ ಯಾವ ಪರಿಣಾಮಗಳನ್ನು ಉಂಟುಮಾಡಿರಬಹುದು? ಇದನ್ನು ಸರಳವಾಗಿ ಊಹಿಸುವುದೂ ಕಷ್ಟ. 'ತಮ್ಮ ಮೇಲೆ ನಡೆಸುತ್ತಿರುವ ಹಲ್ಲೆ, ದೌರ್ಜನ್ಯಗಳನ್ನು ನಿಲ್ಲಿಸಿ'



## ಜಗದಂತರಂಗ

೧

ಕೆರಗುತ್ತಿದೆ ಜಗದಂತರಂಗ
ಮರುಗುವವರಿಲ್ಲ ಎಲ್ಲಾ ಕೊರಗುವವರೆ
ಸುಸ್ವರವ ಮೀಟಬೇಕಾದ ತಂತಿಗಳೆಲ್ಲ
ಕೊರಳ ಸುತ್ತಿವೆ ಉಸಿರಾಡದಂತೆ.

೨

ಭಗ್ನಾವಶೇಷಗಳ ರಾಶಿಯಂತೆ
ಕಣ್ಣಲ್ಲಿ ಕನಸಿರದ ಮನದಲ್ಲಿ ಛಲವಿರದ
ಸಿಡಿಮದ್ದಿನ ಕಿಡಿನಡುವೆ ಬದುಕ
ಸವೆಸುವ ನಾವು
ನಿರ್ಜೀವ ನಿಸ್ಸಾರ ಭೂತಗಳು?

೩

ಕಾರಿರುಳ ದುಸ್ವಪ್ನದಲೂ
ಜಾತಿ-ಮತ-ಭೇದಗಳ ಗುಡುಗು ಸಿಡಿಲು
ಚಿಗುರಿದ ಮರದಲ್ಲಿ ಕೂತ
ಹಕ್ಕಿಗಳ ಸಿರಿ ಕಂಠದಲ್ಲಿ ಇಂಚರವಿರಲಿಲ್ಲ
ಆಕ್ರಂದನವದು ಬಡಿಯುತಿದೆ ಕಿವಿಗೆ.

೪

ಬೀಸದೇ ತಣ್ಣನೆಯ ಗಾಳಿ
ನೋಟ ಬೀರಿದೆಡೆಯೆಲ್ಲ ಬರಡು ದಾರಿ
ಮತ್ತೆರಡು ಕಲ್ಪನೆಯ ಕನಸಲೊಮ್ಮೆ
ಮತ್ತೆ ಭೂತಗಳ ಸವಾರಿ.

೫

ಎಂದಿಗೆ ಕೊನೆ ಇಂತಹ ಘೋರ?
ಹಾರಿ ಬರಲಿ ಹೊಸ ಚೈತ್ರಗಳು
ಮಿಂಚಿ-ಮಿನುಗಲಿ ಹೊಂಬೆಳಕಿನ ವಸಂತಗಳು
ಹೊಸ ಭಾವಗಳ ತೀರಗಳು ವಿಸ್ತರಿಸಲಿ
ಒಮ್ಮನದ ಕನಸುಗಳು
ಪೂರ್ಣ ಚಂದಿರನಂತೆ ಬೆಳಗುತಿರಲಿ.

ಆರ್. ಮಹಾದೇವ್
ಮನೋವಿಜ್ಞಾನ ವಿಭಾಗ, ಮೂರನೇ ಸೆಮಿಸ್ಟರ್, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು - ೫೬೦ ೦೫೬

ಎಂಬುದಾಗಿ ದಲಿತರು ಹೋರಾಟ ಮಾಡಿ, ಪೊಲೀಸ್ ಇಲಾಖೆಯ ಮೊರೆಹೋದರು. ('ಕುಸುಮ ಬಾಲೆ'ಯಲ್ಲಿ: ೧೬ ಎಳೆನೀರು ಕುಡಿದಿದ್ದ ಗಾರಸಿದ್ಧಾಮನನ್ನು ಕಂಬಕ್ಕೆ ಕಟ್ಟಿ ಒಬ್ಬರ ಕೈ ಸೋತಾಗ ಮತ್ತೊಬ್ಬರು ಹೊಡೆಯುತ್ತಿದ್ದಾಗ, ಸುದ್ದಿ ತಿಳಿದು ಅಲ್ಲಿಗೆ ಬಂದ ನಾಗರಾಜು ಕೆಮ್ಮಿದಂತೆ ಮಾಡಿ, ಇದನ್ನು ಪೊಲೀಸು ಸ್ಟೇಶನ್ನಿಗೆ ಕೊಡಬಹುದಿತ್ತು ಎಂದು ಸಲಹೆ ಕೊಡುತ್ತಾರೆ. ಸಂಘಟಿತರಾಗಿಯೇ ಗಾರಸಿದ್ಧಾಮನಿಗೆ ಹೊಡೆಯುತ್ತಿರುವುದನ್ನು ಗಮನಿಸಬೇಕು.) ಇದಕ್ಕೆ ವಿರುದ್ಧವಾಗಿ ಊಳಿಗಮಾನ್ಯಶಾಹಿ ಶೋಷಕ ವಲಯದಲ್ಲಿ ಒಂದು ಬಗೆಯ ಯಾದೃಚ್ಛಿಕ/ಅನೌಪಚಾರಿಕ/ಅಘೋಷಿತ ರೂಪದ ಸಂಘಟನಾ ಪ್ರಕ್ರಿಯೆ ಶುರುವಾಯಿತು. ತಮ್ಮ ಹೋರಾಟದಿಂದ ಹಲ್ಲೆ, ದೌರ್ಜನ್ಯಗಳು ಕಡಿಮೆಯಾಗುತ್ತವೆ ಎಂದು ಎಣಿಸಿದ್ದ ಡಿಎಸ್‌ಎಸ್‌ನ ಲೆಕ್ಕಾಚಾರ ಕೆಲವೇ ದಿನಗಳಲ್ಲಿ ಸಂಪೂರ್ಣ ತಲೆಕೆಳಗಾಯಿತು. ಇವರ ಮೇಲೆ ನಡೆಯುತ್ತಿದ್ದ ಹಿಂಸೆ, ಹಲ್ಲೆ, ಕ್ರೌರ್ಯ ಮತ್ತು ದೌರ್ಜನ್ಯಗಳು ಕಡಿಮೆಯಾಗುವ ಬದಲು ಎರಡು ಮೂರು ಪಟ್ಟು ಹೆಚ್ಚಾಗ ತೊಡಗಿದವು. ಬೆಂಡಿಗೇರಿ, ಬದನವಾಳು ಇನ್ನೂ ಮುಂತಾದುವು ಕೆಲವು ಉದಾಹರಣೆಗಳು. ಭೂಮಾಲಿಕರು ನಡೆಸುವ ದೌರ್ಜನ್ಯಗಳ ಕ್ರಿಯಾ ಸಂಯೋಜನೆಯಲ್ಲಿ ಗುಣಾತ್ಮಕ ವ್ಯತ್ಯಾಸ ಕಂಡುಬಂತು. ದಲಿತ ಹೋರಾಟ ಹುಟ್ಟುವುದಕ್ಕಿಂತ ಮೊದಲು ಒಪ್ಪಿತ ರೂಪದಲ್ಲಿ, ಯಾದೃಚ್ಛಿಕ ಎನ್ನಬಹುದಾದ ರೀತಿಯಲ್ಲಿ ದೌರ್ಜನ್ಯಗಳನ್ನು ನಡೆಸಲಾಗುತ್ತಿತ್ತು. ದಲಿತರು ತಮ್ಮ ಹೋರಾಟವನ್ನು ಶುರುಮಾಡಿದ ಮೇಲೆ ಊಳಿಗಮಾನ್ಯಶಾಹಿಗಳ ಶೋಷಣೆ ಪ್ರಜ್ಞಾಪೂರ್ವಕ ದ್ವೇಷವಾಗಿ, ಹಗೆಯಾಗಿ, ಪ್ರತೀಕಾರವಾಗಿ ಮತ್ತು ಸೇಡಾಗಿ ಮಾರ್ಪಾಡಾಯಿತು. ಇದೆಲ್ಲದಕ್ಕಿಂತಲೂ ಭಯಾನಕವಾದ ಸಂಗತಿಯೆಂದರೆ ಭೂಮಾಲಿಕರ ದೌರ್ಜನ್ಯ ಸಂಘಟನಾತ್ಮಕ ರೂಪವನ್ನು, ಪೂರ್ವನಿಯೋಜಿತ ಸಂಚಿನ ಸ್ವರೂಪವನ್ನು ಪಡೆಯಿತು. ಫಲವಾಗಿ ಭೂಮಾಲಿಕರು ಗುಂಪು ಕಟ್ಟಿಕೊಂಡು ದಲಿತರ ಕೇರಿಕೇರಿಗಳನ್ನು ಸುಟ್ಟುಹಾಕ ತೊಡಗಿದರು. ಸಾಮಾಜಿಕ ಬಹಿಷ್ಕಾರ ಹಾಕತೊಡಗಿದರು. ಸಾಮೂಹಿಕ ಅತ್ಯಾಚಾರ, ಸಾಮೂಹಿಕ ಕೊಲೆಗಳನ್ನು ಇತ್ತೀಚಿನ ಗುಜರಾತನ್ನೂ ಮೀರಿಸುವಂತೆ ನಡೆಸಿದರು. ಡಿಎಸ್‌ಎಸ್‌ನ ನಾಯಕರ ಮೇಲೂ ಹಲ್ಲೆಗಳಾದವು. ಅಂದರೆ ಊಳಿಗಮಾನ್ಯ ಒಡೆಯರು ಕ್ರೌರ್ಯ ಮತ್ತು ದರ್ಪದಿಂದ ದಲಿತರನ್ನು ನಡೆಸಿಕೊಳ್ಳುತ್ತಿದ್ದ ಅವರ 'ಸಾಮಾಜಿಕ ಸ್ಥಾನಮಾನ'ವನ್ನು ದಲಿತ ಹೋರಾಟ ಮೊದಲ ಬಾರಿಗೆ ಚಾರಿತ್ರಿಕವಾಗಿ ಕೆಣಕಿತ್ತು. ಈ ಕಡೆ ದಲಿತರ ಪ್ರಜಾತಾಂತ್ರಿಕ ಸ್ವಾಭಿಮಾನ ಬೆಳೆಯಬೇಕೆಂದರೆ, ಆ ಕಡೆ ಊಳಿಗಮಾನ್ಯ ಶಾಹಿಯ ದರ್ಪ ಹಾಗೂ ಶೋಷಕ ಸ್ವಾಭಿಮಾನ ಸಡಿಲಗೊಳ್ಳಬೇಕಿತ್ತು. ಅದು ಸಡಿಲಗೊಳ್ಳುವುದನ್ನು ಅವರಾದರೂ ಹೇಗೆ ತಾನೆ ಸಹಿಸಿಕೊಂಡಾರು? ಇದು ಊಳಿಗಮಾನ್ಯಶಾಹಿಗೆ ಮತ್ತು ದಲಿತರಿಗೆ ಏಕಕಾಲಕ್ಕೆ ಇಮ್ಮುಖ ಸವಾಲುಗಳನ್ನು ಒಡ್ಡಿತು. ಪರಿಣಾಮವಾಗಿ ದಲಿತ ಹೋರಾಟವನ್ನು ಒಂದೋ ನಾಶಮಾಡಬೇಕಿತ್ತು ಇಲ್ಲವೆ ಶೋಷಣಾ ವ್ಯವಸ್ಥೆಗೆ ಪೂರಕವಾಗಿ ಅದನ್ನು ಮಾರ್ಪಡಿಸಬೇಕಿತ್ತು. ಅದೇ ಕಾಲಕ್ಕೆ ದಲಿತ ಹೋರಾಟ ತನ್ನ ದಾರಿಯಲ್ಲಿ ರಾಜಿರಹಿತವಾದ ವೀರೋಚಿತ ಮಾರ್ಗವನ್ನು ಹಿಡಿಯಬೇಕಿತ್ತು; ಇಲ್ಲವೆ ಭೂಮಾಲಿಕ ವರ್ಗದೊಂದಿಗೆ ಯಾವುದೇ ರೂಪದ ರಾಜಿಸಂಧಾನವನ್ನು ಮಾಡಿಕೊಳ್ಳಬೇಕಿತ್ತು.

ಈ ಸವಾಲುಗಳನ್ನು ಶೋಷಕ ಭೂಮಾಲಿಕ ಆಳುವ ವರ್ಗ ಚಾರಿತ್ರಿಕವಾಗಿ ನಿಭಾಯಿಸಿದ ಕ್ರಮ ಮಾತ್ರ ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ತುಂಬಾ ರೋಚಕವಾದುದು. ದಲಿತರ ಶ್ರಮಶೋಷಣೆ ನಡೆಯುತ್ತಿರುವುದು ಊರುಕೇರಿಗಳಲ್ಲಿ. ಇಂಡಿಯಾದ ಐದೂವರೆ ದಶಲಕ್ಷ ಹಳ್ಳಿಗಳಲ್ಲಿ ದಲಿತರು ಕೃಷಿಕೂಲಿ ಕಾರ್ಮಿಕರು. ದಲಿತರ ಎಲ್ಲಾ ಬಗೆಯ ಶೋಷಣೆಯ ಸಂಬಂಧ ಇರುವುದು ಭೂಮಾಲಿಕ ವರ್ಗದೊಂದಿಗೆ. ಇದು ದಲಿತರ ನಿತ್ಯ ಅನುಭವ. ದುರಂತವೇನಾಯಿತು ಎಂದರೆ ವರ್ತಮಾನದ ಭೂಮಾಲಿಕ ವರ್ಗವನ್ನು ಮುಚ್ಚಿಟ್ಟು 'ನಿಮ್ಮ ಶತ್ರುಗಳು ಬ್ರಾಹ್ಮಣರು, ಪುರೋಹಿತಶಾಹಿಗಳು' ಎಂದು ಚರಿತ್ರೆಯಲ್ಲಿ ಗ್ರಾಂಥಿಕ ಮಾಹಿತಿಗಳನ್ನು ದಲಿತರಿಗೆ ತೋರಿಸಲಾಯಿತು. ಬ್ರಾಹ್ಮಣ-ಶೂದ್ರ ವಿಂಗಡಣೆ ಮಾಡಲಾಯಿತು. ಪಂಚಮರಾದ ದಲಿತರನ್ನು ಶೂದ್ರ ಚೌಕಟ್ಟಿನಲ್ಲಿ ಗ್ರಾಂಥಿಕವಾಗಿ/ವೈಚಾರಿಕವಾಗಿ (ಆಚರಣೆಯಲ್ಲಿ ಅಲ್ಲ) ಸೇರಿಸಲಾಯಿತು. ಸಂಘಟಿತ ದಲಿತರಿಗೆ ಊಳಿಗಮಾನ್ಯಶಾಹಿಯ ಮೇಲೆ ವರ್ತಮಾನದಲ್ಲಿ ಹೆಪ್ಪುಗಟ್ಟಿದ್ದ ಅಸಹನೆ ಹಾಗೂ ಆಕ್ರೋಶವನ್ನು ನಯವಾಗಿ ಬ್ರಾಹ್ಮಣರ ವಿರುದ್ಧ ಚರಿತ್ರೆಯ ಕಡೆಗೆ ತಿರುಗಿಸಲಾಯಿತು. ಶಿಕ್ಷಣ ಪಡೆದ, ಅದರಲ್ಲೂ ಸಾಹಿತಿ/ಚಿಂತಕರಾಗಿದ್ದ, ಅನೇಕ ದಲಿತರು ತಮ್ಮ ಕೇರಿಗಳ ನಿತ್ಯ ವಾಸ್ತವವನ್ನು ಮರೆತು ಬ್ರಾಹ್ಮಣ ವಿರೋಧದ ಗ್ರಾಂಥಿಕ ಹೇಳಿಕೆಗಳನ್ನು ಕಂಠಪಾಠ ಮಾಡಿಕೊಂಡರು. ಇದು ದಲಿತ ಮುಖಂಡರ ಮತ್ತು ದಲಿತ ಸಾಹಿತಿ ಚಿಂತಕರ ಬಾಯಿಯಿಂದ ಉದುರುವುದನ್ನು ನೋಡಲು ವ್ಯವಸ್ಥೆಯ ಪರ ಚಿಂತಕರು ಖುಷಿಯಿಂದ ಕಾಯುತ್ತ ಕುಳಿತರು. ಹಾಗಾಗಿಯೇ ಅನೇಕ ದಲಿತರಿಗೆ 'ಮನುಧರ್ಮಶಾಸ್ತ್ರ'ದ ಬಗ್ಗೆ ಇರುವ ಅಸಹನೆ ಮತ್ತು ಆಕ್ರೋಶ ಭೂಮಾಲಿಕ ವ್ಯವಸ್ಥೆಯ ಮೇಲೆ ಇಲ್ಲ. ಉದಾರವಾದಿ ಮಾನವತಾವಾದದ ಮುಗ್ಧತೆಯಲ್ಲಿ ದಲಿತ ಚಿಂತಕ/ನಾಯಕರು ವರ್ತಮಾನಕ್ಕೆ ಬೆನ್ನುಹಾಕಿ, ಚರಿತ್ರೆಯ ಪುರೋಹಿತಶಾಹಿ ವಿರೋಧದ ವಿಷವನ್ನು ಅಮೃತದಂತೆ ಉಂಡರು. ದಲಿತರ ವಿಚಾರ ಮತ್ತು ವಿಮರ್ಶಾ ಸಾಹಿತ್ಯದಲ್ಲಿ ದಲಿತರ ಕೇರಿಗಳಲ್ಲಿ ಇಲ್ಲದ ಅಮೂರ್ತ/ಗ್ರಾಂಥಿಕ ಹಾಗೂ ಕಲ್ಪಿತ ಬ್ರಾಹ್ಮಣ ವಿರೋಧ ಮಡುಗಟ್ಟಿರುವುದನ್ನು ಗಮನಿಸಬಹುದು.

ದಲಿತ ಹೋರಾಟ ಶುರುವಾಗಿ ೧೦-೧೨ ವರುಷ ಕಳೆದರೂ ಅದರ ಚಿಂತನೆಗಳು ಇನ್ನೂ ಸಿದ್ಧಾಂತವಾಗಿ ರೂಪುಗೊಳ್ಳಲೇ ಇಲ್ಲ. ದಲಿತ ಹೋರಾಟ ತನಗೆ ಶತ್ರು ಯಾರು, ಮಿತ್ರ ಯಾರು, ಎಂಬ ಹೋರಾಟ ಮತ್ತು ಚಳುವಳಿಗೆ ಸಂಬಂಧಿಸಿದ ಪ್ರಾಥಮಿಕ ಪ್ರಶ್ನೆಯನ್ನು ತಾತ್ವಿಕವಾಗಿ ಕೇಳಿಕೊಳ್ಳಲಿಲ್ಲ. ಇದರ ಲಾಭ ಪಡೆದು, ದಲಿತ ಹೋರಾಟದ ಆಲೋಚನೆಗಳನ್ನು ಅದರಿಂದ ಬೇರ್ಪಡಿಸಿ ಅದರ ಜಾಗಕ್ಕೆ ಶೋಷಕರ ಆಲೋಚನೆಗಳನ್ನು ಸೇರಿಸಲಾಯಿತು. ಸಂಘಟನೆ ಹಾಗೂ ಹೋರಾಟದ ಬಗ್ಗೆ ದಲಿತ ಕಾರ್ಯಕರ್ತರಲ್ಲಿದ್ದ ನಂಬಿಕೆ ಮತ್ತು ಬದ್ಧತೆಗಳನ್ನು ಭಗ್ನಗೊಳಿಸಲಾಯಿತು. ದಲಿತ ನಾಯಕರಲ್ಲಿದ್ದ ವ್ಯವಸ್ಥೆಯ ವಿರೋಧಿ ಛಲಗಳನ್ನು, ಆಲೋಚನೆಗಳನ್ನು, ರಾಜಿರಹಿತ ಹೋರಾಟದ ಕೆಚ್ಚುಗಳನ್ನು ಭಗ್ನಗೊಳಿಸಿ ವ್ಯವಸ್ಥೆಯ ಶೋಷಣೆಗೆ ಪೂರಕವಾಗಿ ಮಾರ್ಪಡಿಸಲಾಯಿತು. ಫಲವಾಗಿ ದಲಿತರ ವರ್ತಮಾನದ ನಿಜ ಶತ್ರು (ಊಳಿಗಮಾನ್ಯಶಾಹಿ)ವನ್ನು ಮುಚ್ಚಿಟ್ಟು, ಹುಸಿ ಶತ್ರು (ಪುರೋಹಿತಶಾಹಿ)ವನ್ನು ಚರಿತ್ರೆಯಲ್ಲಿ/ಗ್ರಂಥಗಳಲ್ಲಿ ತೋರಿಸಲಾಯಿತು. ೭೦-೮೦ರ ದಶಕದ ಕನ್ನಡ ವಿಚಾರ ವಿಮರ್ಶೆ ಬರವಣಿಗೆಯನ್ನು ಪರಿಶೀಲಿಸಿದರೆ 'ಪುರೋಹಿತಶಾಹಿ' ಎಂಬ ಹಾವಿನ ಪೊರೆಯ ವಿರುದ್ಧ ವ್ಯರ್ಥ ಸಮರ ಸಾರಿರುವುದು ಕಾಣುತ್ತದೆ. ಕನ್ನಡದಲ್ಲಿ ಅನೇಕರ ಸಂಸ್ಕೃತಿ ಚಿಂತನೆ, ಸಂಸ್ಕೃತಿ ಅಧ್ಯಯನ ಎಂಬುವು ಅನಂತರ ಅದನ್ನು ಮುಂದುವರಿಸಲು ಪಣತೊಟ್ಟಂತೆ ಕಾಣುತ್ತಿವೆ. ಈ ವೈಚಾರಿಕ ಮಾದರಿ ಸಂಘಟಿತ ದಲಿತ ನಾಯಕರನ್ನು ಯಶಸ್ವಿಯಾಗಿ ದಾರಿ ತಪ್ಪಿಸಿತು.

ಡಿಎಸ್‌ಎಸ್‌ನ ತಾತ್ವಿಕ ದೌರ್ಬಲ್ಯ ಮತ್ತು ಶೋಷಕ ವರ್ಗದಲ್ಲಾದ ದಲಿತ ವಿರೋಧಿ ಒಳಸಂಚಿನ ಕ್ರೌರ್ಯಗಳ ಫಲಿತಗಳ ಪರಿಣಾಮವಾಗಿ ೧೯೮೪ರಲ್ಲಿ ದಲಿತ ಸಂಘರ್ಷ ಸಮಿತಿ ಚಾರಿತ್ರಿಕವಾಗಿ ಎರಡು ಬಣಗಳಾಗಿ ಹೋಯಿತು. ಸಾಹಿತಿಗಳ ಮತ್ತು ನೌಕರರ ಹಿನ್ನೆಲೆಯಿದ್ದ ಅದರ ಒಂದು ಬಣ (ಸಂಚಾಲಕ ಸಮಿತಿ) ಸಂಸದೀಯ ಚುನಾವಣೆಗೆ ಧುಮುಕುವುದರ ಮೂಲಕ ಸಂಸದೀಯ ಮಾರ್ಗದಲ್ಲಿ ದಲಿತರ ಶೋಷಣೆಯನ್ನು ನಿವಾರಿಸುವ ದಾರಿಯನ್ನು ಹಿಡಿಯಿತು. ಮುಂದೆ ಅದಕ್ಕೆ ದಲಿತರ ಶೋಷಣೆ ಮಸುಕು ಮಸುಕಾಗಿ ಕಾಣತೊಡಗಿತು. ಹಾಗಾಗಿ ಛಿದ್ರಗೊಂಡ ಡಿಎಸ್‌ಎಸ್‌ನ ಗುಂಪುಗಳು ಆಳುವ ವರ್ಗದ ರಾಜಕೀಯ ಪಕ್ಷಗಳಾಗಿ, ಇಲ್ಲವೆ ಆಳುವ ವರ್ಗದ ರಾಜಕೀಯ ಪಕ್ಷಗಳಿಗೆ ಅಧೀನವಾಗಿಹೋದವು. ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಿ, ಸಿಗಬಹುದಾಗಿದ್ದ ನೌಕರಿಗೆ ಹೋಗದೆ, ಅನ್ನ ನೀರು ನಿದ್ರೆ ಬಿಟ್ಟು ಡಿಎಸ್‌ಎಸ್‌ಅನ್ನು ಕಟ್ಟಿ ಬೆಳೆಸಿದ್ದ ನೂರಾರು ಕಾರ್ಯಕರ್ತರು ಭ್ರಮನಿರಸನಗೊಂಡು, ಹೆಗಡೆ ಕಾಲದ ಗ್ರಾಮ ಪಂಚಾಯಿತಿ ಚುನಾವಣೆಯಲ್ಲಿ ಯಾವ ಪಕ್ಷವೆಂದರೆ ಅಲ್ಲಿ ಧುಮುಕುವುದರ ಮೂಲಕ ದಲಿತರ ಅಖಂಡ ಹೋರಾಟಕ್ಕೆ ಸಂಪೂರ್ಣ ಬೆನ್ನು ಮಾಡಿದರು. ದಲಿತ ಹೋರಾಟಕ್ಕೆ ಅದುವರೆಗಿದ್ದ ಸಾಮೂಹಿಕ ಸಂಘಟಿತ ಭೌತಿಕ ಶಕ್ತಿ ಈ ಮೂಲಕ ವಿಕೇಂದ್ರೀಕರಣಗೊಂಡು ವಿಸರ್ಜನೆಯಾಗಿ ಹೋಯಿತು. ಊಳಿಗಮಾನ್ಯಶಾಹಿ ಶೋಷಕ ಶಕ್ತಿಯು ಕುರುಡು ಕಾಂಚಾಣದ ಆಧುನಿಕ ವೇಷದಲ್ಲಿ ಖುಷಿಯಿಂದ ಕುಣಿಯಿತು. ಕಾಲಿಗೆ ಬಿದ್ದವರನ್ನು ಮಾತ್ರವಲ್ಲ; ತನ್ನ ಕಾಲಿಗೆ ಎಳೆದೆಳೆದು ಬೀಳಿಸಿಕೊಂಡು ತುಳಿಯುತ್ತಲೇ ಸಾಗಿತು.

ಮತ್ತೊಂದು ಕಡೆ, ಅಷ್ಟಾಗಿ ಸಾಹಿತಿಗಳ ಮತ್ತು ನೌಕರರ ಹಿನ್ನೆಲೆಯಿರದ ಡಿಎಸ್‌ಎಸ್‌ನ ಮತ್ತೊಂದು ಬಣ (ಸಂಯೋಜಕ ಸಮಿತಿ) ಸಂಸದೀಯ ಚುನಾವಣೆಗಳನ್ನು ಬಹಿಷ್ಕರಿಸಿ, ಭೂಹೋರಾಟದ ಮೂಲಕ, ದಲಿತರಿಗೆ ಭೂಮಿ ಮತ್ತು ಅಧಿಕಾರ ದೊರಕಿದರೆ ಮಾತ್ರ ಅವರ ವಿಮೋಚನೆ ಸಾಧ್ಯ ಎಂಬ ತಿಳುವಳಿಕೆಯ ಕಡೆಗೆ ಚಲಿಸಿತು. ಖಾಸಗಿ ಆಸ್ತಿಯನ್ನು ಉಳಿಸಿಕೊಂಡು ಅಧಿಕಾರ ವಿಕೇಂದ್ರೀಕರಣ ಮಾಡುವುದು ಕೇವಲ ನಾಟಕ; ಅಧಿಕಾರ ವಿಕೇಂದ್ರೀಕರಣವು ಮೂಲಭೂತವಾಗಿ ಸಂಪತ್ತು ಮತ್ತು ಆಸ್ತಿಯ ವಿಕೇಂದ್ರೀಕರಣವನ್ನು ಬಯಸುತ್ತದೆ ಎಂದು ಈ ಗುಂಪಿನವರು ಪ್ರತಿಪಾದಿಸಿದರು. ಮುಂದೆ ಇದರಲ್ಲೂ ಎರಡು ಮೂರು ಬಣಗಳಾಗಿಹೋದವು. ಹೋರಾಟಗಳು ಹಾಗೆಯೇ ಸಾಗುತ್ತಿವೆ.

**ದಲಿತ ಹೋರಾಟದ ವ್ಯಾಪ್ತಿಗಳು ಮತ್ತು ಮಿತಿಗಳು**

ವಿವಿಧ ದಲಿತ ಹೋರಾಟಗಳು ದಲಿತರ ವರ್ತಮಾನದ ಸಂಕೀರ್ಣ ಪರಿಸ್ಥಿತಿ ಮತ್ತು

ಸಾಹಿತ್ಯವು ಚಳುವಳಿಯನ್ನು ಸೃಷ್ಟಿಸಲು ಸಾಧ್ಯವೇ ? ಸೃಷ್ಟಿಸಿದೆಯೇ ? ಹಾಗೆ ಸೃಷ್ಟಿಸುವುದಾದರೆ ಅದು ತುದ್ದಾಂಗವಾಗಿ ಸಾಹಿತ್ಯ ಚಳುವಳಿ ಆಗಿರುತ್ತದೋ ಅಥವಾ ರಾಜಕೀಯ ಸಾಮಾಜಿಕ ಚಳುವಳಿ ಆಗಿರುತ್ತದೋ ? ಈ ಪ್ರಶ್ನೆಗಳನ್ನು ಗಂಭೀರವಾಗಿ ಆಲೋಚಿಸಬೇಕಾಗಿದೆ. ಸಾಹಿತ್ಯವು, ಇರುವ ಸ್ಥಿತಿಯನ್ನು ಅಥವಾ ವ್ಯವಸ್ಥೆಯನ್ನು ಬದಲಾಯಿಸುವ ತಾತ್ವಿಕ ಆಶಯವುಳ್ಳದ್ದಾಗಿದ್ದರೆ, ಚಳುವಳಿಯ ತಾತ್ವಿಕ ಆಶಯ ಕೂಡ ಅದೇ ಆಗಿರುತ್ತದೆ. ಈ ದೃಷ್ಟಿಯಲ್ಲಿ ನೋಡಿದಾಗ ಸಾಹಿತ್ಯವೂ ಕೂಡ ಚಳುವಳಿಯನ್ನು ಸೃಷ್ಟಿಸಬಲ್ಲದು. ಇಲ್ಲವೆ ಚಳುವಳಿಯ ಮೇಲೆ ತೀವ್ರವಾದ ಪ್ರಭಾವ ಬೀರಬಲ್ಲದು. ಸಾಹಿತ್ಯವು ತನ್ನೊಳಗೇ ಒಂದು ಚಳುವಳಿಯನ್ನು ಹುಟ್ಟುಹಾಕಿಕೊಳ್ಳುತ್ತಾ ಆ ಮೂಲಕ ಅದು ಸಾಮಾಜಿಕ, ರಾಜಕೀಯ ಚಳುವಳಿಗಳ ಮೇಲೂ ಪ್ರಭಾವ ಬೀರಬಹುದು.

ರಾಜಕೀಯ ಪರ್ಯಾಯವನ್ನು ಕುರಿತು ಗಂಭೀರವಾಗಿ ಆಲೋಚಿಸುತ್ತಿಲ್ಲ. ಅವು ಭೂ ಪ್ರಶ್ನೆಯನ್ನು ಮತ್ತು ಭೂ ಹೋರಾಟವನ್ನು ಕೈಬಿಟ್ಟು ಎಷ್ಟೋ ವರುಷಗಳಾಗಿ ಹೋದವು. ರಾಜಕೀಯ ಅಧಿಕಾರವನ್ನು ಹಿಡಿಯುವುದೆಂದರೆ ಈಗಿರುವ ಶೋಷಣೆಯ ವ್ಯವಸ್ಥೆಯಲ್ಲಿ ಪಾಲು ಕೇಳುವುದು ಇಲ್ಲವೆ ಪಾಲು ಪಡೆಯುವುದು ಎಂಬ ಯಾಂತ್ರಿಕ ಲೆಕ್ಕಾಚಾರದಲ್ಲಿ ಅವು ಮುಳುಗಿವೆ. ದಲಿತರು ಅಧಿಕಾರ ಹಿಡಿಯುವುದೆಂದರೆ ಎಂಎಲ್‌ಸಿ, ಎಂಎಲ್‌ಎ, ಎಂಪಿ, ಮಂತ್ರಿ ಆಗುವುದು ಎಂದೇ ಭ್ರಮಿಸಲಾಗಿದೆ.

ಜಾಗತೀಕರಣ, ಖಾಸಗೀಕರಣಗಳನ್ನು ಕುರಿತ ಅವುಗಳ ತಿಳುವಳಿಕೆ ಮತ್ತು ಕಾರ್ಯಕ್ರಮ ಅತ್ಯಂತ ಮಿತವಾದುದಾಗಿದೆ ಅಥವಾ ತಿರುಗುಮುರುಗಾಗಿದೆ. ಆಳುವ ವರ್ಗದ ಜನವಿರೋಧಿ ತಂತ್ರಗಳನ್ನು, ಶೋಷಣೆಯ ಮೂಲವನ್ನು, ತಿಳಿಯಲಾರದ ಅವುಗಳ ತಾತ್ವಿಕ ಕೊರತೆಗಳಿಂದಾಗಿ ಕೇವಲ ಸರಕಾರದ ಕೆಲವು ಇಲಾಖೆಗಳ ಸವಲತ್ತುಗಳನ್ನು ದಲಿತರಿಗೆ ಕೊಡಿಸುವ ಮಧ್ಯವರ್ತಿಗಳಾಗಿ ಅವು ಕುಗ್ಗಿಹೋಗಿವೆ.

ದಲಿತ ಹೋರಾಟಗಳಿಗೆ ಇಂದು ಯಾವ ಸ್ತರದ ದಲಿತರ ಹಿತಾಸಕ್ತಿ ಮುಖ್ಯವಾಗಿದೆ ಎಂಬುದನ್ನು ಗಂಭೀರವಾಗಿ ಆಲೋಚಿಸಬೇಕಿದೆ. ನೌಕರರು, ಸಾಹಿತಿಗಳು, ಮಧ್ಯಮ ವರ್ಗದ ದಲಿತರು ಮುಂತಾದವರ ಹಿತಾಸಕ್ತಿಗಳು ಡಿಎಸ್‌ಎಸ್‌ನಲ್ಲಿ ಪ್ರಧಾನವಾಗಿದ್ದು, ಹಳ್ಳಿಗಳಲ್ಲಿ ಕೃಷಿಕೂಲಿ ಕಾರ್ಮಿಕರಾದ ದಲಿತರ ಹಿತಾಸಕ್ತಿಗಳು ಮೂಲೆಗುಂಪಾಗಿವೆ. ಹಾಗಾಗಿ ಮಧ್ಯಮ ವರ್ಗದ ದಲಿತರ ಆಶೋತ್ತರಗಳಿಗೆ ತುಡಿಯುವುದು ಮತ್ತು ದುಡಿಯುವುದು ಅವುಗಳ ಕೇಂದ್ರ ಕಾಳಜಿಯಾಗಿದೆ. 'ದಲಿತ ಮಕ್ಕಳಿಗೆ ಕಡ್ಡಾಯವಾಗಿ ಇಂಗ್ಲಿಷ್ ಕಲಿಸಿ' ಎಂದು ಹೋರಾಡುತ್ತಿರುವವರಿಗೆ, ಕಳೆದ ೩ ವರುಷಗಳ ಅವಧಿಯ ಬರಗಾಲದಲ್ಲಿ ಕೊನೆಪಕ್ಷ ಕೂಲಿಯೂ ಸಿಗದೆ ಗುಳೇಹೋದ ಸಾವಿರಾರು ದಲಿತರ ದುರಂತ ಸ್ಥಿತಿ ಕಾಣದೆ ಹೋಯಿತು. ಈ ಬಗೆಯ ರಚನಾತ್ಮಕ ವಿಮರ್ಶೆಯನ್ನು ಪರಿಗಣಿಸುವ ಮತ್ತು ಸ್ವೀಕರಿಸುವ ತಾಳ್ಮೆ ಕೂಡ ಕೆಲವು ದಲಿತ ಹೋರಾಟಗಳಲ್ಲಿ ಇತ್ತೀಚೆಗೆ ಇಲ್ಲವಾಗುತ್ತಿದೆ.

ದಲಿತ ಹೋರಾಟದಲ್ಲಿ ಅಂಬೇಡ್ಕರ್ ಚಿಂತನೆಗಳ ಹೆಸರಿನಲ್ಲಿ ಗಾಂಧಿ, ಲೋಹಿಯಾ ಅವರ ಆಲೋಚನೆಗಳೂ ತೂರಿಕೊಂಡುಬಂದವು. ದಲಿತ ಚಿಂತನೆ ದಲಿತರನ್ನು ಶ್ರಮಮೌಲ್ಯ ಶೋಷಣೆಯ ಮೂಲದಿಂದ ಗುರುತಿಸಬೇಕಾಗಿದ್ದ ಚಾರಿತ್ರಿಕ ಅವಕಾಶವನ್ನು ತಾತ್ವಿಕವಾಗಿ ಕಳೆದುಕೊಂಡಿತು. ದಲಿತರ ಮೇಲಿನ ಶೋಷಣೆಯನ್ನು ವಿರೋಧಿಸ ಹೊರಟ ದಲಿತ ನಾಯಕರು ದಲಿತೇತರರ ವೈಚಾರಿಕ ಶೋಷಣೆಗೆ ನೇರವಾಗಿ ಬಲಿಯಾಗಿಹೋದರು. ಫಲವಾಗಿ ದಲಿತ ನಾಯಕರಿಗೆ ಇಂಡಿಯಾದ 'ಬ್ರಾಹ್ಮಣ-ಶೂದ್ರ' ವಿನ್ಯಾಸವನ್ನು ಕಂಠಪಾಠ ಮಾಡಿಸಲಾಯಿತು. ಪರಿಣಾಮವಾಗಿ ದಲಿತರು ಮಾತೆತ್ತಿದರೆ ಬ್ರಾಹ್ಮಣಶಾಹಿಗಳು ! ಪುರೋಹಿತಶಾಹಿಗಳು ! ಎಂದು ಅರಚತೊಡಗಿದರು. ಬ್ರಾಹ್ಮಣ ವಿರೋಧವು ವಾಸ್ತವವಾಗಿ ಬ್ರಾಹ್ಮಣೇತರ ಮತ್ತು ದಲಿತೇತರ ಶೋಷಕ ಜಮೀನ್ದಾರಿ ವರ್ಗದ ಆಲೋಚನೆ, ಶೂದ್ರ ಜಮೀನ್ದಾರಿ ವರ್ಗದ ಆಲೋಚನೆ. ಅದು ದಲಿತರಿಗೆ 'ದಲಿತರೆ ನಿಮ್ಮ ಶತ್ರುಗಳು ನಾವಲ್ಲ; ನಿಮ್ಮ ಶತ್ರುಗಳು ಬ್ರಾಹ್ಮಣರು' ಎಂದು ಹೇಳಿಹೇಳಿ ಕಂಠಪಾಠ ಮಾಡಿಸಿತು. ದಲಿತ ನಾಯಕರು ವಾಸ್ತವವನ್ನು ಮರೆತು ಅದನ್ನು ಗಟ್ಟಿಯಾಗಿ ಕಂಠಪಾಠ ಮಾಡಿಕೊಂಡರು. ಆದರೆ ಬೆಲ್ಚಿ, ಪಿಪ್ರ, ಬೆಂಡಿಗೇರಿ, ಚುಂಡೂರು, ತುತ್ತೂರು, ಬದನವಾಳು, ಸಂಗನಕಲ್ಲು, ಅಫಜಲ್‌ಪುರ ಇತ್ಯಾದಿ ನೂರಾರು ವಿಕೃತ ಕೃತ್ಯಗಳನ್ನು ನಡೆಸಿದವರು ಯಾರು ? ಮತ್ತು ಯಾವ ಸಂಬಂಧದಿಂದ ? ದಲಿತರು ಇಂದಿಗೂ ಹಳ್ಳಿಗಳಲ್ಲಿ ಕೃಷಿಕೂಲಿಗಳಾಗಿ ದುಡಿದು ಶ್ರಮಮೌಲ್ಯವನ್ನು ಮಾರುತ್ತಿರುವುದು ಊಳಿಗಮಾನ್ಯಶಾಹಿ ಜಮೀನ್ದಾರರಿಗೆ. ಇದರರ್ಥ ದಲಿತ ಹೋರಾಟಗಳು ಭೂಮಾಲಿಕ ಶೋಷಣೆಯನ್ನು, ಊಳಿಗಮಾನ್ಯ ಶೋಷಣೆಯನ್ನು ಕುರಿತು ಆಲೋಚನೆ ಮಾಡದಂತಹ ಪರಿಸ್ಥಿತಿಯನ್ನು ದಲಿತೇತರ ಚಿಂತಕರು ಸೃಷ್ಟಿಸಿದರು. ದಲಿತ ಚಿಂತಕರು ಮತ್ತು ನಾಯಕರು ಅದನ್ನು ಅನುಸರಿಸಿದರು. ಪರಿಣಾಮವಾಗಿ ದಲಿತ ಹೋರಾಟ ದಲಿತರನ್ನು ವಸ್ತುನಿಷ್ಠವಾಗಿ ನಿರ್ವಚಿಸಿಕೊಳ್ಳದಂಥ ಕುರುಡು ಸ್ಥಿತಿಗೆ ಒಳಗಾಯಿತು.

ಹಸಿವು ಮತ್ತು ಅಪಮಾನ ಹಾಗೂ ಅಸಹಾಯಕತೆ ಮತ್ತು ಪ್ರತಿರೋಧ ದಲಿತರ ದೈನಂದಿನ ವಸ್ತುಸ್ಥಿತಿ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಹಸಿವು ಮತ್ತು ಅಪಮಾನ ಹಾಗೂ ಅಸಹಾಯಕತೆ ಮತ್ತು ಪ್ರತಿರೋಧಗಳ ಚಾರಿತ್ರಿಕ ಹಾಗೂ ಸಾಮಾಜಿಕ ಚಲನಶೀಲ ವಸ್ತುಸ್ಥಿತಿಯ ಭೌತಿಕ ರೂಪವೇ ದಲಿತರು. ಆದರೆ ದಲಿತ ಹೋರಾಟ ದಲಿತರ ಹಸಿವಿನ ಪ್ರಶ್ನೆ ಮತ್ತು ಅವಮಾನದ ಪ್ರಶ್ನೆ ಎರಡನ್ನೂ ಸಮಪ್ರಮಾಣದಲ್ಲಿ ಕೈಗೆತ್ತಿಕೊಳ್ಳಲಿಲ್ಲ. ಹಸಿವಿನ ಪ್ರಶ್ನೆಯನ್ನು ಕೈಗೆತ್ತಿಕೊಂಡ ತಕ್ಷಣ ಭೂಮಾಲಿಕ ವ್ಯವಸ್ಥೆ ಎದುರು ಬರುತ್ತದೆ. ಅವಮಾನದ ಪ್ರಶ್ನೆಯನ್ನು ಎತ್ತಿಕೊಂಡಾಗಲೂ ವರ್ತಮಾನದಲ್ಲಿ ದಲಿತರನ್ನು ಕೇರಿಕೇರಿಗಳಲ್ಲಿ ಜಾತಿ ಅವಮಾನ ಮಾಡುತ್ತಿರುವುದು, ಬಹಿಷ್ಕಾರ ಹಾಕುತ್ತಿರುವುದು ಈ ಭೂಮಾಲಿಕ ವರ್ಗವೇ. ಆದರೆ ದಲಿತರು ಅವಮಾನದ ಪ್ರಶ್ನೆಯನ್ನು ಪ್ರಸ್ತಾಪ ಮಾಡಿದಾಗಲೆಲ್ಲ ಭೂಮಾಲಿಕರ ಪರ ಚಿಂತನೆಗಳು ದಲಿತರಿಗೆ ಗತ ಇತಿಹಾಸದ ಪುರೋಹಿತಶಾಹಿಯನ್ನು ತೋರಿಸಿದವು. ತಕ್ಷಣ ದಲಿತರು ವರ್ತಮಾನದ ಭೂಮಾಲಿಕರನ್ನು ಬಿಟ್ಟು ಚರಿತ್ರೆಯ ಮನುಧರ್ಮಶಾಸ್ತ್ರದಂತಹ ಗ್ರಂಥಗಳ ವಿರುದ್ಧ ತಿರುಗಿ ನಿಂತರು. ಪರಿಣಾಮವಾಗಿ ಕ್ರಮೇಣ ದಲಿತ ಹೋರಾಟದಲ್ಲಿ ಹಸಿವಿನ ಪ್ರಶ್ನೆಯನ್ನು ಬದಿಗೆ ಸರಿಸಿ, ಕೇವಲ ಅಪಮಾನದ ಸಮಸ್ಯೆಯನ್ನು ಮುಂಚೂಣಿಗೆ ತರಲಾಯಿತು. ಒಂದು ವೇಳೆ ದಲಿತ ಹೋರಾಟಕ್ಕೆ ದಲಿತರ ಹಸಿವಿನ ಸಮಸ್ಯೆ ಮುಖ್ಯವಾಗಿದ್ದಿದ್ದರೆ ಅದು ಮೊದಲಿಗೆ ಭೂಮಾಲಿಕರ ವಿರುದ್ಧ, ಸಾಮ್ರಾಜ್ಯಶಾಹಿಯ ಜಾಗತೀಕರಣ, ಖಾಸಗೀಕರಣಗಳ ವಿರುದ್ಧ ಸೆಟೆದು ನಿಲ್ಲುತ್ತಿತ್ತು; ಖಾಸಗೀಕರಣದಿಂದ ಕೃಷಿವಲಯದಲ್ಲಿ ಉದ್ಭವಿಸಿರುವ ಬಿಕ್ಕಟ್ಟು ಕೃಷಿಕೂಲಿ ಕಾರ್ಮಿಕ ವರ್ಗದಲ್ಲಿ ಅಂದರೆ ದಲಿತ ಸಮೂಹದಲ್ಲಿ ನಿರುದ್ಯೋಗವನ್ನು ಹೆಚ್ಚಿಸಿದೆ. ಕೆಲಸದ ದಿನಗಳು ಕಡಿಮೆಯಾಗಿವೆ. ಕೂಲಿಯ ದರ ಕಡಿಮೆಯಾಗಿದೆ. ವಿಚಿತ್ರವೆಂದರೆ ಈ ಯಾವುದರ ಬಗ್ಗೆಯೂ ಯಾವುದೇ ದಲಿತ ಹೋರಾಟದ ಬಣ ರಚನಾತ್ಮಕ ಕಾರ್ಯಕ್ರಮವನ್ನು ರೂಪಿಸಿಲ್ಲ. ಬದಲಾಗಿ ಖಾಸಗೀಕರಣದಲ್ಲೂ ಮೀಸಲಾತಿ ಕೇಳುವ ಅಪಾಯಕಾರಿ ಪರಿಸ್ಥಿತಿ ನಿರ್ಮಾಣವಾಗಿದೆ.

ಸಾಹಿತ್ಯಕ್ಕೂ ದಲಿತ ಚಳುವಳಿಗೂ ಸಂಬಂಧವಿದೆಯೇ ? ಇದ್ದರೆ ಯಾವ ಆಯಾಮದಲ್ಲಿ ಇದೆ ? ಅದರ ಸ್ವರೂಪ ಏನು ? ಎಂಬುದನ್ನು ಕುರಿತು ಆಲೋಚನೆ ಮಾಡಬಹುದು.

ಯಾವುದೇ ಸಾಮಾಜಿಕ, ರಾಜಕೀಯ ಚಳುವಳಿಗೆ ಸಾಹಿತ್ಯದ ಸ್ಫೂರ್ತಿ, ಪ್ರೇರಣೆ, ಮಾರ್ಗದರ್ಶನಗಳು ಇರುತ್ತವೆ. ಹಾಗೆಯೇ ಚಳುವಳಿಯೊಂದು ತನ್ನ ಒಡಲಿನಲ್ಲೇ ತನಗೆ ಬೇಕಾದ ಸಾಹಿತ್ಯವನ್ನು ಸೃಷ್ಟಿಮಾಡಿಕೊಳ್ಳುತ್ತದೆ. ಸಾಹಿತ್ಯದಿಂದ ತಾನು ಮತ್ತೆ ಸ್ಫೂರ್ತಿ ಮತ್ತು ಪ್ರೇರಣೆಯನ್ನು ಪಡೆಯುತ್ತದೆ. ಇದನ್ನು ಸೂತ್ರೀಕರಿಸಿ ಹೇಳುವುದಾದರೆ, ಸಾಹಿತ್ಯ ಮತ್ತು ಚಳುವಳಿಗಳು ಪರಸ್ಪರ ಒಂದನ್ನೊಂದು ಪ್ರಭಾವಿಸುತ್ತ, ಒಂದನ್ನೊಂದು ವಿಮರ್ಶಿಸುತ್ತಾ ಸಾಗುತ್ತವೆ. ಚಳುವಳಿಗೂ-ಸಾಹಿತ್ಯಕ್ಕೂ ಇರುವ ಸಂಬಂಧದ ಮುಖ್ಯ ನೆಲೆಗಳನ್ನು ನಾವು ಈ ಮುಂದಿನಂತೆ ಗ್ರಹಿಸಬಹುದು.

**ಚಳುವಳಿಯೇ ಸಾಹಿತ್ಯವನ್ನು ಸೃಷ್ಟಿಸುವುದು**

ದಲಿತ ಹೋರಾಟವು ತನ್ನ ವ್ಯಾಪ್ತಿಯ ಪ್ರಭಾವದಿಂದ ತನ್ನದೇ ಆದ (ಲಿಖಿತ ಮತ್ತು ಮೌಖಿಕ) ಸಾಹಿತ್ಯವನ್ನು ಸೃಷ್ಟಿಸಿದೆ. ದಲಿತ ಹೋರಾಟದ ಪ್ರಧಾನ ಕೊಡುಗೆ ಎಂದರೆ ಸುಮಾರು ಇನ್ನೂರಕ್ಕೂ ಹೆಚ್ಚು ಸಂಖ್ಯೆಯ ಹೋರಾಟದ ಹಾಡುಗಳನ್ನು ಸೃಷ್ಟಿಸಿರುವುದು. ಜೊತೆಗೆ ಡಿಎಸ್‌ಎಸ್‌ನ ಆರಂಭದ ದಿನಗಳಲ್ಲಿ ನಾಡಿನ ಕೇರಿಕೇರಿಗಳಿಗೆ ವಿವಿಧ ಹೋರಾಟಗಳ ಮೂಲಕ ಅವನ್ನು ಮುಟ್ಟಿಸಿರುವುದು. ಇದರಲ್ಲಿ ಕೆಲವು ಹಾಡುಗಳು ಆಂಧ್ರದಲ್ಲಿ ನಡೆದಿರುವ ವರ್ಗ ಹೋರಾಟದಿಂದ ಬಂದಿವೆ. ಉಳಿದಂತೆ

ಕರ್ನಾಟಕದ ದಲಿತ ಹೋರಾಟವೆ ಹೋರಾಟದ ಹಾಡುಗಳನ್ನು ಸೃಷ್ಟಿಸಿದೆ. ಹೋರಾಟದ ಹಾಡುಗಳ ತಾತ್ವಿಕ ನೆಲೆ ಪ್ರಧಾನವಾಗಿ ವರ್ಗ ವೈರುಧ್ಯವನ್ನು ಎತ್ತಿ ತೋರಿಸುವುದು ಮತ್ತು ವರ್ಗ ಹೋರಾಟವನ್ನು ಪ್ರತಿಪಾದನೆ ಮಾಡುವುದಾಗಿದೆ. ಹೋರಾಟದ ಹಾಡುಗಳು ದಲಿತರನ್ನು ವರ್ಗ ದೃಷ್ಟಿಕೋನದಲ್ಲಿ ಗ್ರಹಿಸಿವೆ ಮತ್ತು ವರ್ಗದೃಷ್ಟಿಕೋನದಲ್ಲೇ ದಲಿತರ ವಿಮೋಚನೆಯನ್ನು ಪ್ರತಿಪಾದಿಸಿವೆ. ಕೋಲಾರ ಜಿಲ್ಲೆಯ ಮಾಲೂರು ತಾಲೂಕಿನ ಟೇಕಲ್ಲು ಹೋಬಳಿಯ ಹುಣಸೇಕೋಟೆಯ ಬಡಕುಂಬಾರರ ಮಗಳು ಅನಸೂಯಮ್ಮನ ಮೇಲೆ ಅದೇ ಊರಿನ ಗೌಡರು ನಡೆಸಿದ ಅತ್ಯಾಚಾರವನ್ನು ಕುರಿತು 'ಕೋಟಿ ಕೋಟಿ ಬಾಧೆಗಳಲ್ಲಿ ಲಕ್ಷಾಂತರ ನೋವುಗಳಲ್ಲಿ... ನಿನಗಾದ ಅನ್ಯಾಯ ನಮ್ಮೆದೆಗೆ ಚೂರಿ ಇರಿತ ಗಾಯವ ಮರೆತು ಬದುಕಲಾರೆವು ನನ ತಂಗಿ ಅನುಸೂಯ' ಎಂಬುದಾಗಿ ಹಾಡು ಕಟ್ಟಿ ಹಾಡಿದ್ದು, ದಲಿತರಿಗಿಂತ ಸಾಮಾಜಿಕ ಶ್ರೇಣೀಕರಣದಲ್ಲಿ ಮೇಲಿರುವ ಬಡಕುಂಬಾರರ ಮೇಲಿನ ದೌರ್ಜನ್ಯವನ್ನು ವಿರೋಧಿಸಿದ್ದು ಡಿಎಸ್‌ಎಸ್ ಎಂಬುದು ಚಾರಿತ್ರಿಕವಾಗಿ ಬಹಳ ಮಹತ್ವದ ಸಂಗತಿ. ಈ ರೀತಿಯಲ್ಲಿ ಡಿಎಸ್‌ಎಸ್ ತನ್ನ ಇತಿಹಾಸದುದ್ದಕ್ಕೂ ಅಘೋಷಿತವಾಗಿ ವರ್ಗ ನೆಲೆಯಲ್ಲೂ ಹೋರಾಡುತ್ತ ಬಂದಿದೆ. ಡಿಎಸ್‌ಎಸ್‌ನ ೩೦ ವರುಷಗಳ ಚರಿತ್ರೆಯಲ್ಲಿ ಇಂತಹ ನೂರಾರು ಉದಾಹರಣೆಗಳು ಸಿಗುತ್ತವೆ. ಡಿಎಸ್‌ಎಸ್ ಅನ್ನು ಈ ಆಯಾಮದಲ್ಲಿ ಬೆಲೆ ಕಟ್ಟಬೇಕಾಗಿದೆ. ಅದರ ಜೊತೆಗೆ ಡಿಎಸ್‌ಎಸ್ ಇಲ್ಲಿಂದ ವರ್ತಮಾನಕ್ಕೆ ಬೇಕಾದ ಸರಿಯಾದ ಗುಣಪಾಠಗಳನ್ನು ಕಲಿಯಬೇಕಾಗಿದೆ. ಹೋರಾಟದ ಹಾಡುಗಳು ಮಾತ್ರವಲ್ಲದೆ ಡಿಎಸ್‌ಎಸ್‌ನ ಒಳಗಿದ್ದ ಅನೇಕರು ಆ ಹೋರಾಟದ ಕಾವಿನಿಂದ ಬೇರೆಬೇರೆ ಪ್ರಕಾರದ ಸಾಹಿತ್ಯ ಕೃಷಿ ಮಾಡಿದ್ದಾರೆ.

ದಲಿತ ಹೋರಾಟವು ದಲಿತ ಸಮುದಾಯದ ಕೆಲವು ಶಿಕ್ಷಿತರಿಗೆ ಸಾಹಿತ್ಯ ಸೃಷ್ಟಿಸುವ ಆತ್ಮವಿಶ್ವಾಸವನ್ನು ಮೂಡಿಸಿತು. ಪರಿಣಾಮವಾಗಿ ಹಲವಾರು ಕತೆ ಕಾದಂಬರಿಗಳು ರಚನೆಯಾದವು. ಇವುಗಳಲ್ಲಿ ಗ್ರಾಮೀಣ ಪರಿಸರದ ಊಳಿಗಮಾನ್ಯಶಾಹಿ ಶೋಷಣೆಯ ನಾನಾ ಮುಖಗಳನ್ನು ಚಿತ್ರಿಸಲಾಗಿದೆ. ಸಾಹಿತ್ಯದ ಈ ಪ್ರಕಾರ ಊಳಿಗಮಾನ್ಯಶಾಹಿ ಮತ್ತು ದಲಿತರ ನಡುವೆ ಇರುವ ಚಲನಶೀಲ ವೈರುಧ್ಯವನ್ನು ತುಂಬ ಪರಿಣಾಮಕಾರಿಯಾಗಿ ಅನಾವರಣ ಮಾಡಿದೆ. ದಲಿತ ಹೋರಾಟದ ಪ್ರಭಾವ ಮತ್ತು ಸಂಬಂಧ ಇಲ್ಲದೆ ಕೂಡ ಅನೇಕ ದಲಿತರು, ದಲಿತೇತರರೂ ಸಹ ಈ ಬಗೆಯ ಸಾಹಿತ್ಯವನ್ನು ಸೃಷ್ಟಿ ಮಾಡಿದ್ದಾರೆ. ಊಳಿಗಮಾನ್ಯಶಾಹಿ ಶೋಷಣೆಯ ಕರಾಳ ಮುಖಗಳ ಅನಾವರಣವೇ ದಲಿತರ ಕಥಾ ಸಾಹಿತ್ಯದ ವಸ್ತು, ಆಶಯ, ವಿಧಾನ ಎಲ್ಲವೂ ಆಗಿದೆ. ಈ ಸಾಹಿತ್ಯದಲ್ಲಿ ಪುರೋಹಿತಶಾಹಿ/ಬ್ರಾಹ್ಮಣಶಾಹಿ ಮತ್ತು ದಲಿತರ ನಡುವಿನ ಸಂಬಂಧಗಳ ಪ್ರಸ್ತಾಪ ಲವಲೇಶವೂ ಬರುವುದಿಲ್ಲ ('ಕುಸುಮಬಾಲೆ'ಯ ಮಧ್ವಾಚಾರಿ ಪ್ರಸಂಗವನ್ನು ಹೊರತುಪಡಿಸಿ). ದಲಿತ ಹೋರಾಟ ಈ ಸಾಹಿತ್ಯದಿಂದಲೂ ವರ್ತಮಾನವನ್ನು ಅರ್ಥ ಮಾಡಿಕೊಳ್ಳಬೇಕಾದ ಅಗತ್ಯವಿದೆ.

ದಲಿತ ಹೋರಾಟದ ಪ್ರಭಾವದ ಭಾಗವಾಗಿ ದಲಿತರಲ್ಲಿ ವೈಚಾರಿಕ ಮತ್ತು ವಿಮರ್ಶೆಯ ಸಾಹಿತ್ಯ ಸೃಷ್ಟಿಯಾಗಿದೆ. ಬಿ. ಕೃಷ್ಣಪ್ಪ ಅವರು ಕುವೆಂಪು ಅವರ ಸೃಜನಶೀಲತೆಯನ್ನು ಕುರಿತು ಬರೆದಿರುವ ಒಂದು ಲೇಖನ ಕನ್ನಡ ವಿಮರ್ಶೆಯಲ್ಲಿ ಬಹಳ ಮುಖ್ಯವಾದುದು. ಬಿ. ಕೃಷ್ಣಪ್ಪ ಅವರು ಕುವೆಂಪು ಅವರ ಗ್ರಹಿಕೆಯ ವ್ಯಾಪ್ತಿ, ವಿಧಾನ ಮತ್ತು ಮಿತಿಯನ್ನು ಬಹಳ ಚೆನ್ನಾಗಿ ಗುರುತಿಸಿದ್ದಾರೆ. 'ಕುವೆಂಪು ಅವರು ದಲಿತರನ್ನು ಹೊರಗಿನವರಾಗಿ, ಜಮೀನ್ದಾರಿ ವರ್ಗದವರಾಗಿ ನೋಡಿದ್ದಾರೆ' ಎಂದು ವಿಶ್ಲೇಷಿಸಿದ್ದಾರೆ. ಆ ಮೂಲಕ ಶ್ರಮಿಕ ದಲಿತರ ಮಾನಸಿಕ ಭಾವನಾತ್ಮಕ ಒಳತೋಟಿಯನ್ನು ಕುವೆಂಪು ಅವರಿಗೆ ಗುರುತಿಸಲು ಸಾಧ್ಯವಾಗಲಿಲ್ಲ ಎಂದು ವಿವರಿಸಿದ್ದಾರೆ. ದೇವಯ್ಯ ಹರವೆ ಅವರು ಕುವೆಂಪು ಅವರ 'ನೆನಪಿನ ದೋಣಿ'ಯ ಮೇಲೆ ಬರೆದಿರುವ ಲೇಖನದಲ್ಲೂ ಇದೇ ಗ್ರಹಿಕೆಯ ಮುಂದುವರಿಕೆ ಇದೆ. ಡಾ|| ಮ.ನ.ಜ. ಅವರು ಆಧುನಿಕ ಸಾಹಿತ್ಯವನ್ನು, ಡಾ|| ಅರವಿಂದ ಮಾಲಗತ್ತಿ ಅವರು ಹಳಗನ್ನಡ ಸಾಹಿತ್ಯವನ್ನು ಕುರಿತು ನಡೆಸಿರುವ ಅಧ್ಯಯನಗಳು ಈ ನಿಟ್ಟಿನಲ್ಲಿ ತುಂಬಾ ಗಮನಾರ್ಹವಾದವು.

**ಸಾಹಿತ್ಯವು ಚಳುವಳಿಯನ್ನು ಸೃಷ್ಟಿಸುವುದು**

ಸಾಹಿತ್ಯವು ಚಳುವಳಿಯನ್ನು ಸೃಷ್ಟಿಸಲು ಸಾಧ್ಯವೇ? ಸೃಷ್ಟಿಸಿದೆಯೇ? ಹಾಗೆ ಸೃಷ್ಟಿಸುವುದಾದರೆ ಅದು ಶುದ್ಧಾಂಗವಾಗಿ ಸಾಹಿತ್ಯ ಚಳುವಳಿ ಆಗಿರುತ್ತದೋ ಅಥವಾ ರಾಜಕೀಯ ಸಾಮಾಜಿಕ ಚಳುವಳಿ ಆಗಿರುತ್ತದೋ? ಈ ಪ್ರಶ್ನೆಗಳನ್ನು ಗಂಭೀರವಾಗಿ ಆಲೋಚಿಸಬೇಕಾಗಿದೆ. ಸಾಹಿತ್ಯವು, ಇರುವ ಸ್ಥಿತಿಯನ್ನು ಅಥವಾ ವ್ಯವಸ್ಥೆಯನ್ನು ಬದಲಾಯಿಸುವ ತಾತ್ವಿಕ ಆಶಯವುಳ್ಳದ್ದಾಗಿದ್ದರೆ, ಚಳುವಳಿಯ ತಾತ್ವಿಕ ಆಶಯ ಕೂಡ ಅದೇ ಆಗಿರುತ್ತದೆ. ಈ ದೃಷ್ಟಿಯಲ್ಲಿ ನೋಡಿದಾಗ ಸಾಹಿತ್ಯವೂ ಕೂಡ ಚಳುವಳಿಯನ್ನು ಸೃಷ್ಟಿಸಬಲ್ಲದು. ಇಲ್ಲವೆ ಚಳುವಳಿಯ ಮೇಲೆ ತೀವ್ರವಾದ ಪ್ರಭಾವ ಬೀರಬಲ್ಲದು. ಸಾಹಿತ್ಯವು ತನ್ನೊಳಗೇ ಒಂದು ಚಳುವಳಿಯನ್ನು ಹುಟ್ಟುಹಾಕಿಕೊಳ್ಳುತ್ತಾ ಆ ಮೂಲಕ ಅದು ಸಾಮಾಜಿಕ, ರಾಜಕೀಯ ಚಳುವಳಿಗಳ ಮೇಲೂ ಪ್ರಭಾವ ಬೀರಬಹುದು.




ಚಳುವಳಿಯು ನಡೆಯುತ್ತಿರುವಾಗ ಸಾಹಿತ್ಯವು ಚಳುವಳಿಯನ್ನು ಬೆಂಬಲಿಸಿ ಅದಕ್ಕೆ ವೇಗವರ್ಧಕವಾಗಿ ಕೆಲಸ ಮಾಡಬಹುದು. ವ್ಯವಸ್ಥೆಯನ್ನು ಬದಲಾಯಿಸಬೇಕು ಎಂಬ ಗುರಿಯುಳ್ಳ ಚಳುವಳಿಗಳು ಸಾಮಾನ್ಯವಾಗಿ ಸಾಹಿತ್ಯವನ್ನು ಪ್ರಧಾನ ಮಾಧ್ಯಮವನ್ನಾಗಿ ಹೊಂದಿರುತ್ತವೆ. ಯಾಕೆಂದರೆ, ಸಾಹಿತ್ಯಕ್ಕೆ ಸಾಮಾಜಿಕ ಅಭಿಪ್ರಾಯವನ್ನು ರೂಪಿಸುವ, ಸ್ವೀಕೃತ ಸಾಮಾಜಿಕ ಅಭಿಪ್ರಾಯದ ವಿರುದ್ಧ ಸೈದ್ಧಾಂತಿಕ ಸಮರ ಸಾರುವ ಶಕ್ತಿ ಇದೆ. ಈ ನಿಟ್ಟಿನಲ್ಲಿ ದಲಿತ ಹೋರಾಟ ನಡೆಯುತ್ತಿದ್ದಾಗ ಹೋರಾಟದ ಹಾಡುಗಳು ಪರಿಣಾಮಕಾರಿಯಾದ ಕೆಲಸ ಮಾಡಿವೆ. ಹೋರಾಟದ ಹಾಡುಗಳು ಅಕ್ಷರಸ್ಥರು-ಅನಕ್ಷರಸ್ಥರು ಎಂಬ ಭೇದವಿಲ್ಲದೆ ಎಲ್ಲರನ್ನೂ ತಲುಪಿವೆ. ಅವು ದಲಿತರಲ್ಲಿ ಒಂದು ಬಗೆಯ ಸಾಮಾಜಿಕ ಅರಿವನ್ನು, ಜಾಗೃತಿಯನ್ನು ಮೂಡಿಸಿವೆ. ದಲಿತ ಕಲಾ ಮಂಡಳಿ, ಸಮುದಾಯ ಮುಂತಾದುವು ಇದಕ್ಕೆ ಕೆಲವು ಉದಾಹರಣೆಗಳು.

೯೦ರ ದಶಕದ ನಂತರದ ಅನೇಕ ಚಳುವಳಿಗಳು ಜಾಗತೀಕರಣದ ವಿರುದ್ಧ ನಡೆದಿವೆ. ಹಾಗಾಗಿ ೯೦ರ ದಶಕದ ನಂತರ ಬಂದ ಬಹುತೇಕ ಸಾಹಿತ್ಯ ಜಾಗತೀಕರಣವನ್ನು ಒಂದಿಲ್ಲ ಒಂದು ಆಯಾಮದಿಂದ ವಿವರಿಸುವ ಇಲ್ಲವೆ ವಿರೋಧಿಸುವ ಮುಖ್ಯ ನೆಲೆಯನ್ನು ಹೊಂದಿದೆ. ಹಾಗೆಯೇ 'ಕೋಮುವಾದಿ ಫ್ಯಾಸಿಸಂ'ಅನ್ನು ವಿವಿಧ ಹುನ್ನಾರಗಳ ಮೂಲಕ ಸಾಮಾಜೀಕರಣಗೊಳಿಸಲಾಗುತ್ತಿರುವ ಸಮಯದಲ್ಲಿ ಅದನ್ನು ವಿರೋಧಿಸುವ ಚಳುವಳಿಗಳೂ ಕೂಡ ನಡೆದಿವೆ. ಇದಕ್ಕೆ ಪೂರಕವಾಗಿ 'ಕೋಮುವಾದಿ ಫ್ಯಾಸಿಸಂ'ಅನ್ನು ವಿರೋಧಿಸುವ ಸಾಹಿತ್ಯ ಕೂಡ ಬಂದಿದೆ.

ದಲಿತ ಹೋರಾಟವಿರಲಿ, ಇನ್ಯಾವುದೇ ಹೋರಾಟವಿರಲಿ ಅದರ ಗುರಿ ಮತ್ತು ವಿಧಾನಕ್ಕೆ ವಿರುದ್ಧವಾಗಿ ಕೂಡ ಸಾಹಿತ್ಯ ಕ್ರಿಯಾಶೀಲವಾಗಬಹುದು. ೯೦ರ ದಶಕದ ನಂತರ ಜಾಗತೀಕರಣ ವಿರೋಧಿ ಮತ್ತು ಕೋಮುವಾದಿ ವಿರೋಧಿ ಹೋರಾಟಗಳು ನಡೆದಿವೆ. ಇವೆರಡಕ್ಕೂ ತಾತ್ವಿಕವಾಗಿ ಪೂರಕವಾದ ಸಾಹಿತ್ಯ ಬಂದಿದೆ. ಆದರೆ ಮತ್ತೊಂದು ದಿಕ್ಕಿನಿಂದ ಜಾಗತೀಕರಣವನ್ನೂ, ಕೋಮುವಾದವನ್ನೂ ಬೆಂಬಲಿಸುವ ಮತ್ತು ಸಮರ್ಥಿಸುವ ಸಾಹಿತ್ಯವೂ ಬಂದಿದೆ. ದಲಿತ ಹೋರಾಟವು ವಾಸ್ತವವಾಗಿ ಜಾಗತೀಕರಣ ಮತ್ತು ಖಾಸಗೀಕರಣಗಳ ವಿರುದ್ಧ ಸಾಗಬೇಕಿತ್ತು. ಆದರೆ ಅದರ ಅಂತರರಾಷ್ಟ್ರೀಯ ದೃಷ್ಟಿಕೋನದ ಕೊರತೆ ಮತ್ತು ರಾಜಕೀಯ ಸದೃಢ ತಾತ್ವಿಕ ದೌರ್ಬಲ್ಯಗಳಿಂದಾಗಿ ಇದನ್ನು ಮಾಡಲಿಲ್ಲ. ಪರಿಣಾಮವಾಗಿ ಕೆಲವು ದಲಿತ ಬರಹಗಾರರಿಂದಲೇ ಜಾಗತೀಕರಣವನ್ನು ಸಮರ್ಥಿಸುವ ಬರವಣಿಗೆಗಳು ಬಂದಿವೆ.

ದಲಿತರ ವಸುಸ್ಥಿತಿ ಆರ್ಥಿಕ ಸಾಮಾಜಿಕ ವೈರುಧ್ಯಗಳಲ್ಲಿದೆ. ಆದರೆ ದಲಿತ ನಾಯಕರ ಸೈದ್ಧಾಂತಿಕ ದೌರ್ಬಲ್ಯವು ಬ್ರಾಹ್ಮಣ ವಿರೋಧಿ ದೃಷ್ಟಿಕೋನವನ್ನು ಹೋರಾಟದ ಚಿಂತನೆಗಳ ಒಳಗೆ ಪ್ರಶ್ನಾತೀತವಾಗಿ ಬಿಟ್ಟುಕೊಂಡಿದೆ. ಈ ಅವಕಾಶವನ್ನು ದುರುಪಯೋಗಪಡಿಸಿಕೊಂಡು ಊಳಿಗಮಾನ್ಯಶಾಹಿ ಪರ ಕೃತಕ ಬ್ರಾಹ್ಮಣ ವಿರೋಧಿ ಗತ ಗ್ರಾಂಥಿಕ ಹೇಳಿಕೆಗಳ ಸಾಹಿತ್ಯ ದಲಿತ ಹೋರಾಟದಲ್ಲಿ ಕೇಂದ್ರ ಸ್ಥಾನವನ್ನು ಪಡೆಯಿತು. ಡಿಎಸ್‌ಎಸ್ ಮುಂಚೂಣಿಯಲ್ಲಿ ಅನೇಕ ದಲಿತರು 'ಸರಳ

ವಿವಾಹ' ಮಾಡಿಕೊಂಡರು. ಇದು ಈಗಲೂ ಅಲ್ಲಲ್ಲಿ ನಡೆಯುತ್ತಿದೆ. ಅಂತಹ ಮದುವೆಗಳಲ್ಲಿ ಬ್ರಾಹ್ಮಣರು/ಪುರೋಹಿತರು ಹೇಳುವ ಮಂತ್ರಗಳನ್ನು ವಿಮರ್ಶಿಸಿ ಪುರೋಹಿತರನ್ನು ಹಿಗ್ಗಾಮುಗ್ಗಾ ವಾಚಾಮಗೋಚರ ಬೈಯ್ಯುವ ಕೆಲಸ ಅಬ್ಬರದಿಂದ ನಡೆಯುತ್ತಿದೆ. ಅದರ ಜೊತೆಯಲ್ಲಿ ದಲಿತರ ಮದುವೆಗೆ ಸಾಲ ಕೊಟ್ಟು ಹತ್ತಾರು ವರುಷಗಳವರೆಗೆ ಸಾಲ ತೀರಿಲ್ಲ ಎಂದು ಹೇಳಿ, ದಲಿತರನ್ನು ಹಿಂಸಾತ್ಮಕವಾಗಿ ಜೀತಕ್ಕಿಟ್ಟುಕೊಂಡು, ಕ್ರೂರವಾಗಿ ದುಡಿಸಿಕೊಳ್ಳುವ ಜಮೀನ್ದಾರಿ ಕ್ರೌರ್ಯವನ್ನು ನಯವಾಗಿ ಮುಚ್ಚಿಡಲಾಗುತ್ತಿದೆ. ಇದರ ಜೊತೆಗೆ ಕನ್ನಡದ ವೈಚಾರಿಕ ಸಾಹಿತ್ಯವು ದಲಿತರ ನಿಜ ಶತ್ರುಗಳನ್ನು ಮುಚ್ಚಿಟ್ಟು ಹುಸಿ ಶತ್ರುಗಳನ್ನು ತೋರಿಸುವಲ್ಲಿ ಪ್ರಮುಖ ಪಾತ್ರ ವಹಿಸಿದೆ.

ದಲಿತ ವೈಚಾರಿಕ ಮತ್ತು ವಿಮರ್ಶೆ ಸಾಹಿತ್ಯ ವಾಸ್ತವ ದಲಿತ ನೆಲೆಯಿಂದ ತಾತ್ವಿಕವಾಗಿ ಹೊರಗೆ ನಿಂತಿದೆ. ಇದು ವಾಸ್ತವವಾಗಿ ದಲಿತರಿಂದ ಬಂದಿಲ್ಲ; ಶೋಷಕಪರ ಚಿಂತಕರು ಮಾಡಿರುವ ವೈಚಾರಿಕ ದಾನದ ಮೂಲಕ ಬಂದಿದೆ. ಅಂದರೆ ಇದು ದಲಿತೇತರ ಶೂದ್ರ ನೆಲೆಯಲ್ಲಿ ನಿಂತು, 'ಬ್ರಾಹ್ಮಣ-ಶೂದ್ರ' ವೈರುಧ್ಯವನ್ನು ವಿವರಿಸಲು ಸೀಮಿತವಾಗಿದೆ. ಶೂದ್ರ ನೆಲೆಯಿಂದ ಬ್ರಾಹ್ಮಣರನ್ನು ವಿರೋಧಿಸುವ ಸಾಹಿತ್ಯ ದಲಿತ ಹೋರಾಟಗಳ ಮೇಲೆ ದುಷ್ಪರಿಣಾಮ ಬೀರಿದೆ. ದಲಿತ ಹೋರಾಟದ ದಿಕ್ಕು ತಪ್ಪಿಸುವಲ್ಲಿ ತನ್ನ ಹಿಡಿತ ಸಾಧಿಸಿದೆ. ದಲಿತ ಹೋರಾಟದಲ್ಲಿ ಮೇಲಿಂದ ಮೇಲೆ ಬ್ರಾಹ್ಮಣಶಾಹಿ, ಪುರೋಹಿತಶಾಹಿ ಎನ್ನುವುದು ಈ ಸಾಹಿತ್ಯದ ಪ್ರಭಾವದಿಂದಲೇ.

ಸಾಮ್ರಾಜ್ಯಶಾಹಿಯ ಜಾಗತೀಕರಣ ಇಡೀ ದೇಶದ ಶ್ರಮಜೀವಿ ವರ್ಗವನ್ನು ಮತ್ತು ಉತ್ಪಾದಕ ವರ್ಗವನ್ನು ನೇರವಾಗಿ ಕೊಳ್ಳೆ ಹೊಡೆಯುತ್ತಿದೆ. ಜಾಗತೀಕರಣವು ಶ್ರಮಜೀವಿ ದುಡಿವ ವರ್ಗದಲ್ಲಿ ಆರ್ಥಿಕ ಬಿಕ್ಕಟ್ಟನ್ನು ಜಾಗತೀಕರಣಗೊಳಿಸಿದೆ. ಅದು ಹಸಿವು ಮತ್ತು ಅಪಮಾನವನ್ನು ಜಾಗತೀಕರಣಗೊಳಿಸಿದೆ. ಈ ನೆಲದ ಉತ್ಪಾದಕ ವರ್ಗ, ಶ್ರಮಜೀವಿ ವರ್ಗ ಮತ್ತು ಕೃಷಿಕೂಲಿ ಕಾರ್ಮಿಕರಾದ ದಲಿತರು ಸಾಮ್ರಾಜ್ಯಶಾಹಿ ವಿರುದ್ಧದ ಹೋರಾಟವನ್ನಲ್ಲದೆ ಬೇರೇನನ್ನೂ ಮಾಡಲಾರದ ವಾಸ್ತವ ಪರಿಸ್ಥಿತಿ ಎದುರಾಗಿದೆ. ಸಾಮ್ರಾಜ್ಯಶಾಹಿಯು ಉತ್ಪಾದಕ ವರ್ಗದ, ಶ್ರಮಜೀವಿ ವರ್ಗದ ಮತ್ತು ದಲಿತರ ಸಮರಶೀಲ ಹೋರಾಟವನ್ನಲ್ಲದೆ ಬೇರೇನನ್ನೂ ಎದುರಿಸಲಾರದ ವಾಸ್ತವ ಪರಿಸ್ಥಿತಿ ಇದೆ. ಇಂತಹ ಸಂದರ್ಭದಲ್ಲಿ ಈಗ ನಡೆಯುತ್ತಿರುವ ದಲಿತ ಹೋರಾಟಗಳು ಎಷ್ಟು ದಲಿತರ ಪರ? ಎಂತಹ ದಲಿತರ ಪರ? ಎಂಬ ಗುಮಾನಿಗಳೂ ಎದ್ದಿವೆ. ಅದು ಎಂಜಿನಿಯರುಗಳಿಗೆ ಬಡ್ತಿ ಮೀಸಲಾತಿ, ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ಅಂಬೇಡ್ಕರ್ ಹೆಸರಿಡಿ – ಮುಂತಾಗಿ ಹೊಟ್ಟೆ ತುಂಬಿದ ದಲಿತರಿಗಾಗಿ ಹೋರಾಡುತ್ತಿರುವಾಗ, ಇನ್ನೂ ಹಸಿವು ಇಂಗದ ದಲಿತರು ಯಾವ ಬಗೆಯ ಹೋರಾಟಕ್ಕೆ ಮುಂದಾಗಬೇಕು? ದಲಿತ ಹೋರಾಟ ಯಾವ ದಾರಿಗೆ ಬರಬೇಕು? ಈ ಬಗ್ಗೆ ಅದರ ನಾಯಕರು, ಚಿಂತಕರು ಆಲೋಚಿಸದಿದ್ದರೆ ಹಸಿವು ಇಂಗದ ದಲಿತರಾದರೂ ಆಲೋಚಿಸಲೇಬೇಕಾದ ಚಾರಿತ್ರಿಕ ಅನಿವಾರ್ಯತೆಯನ್ನು ವಸ್ತುನಿಷ್ಠ ಪರಿಸ್ಥಿತಿಯೇ ನಮ್ಮ ಮುಂದಿಟ್ಟಿದೆ.

(ದಿನಾಂಕ ೨೮-೦೭-೦೫ರಂದು ಕರ್ನಾಟಕ ಸಾಹಿತ್ಯ ಅಕಾಡೆಮಿ ದಾವಣಗೆರೆಯಲ್ಲಿ ನಡೆಸಿದ 'ಜನಪರ ಚಳುವಳಿಗಳು ಮತ್ತು ಸಾಹಿತ್ಯ' ಎಂಬ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ.)

**ಡಾ|| ಬಿ. ಎಂ. ಪುಟ್ಟಯ್ಯ**
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

## ತ್ರಿಕರಣ

ಈ ಸೊಳ್ಳೆ ತಿಗಣೆ ರಕ್ತ ಹೀರುವುದು
ದೊಡ್ಡ ನಷ್ಟವೇ ಸರಿ!
ಅದಕ್ಕಿಂತಲೂ ಕ್ರೂರ ಅವುಗಳಿಂದ ರಕ್ತಕ್ಕೆ ಸೇರುವ
ವಿಷದಿಂದ ಉಂಟಾಗುವ ಉರಿ!
ಇನ್ನೂ ಘೋರ ಅದಕ್ಕಾಗಿ ಮಾರಾಟಗೊಳ್ಳುವ
ಕ್ರಿಮಿನಾಶಕ ಔಷಧಿಗಳ ಪರಿ!

**ಬಸವರಾಜ ವಕ್ಕುಂದ**
೧೨/೫, ವಸ್ತ್ರದ ಬಿಲ್ಡಿಂಗ್, ಬಾಲಬಳಗ ಎದುರು
ಮಹಿಷಿ ರಸ್ತೆ, ಧಾರವಾಡ - ೭

*(ಜೈವಿಕ ತಂತ್ರಜ್ಞಾನ... ೪೯ನೇ ಪುಟದಿಂದ)*

ಸಂಪನ್ಮೂಲಗಳ ಮೇಲೆ ಹಾಗೂ ಪಾರಂಪರಿಕ ಜ್ಞಾನಸಂಪತ್ತಿನ ಮೇಲೆ ಸಂಪೂರ್ಣ ನಿಯಂತ್ರಣ ಸಾಧಿಸಲು ಬಯಸುತ್ತಿದ್ದಾರೆ. ಸ್ವಲ್ಪ ಕಾಲದ ಹಿಂದಷ್ಟೇ ಅವರು ನಮ್ಮ ಹುಣಿಸೆ, ಬೇವು ಹಾಗೂ 'ಬಸುಮತಿ' ಅಕ್ಕಿಯ ಮೇಲೆ ಪೇಟೆಂಟ್ ಪಡೆಯಲು ಹೊರಟುದುದು ಇದಕ್ಕೆ ಜ್ವಲಂತ ನಿದರ್ಶನ. ಸಿಂಜೆಂಟ್ ಕಂಪನಿಯು ಆಗಲೇ ೯೦೦ ತಳಿ-ಅಕ್ಕಿ ಮಾದರಿಗಳ ಪೇಟೆಂಟ್ ಪಡೆದಿದೆ, ಇಲ್ಲವೇ ಪಡೆಯುವ ಪ್ರಕ್ರಿಯೆಯಲ್ಲಿ ತೊಡಗಿದೆ. ಅಕ್ಕಿಯು (ಬತ್ತವು) ಏಷ್ಯದ ಜೀವನಾಡಿ. ಅದು ಏಷ್ಯನ್ನರ ಸಂಸ್ಕೃತಿ ಹಾಗೂ ಧಾರ್ಮಿಕ ಪರಂಪರೆಗಳೊಂದಿಗೆ ನಿಕಟವಾಗಿ ಸಂಬಂಧಿತವಾಗಿದೆ. ಅದರಲ್ಲೂ ಭಾರತವು ಈ ಅಮೂಲ್ಯ ಬೆಳೆಯ ಮೂಲಕೇಂದ್ರವಾಗಿದೆ. ತೃತೀಯ ಜಗತ್ತಿನ ಹಲವಾರು ಪ್ರಮುಖ ಬೆಳೆಗಳ ಅಧಿಕ ಸಂಖ್ಯೆ ಜೀನ್‌ಗಳ ಪೇಟೆಂಟ್ ಪಡೆಯಲು ಜೈವಿಕ ತಂತ್ರಜ್ಞಾನ ಸಂಸ್ಥೆಗಳ ಸನ್ನಾಹ ಭರದಿಂದ ಸಾಗಿದೆ. ಆದರೆ ಈಗ ಪರಿಶೀಲಿಸಬೇಕಾದ ಪ್ರಶ್ನೆಯೆಂದರೆ – ಅಮೆರಿಕಾದಲ್ಲಿ ಕಂಡುಬರುವ ತಾಮ್ರವು ಅಮೆರಿಕನ್ನರಿಗೆ ಸೇರಿದ್ದಾದರೆ, ಅದೇ ತರ್ಕದ ಪ್ರಕಾರ ಭಾರತದಲ್ಲಿ ಕಂಡುಬರುವ ಸಸ್ಯಗಳು, ಪ್ರಾಣಿಗಳು ಹಾಗೂ ಸೂಕ್ಷ್ಮಜೀವಿಗಳು ಭಾರತೀಯರಿಗೇ ಸೇರಿದುವಲ್ಲವೇ?

ಹಿಂದೆ ಪಾಶ್ಚಿಮಾತ್ಯ ದೇಶಗಳು ಅಭಿವೃದ್ಧಿಶೀಲ ದೇಶಗಳಿಂದ ಅನ್ಯಾಯ ಹಾಗೂ ಅಕ್ರಮ ವಿಧಾನಗಳ ಮೂಲಕ, ಕದಿಯುವ ಮೂಲಕವೂ ಸಹ, ಅಲ್ಲಿನ ತಳಿಗಳನ್ನು ವಶಪಡಿಸಿಕೊಂಡು ತಮ್ಮ ಬೆಳೆ-ಮಾದರಿಗಳನ್ನು ಸುಧಾರಿಸಿಕೊಂಡವು. ಇದಕ್ಕಾಗಿ ಅವು ಆ ದೇಶಗಳಿಗೆ ಚಿಕ್ಕಾಸನ್ನೂ ಕೊಡಲಿಲ್ಲ. ಈಗ ವೈಜ್ಞಾನಿಕ ಸಹಚರ್ಯೆಯ ಸೋಗಿನಲ್ಲಿ ನಮ್ಮ ತಳಿಸಂಪತ್ತಿನ ಸ್ವಾಮ್ಯ ಪಡೆಯಲು ಹವಣಿಸುತ್ತಿವೆ. ಅವುಗಳ 'ನಿತ್ಯಹರಿತ್‌ಕ್ರಾಂತಿ' ಎಂಬ ಘೋಷಣೆಯು ವಾಸ್ತವವಾಗಿ ಅಭಿವೃದ್ಧಿಶೀಲ ದೇಶಗಳ ಕೃಷಿ ವ್ಯವಸ್ಥೆಗಳ ಮೇಲೆ ತಮ್ಮ ಆಧಿಪತ್ಯ ಸ್ಥಾಪಿಸಿ ಅವನ್ನು ಗುಲಾಮಗಿರಿಗೆ ತಳ್ಳುವ ಒಂದು ದುಷ್ಟ ಸನ್ನಾಹವಾಗಿದೆ. ತೃತೀಯ ಜಗತ್ತಿನ ದೇಶಗಳು ಕುಲಾಂತರಿ ಬೀಜಗಳಿಗಾಗಿ ಶಾಶ್ವತವಾಗಿ ಕೃಷಿ-ಜೈವತಂತ್ರಜ್ಞಾನ ಕಂಪನಿಗಳ ಮೇಲೆಯೇ ಅವಲಂಬಿತವಾಗಿರುವಂತೆ ಮಾಡುವುದು ಅವುಗಳ ಹಂಚಿಕೆ. ಇದಕ್ಕಾಗಿ ಬಡದೇಶಗಳು ಅವುಗಳಿಗೆ ದುಬಾರಿ ಹಣವನ್ನು ತೆರಬೇಕು. ಜೀವ-ರೂಪಗಳ ಮೇಲೂ, ಜೀವಂತ ಅಂಗ – ಜೀನ್‌ಗಳ ಮೇಲೂ, ಪೇಟೆಂಟ್ ಪಡೆಯುವ ವಿಚಾರವೇ ಪ್ರಶ್ನಾರ್ಹವಾದುದು, ಅನೈತಿಕವಾದುದು. ಈ ಕಂಪನಿಗಳೇನೂ 'ಸೃಷ್ಟಿಕರ್ತರಲ್ಲ', 'ದೇವರುಗಳಲ್ಲ'. ಅವು ಕೇವಲ ತಳಿ-ಎಂಜಿನಿಯರಿಂಗ್ ಮೂಲಕ ಜೀವ-ರೂಪಗಳನ್ನು ಕೃತಕವಾಗಿ ಬಳಸಿಕೊಂಡಿವೆಯಷ್ಟೆ. ಹಾಗಾಗಿ, ವಿಕಾಸ ಪ್ರಕ್ರಿಯೆಯೊಳಕ್ಕೆ ಕೈ ಹಾಕುವುದಕ್ಕೆ, ಜೀವ-ವೈವಿಧ್ಯತೆಯನ್ನು ನಾಶಗೊಳಿಸುವುದಕ್ಕೆ, ಹಾಗೂ ದೇಶವೊಂದರ ಜೈವಿಕ-ಸಾರ್ವಭೌಮತ್ವದ ಮೇಲೆ ಹರಿಹಾಯುವುದಕ್ಕೆ, ಈ ಕಂಪನಿಗಳಿಗೆ, ಹಾಗೆ ನೋಡಿದರೆ ಯಾರಿಗೂ, ಹಕ್ಕಿಲ್ಲ.

ವಿಶ್ವವಾಣಿಜ್ಯ ಸಂಸ್ಥೆಯ ಕಟ್ಟುಪಾಡುಗಳನ್ನು ಪರಿಪಾಲಿಸುವ ನೆಪದಲ್ಲಿ ಕೃಷಿ-ಜೈವತಂತ್ರಜ್ಞಾನದ ಮೂಲಕ, ತೃತೀಯ ಜಗತ್ತಿನ ಕೃಷಿಪದ್ಧತಿಯನ್ನು ವಸಾಹತೀಕರಿಸುವುದು ಈ ಶತಮಾನದ ಸಾಮ್ರಾಜ್ಯವಾದದ ಒಂದು ಹೊಸರೂಪವಾಗಿದೆ. ಇದನ್ನು ಜೈವಿಕ-ಸಾಮ್ರಾಜ್ಯವಾದ ಅಥವಾ ತಳಿ-ಸಾಮ್ರಾಜ್ಯವಾದ ಎಂದು ಕರೆಯಬಹುದು. ಇದು ದಯಾಪರ ದೇವಮೂತನ ಮುಖವಾಡ ತೊಟ್ಟು ಅದೃಶ್ಯರೂಪದಲ್ಲಿದೆ. ಅದೇ ಹೊತ್ತಿನಲ್ಲಿ ಇದು ತೃತೀಯ ಜಗತ್ತಿನ ಬಾಗಿಲ ಬಳಿ ಬಂದು ನಿಂತಿರುವ ಸಾಮ್ರಾಜ್ಯವಾದದ ಅತ್ಯಂತ ಅಪಾಯಕಾರಿ, ಅತ್ಯಂತ ಕುರೂಪಿ ಹಾಗೂ ಅತ್ಯಂತ ಕ್ರೂರರೂಪವಾಗಿದೆ. ಈ ಬಾರಿ ಈ ಸಾಮ್ರಾಜ್ಯಶಾಹಿ ಶಕ್ತಿಗಳು ಜಗತ್ತನ್ನು ಸೆರೆ ಹಿಡಿಯಲು ತಮ್ಮ ತಳಿ-ಎಂಜಿನಿಯರಿಂಗ್ ಬೀಜಗಳನ್ನು ಆಯುಧಗಳನ್ನಾಗಿ ಬಳಸುತ್ತಿವೆ.

ಆಹಾರವು ಯಾವತ್ತೂ ಅಮೆರಿಕದ ವಿದೇಶಾಂಗ ನೀತಿಯ ಒಂದು ರಾಜಕೀಯ ಅಸ್ತ್ರವಾಗಿ ಇದ್ದುಕೊಂಡು ಬಂದಿದೆ. ೧೯೫೭ರಷ್ಟು ಹಿಂದೆಯೇ ಅಮೆರಿಕದ ಉಪಾಧ್ಯಕ್ಷ ಹ್ಯೂಬರ್ಟ್ ಹಂಫ್ರಿ ಅಮೆರಿಕಾದ ಶ್ರೋತೃಗಳನ್ನುದ್ದೇಶಿಸಿ ಹೇಳಿದ್ದರು: ''ಬೇರೆ ದೇಶಗಳ ಜನರು ನಿಮ್ಮ ಮೇಲೆ ಒರಗಿರುವಂತೆ ನೀವು ಮಾಡಬಯಸಿದಲ್ಲಿ, ನಿಮ್ಮೊಡನೆ ಸಹಕರಿಸುತ್ತ ನಿಮ್ಮನ್ನೇ ಅವಲಂಬಿಸಿರುವಂತೆ ಮಾಡಬಯಸಿದಲ್ಲಿ, ಆಹಾರದ ವಿಷಯದಲ್ಲಿ ಅವರು ನಿಮ್ಮನ್ನು ಅವಲಂಬಿಸಿರುವಂತೆ ಮಾಡುವುದೇ ಅತ್ಯಂತ ಉಪಯುಕ್ತ ವಿಧಾನ.'' ಈಗ ನಾವು ಕಾಣುತ್ತಿರುವುದು ಇದನ್ನೇ: ಕಟ್ಟಾಸೆಯ ಬಯೋಟೆಕ್ ಕಂಪನಿಗಳು ತೃತೀಯ ಜಗತ್ತಿನ ದೇಶಗಳ ಇಡೀ ಆಹಾರ-ಸರಪಳಿಯನ್ನು ತಮ್ಮ ವಶಕ್ಕೆ ತಂದುಕೊಳ್ಳಲು, ಅದನ್ನು ದೃಢಪಡಿಸಿಕೊಳ್ಳಲು ಯತ್ನಿಸುತ್ತಿರುವ ಅವುಗಳ ಈ ಸನ್ನಾಹವನ್ನೇ.

('ನ್ಯೂ ಏಜ್' ಪತ್ರಿಕೆಯ ಲೇಖನವೊಂದರ ಸಂಕ್ಷಿಪ್ತ ಅನುವಾದ)

ಮೂಲ: **ಡಾ|| ನರಸಿಂಹ ದಯಾಳ್**
ಅನುವಾದ: **ಕೆ. ಎಲ್. ಗೋಪಾಲಕೃಷ್ಣ ರಾವ್**
ನಂ. ೨೬೧, ೨ನೇ ಅಡ್ಡರಸ್ತೆ, ಸಿ.ಟಿ.ಬೆಡ್, ಬನಶಂಕರಿ ೨ನೇ ಹಂತ, ೩ನೇ ಬ್ಲಾಕ್, ತ್ಯಾಗರಾಜನಗರ, ಬೆಂ - ೨೮

# ಮೌಖಿಕ ಪರಂಪರೆ ಮತ್ತು ಇತಿಹಾಸ

## - ಒಂದು ಚಿಂತನೆ

ಕನ್ನಡ ಭಾಷೆ, ಕನ್ನಡ ಪರಂಪರೆ ಕುರಿತು ಎಷ್ಟೇ ಮಾತನಾಡಿದರೂ, ಎಷ್ಟೇ ಚಳುವಳಿ, ಹೋರಾಟ ನಡೆಸಿದರೂ ಕನ್ನಡಿಗರ ಔದಾಸೀನ್ಯವನ್ನು ಜಾಗ್ರತಗೊಳಿಸುವ ಕಾರ್ಯ ಪರಿಣಾಮಕಾರಿಯಾಗುತ್ತಿಲ್ಲವೆಂಬ ಸತ್ಯ ನಮ್ಮ ಮುಂದಿದೆ. ಭಾಷೆಯ ಕುರಿತು ನಿರ್ಲಕ್ಷ್ಯ, ಮಕ್ಕಳಿಗೆ ಹುಟ್ಟುತ್ತಲೇ ಆಂಗ್ಲ ಭಾಷೆಯನ್ನು ಕಲಿಸಬೇಕೆಂಬ ಪೋಷಕರ ಮನೋಭಾವಗಳನ್ನು ಬದಲಾಯಿಸಲು ಕಾನೂನಿಂದ ಸಾಧ್ಯವಿಲ್ಲವಾಗಿದೆ. ಕರ್ನಾಟಕದ ಗಡಿ, ನೆಲ, ಜಲಗಳ ವಿವಾದಗಳನ್ನು ಪರಿಹರಿಸಲೂ ಸಾಧ್ಯವಾಗಿಲ್ಲ, ಮುಖ್ಯವಾಗಿ ರಾಷ್ಟ್ರೀಯ ಮನೋಭಾವನೆ ಮರೆಯಾಗುತ್ತಿದೆ. ಕಾಲ ಎನ್ನುವುದು ಒಂದು ನಿರಂತರ ಪ್ರವಾಹ. ನೆನ್ನೆ ಮತ್ತು ನಾಳೆಗಳ ನಡುವಿರುವ ವರ್ತಮಾನದ ಬೇರುಗಳು ಭವಿಷ್ಯದಲ್ಲಿ ಕಾಣಿಸಿಕೊಳ್ಳುತ್ತವೆ. ನೆನ್ನೆ, ಇಂದು, ನಾಳೆಗಳು ಒಂದರೊಳಗೊಂದು ಸೇರಿಕೊಂಡಿರುತ್ತವೆ. ಲೇಖಕನಾಗಲಿ ಕಲಾವಿದನಾಗಲಿ ಕಾಲದ ಈ ಚಲನಶೀಲತೆಯನ್ನು ಅಲಕ್ಷಿಸಲಾಗದು. ಇತಿಹಾಸವೆಂದರೆ ಕಳೆದ ದಿನಗಳ ಚರಿತ್ರೆ ಮಾತ್ರವಲ್ಲ ಮನುಷ್ಯನ ಸಾಧನೆ, ಗೆದ್ದ-ಸೋತ ವಿವರಗಳು, ಆತ್ಮಾರ್ಪಣೆ ಮಾಡಿಕೊಂಡ ಸಂಗತಿಗಳು, ಆಳಕ್ಕೆ ಇಳಿದಷ್ಟೂ ಸಿಗುವ ಹೊಸ ಕುರುಹುಗಳು. ಸತ್ಯಗಳ ಹುಡುಕಾಟ ಇರುವುದೆ ಆ ಇತಿಹಾಸದಲ್ಲಿ, ವರ್ತಮಾನದ ಬದುಕನ್ನು ರೂಪಿಸಲು ಮನುಷ್ಯ ಇತಿಹಾಸದತ್ತ ಅವಲೋಕನ ಮಾಡಬೇಕು. ಇದರಿಂದ ಮನುಷ್ಯನಿಗೆ ಅನೇಕ ಮುಕ್ತ ಅವಕಾಶಗಳು ದೊರಕುತ್ತವೆ. ವಿವಿಧ ಕಾಲಘಟ್ಟದ ತಲ್ಲಣಗಳು, ಆಘಾತಗಳು, ಕನಸುಗಳು ಇತಿಹಾಸದ ಅಧ್ಯಯನದಿಂದ ಅರಿವಿಗೆ ಬರುತ್ತವೆ. ವರ್ತಮಾನದ ಜ್ವಲಂತ ಸಮಸ್ಯೆಗಳಿಗೆ ಸಮರ್ಪಕ ಪರಿಹಾರ ಕಂಡುಕೊಳ್ಳಲು ಇತಿಹಾಸಕ್ಕೇ ಮೊರೆಹೋಗಬೇಕು. ಕನ್ನಡ ಭಾಷೆಯೂ ವಿವಿಧ ಕಾಲಘಟ್ಟಗಳಲ್ಲಿ ಹಲವು ಏರಿಳಿತಗಳನ್ನು ಎದುರಿಸುತ್ತಲೇ ಬಂದಿರುವುದನ್ನು ಇತಿಹಾಸದಿಂದ ತಿಳಿಯಬಹುದು. ಕನ್ನಡ-ಕರ್ನಾಟಕದ ಹಿತವನ್ನು ಕಡೆಗಣಿಸಿದ ಎಷ್ಟೋ ಪ್ರಕರಣಗಳು ಇತಿಹಾಸದಲ್ಲಿ ದಾಖಲಾಗಿವೆ. ಸುಮಾರು ೧೫೦ ವರ್ಷಗಳ ಹಿಂದೆ ವಿದೇಶೀ ವಿದ್ವಾಂಸರಿಂದ ಪ್ರಾರಂಭವಾಗಿರುವ ಕನ್ನಡ ಶಬ್ದಗಳ, ಗಾದೆಗಳ, ಜನಪದ ಕಥನ ಗೀತಗಳ ಸಂಗ್ರಹಕಾರ್ಯ, ಪ್ರಾಚೀನ ಕಾವ್ಯಗಳ ಅಧ್ಯಯನ ಕಾರ್ಯ ಇಂದಿಗೂ ಸಾತತ್ಯವನ್ನು ಉಳಿಸಿಕೊಂಡೇ ಬಂದಿದೆ. ಒಬ್ಬ ಲೇಖಕ ಅಥವಾ ಸಂಶೋಧಕ ಮಾಡಿದ ಕೆಲಸವನ್ನು ಗಮನಿಸುತ್ತಲೇ, ಅಧ್ಯಯನ ಮಾಡಿ ಹೊಸ ದೃಷ್ಟಿಕೋನದಿಂದ ಮುಂದುವರೆಸಿ ಹೊಸ ಸತ್ಯಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಬೇಕು. ಪ್ರಾಮಾಣಿಕ ಪ್ರಯತ್ನದಿಂದ ಮಾತ್ರ ಅಧ್ಯಯನಕ್ಕೆ ಒಂದು ಹೊಸ ಆಯಾಮವನ್ನು ಕಂಡುಕೊಳ್ಳಲು ಸಾಧ್ಯ. ತೌಲನಿಕ ಅಭ್ಯಾಸದ ಮೂಲಕ, ವಿವಿಧ ಕಾಲ ಘಟ್ಟಗಳ ವಿಭಿನ್ನ ರೂಪಗಳನ್ನು ಅನಾವರಣಗೊಳಿಸಬಹುದು.

ಮೌಖಿಕ ಸಂಸ್ಕೃತಿಯ ಮಹಾ ಪ್ರವಾಹವೊಂದು ಭಾರತದ ಎಲ್ಲ ಭಾಷೆಗಳಲ್ಲಿ ಸದಾ ಜೀವಂತವಾಗಿ ಚಲನಶೀಲವಾಗಿರುವುದನ್ನು ಕಾಣಬಹುದು. ಅನೇಕ ರೂಪಾಂತರಗಳು, ಪಲ್ಲಟಗಳು ನಿರಂತರವಾಗಿ ಪ್ರವಹಿಸುವುದೇ ಗುಣವಾಗಿರುವ ಈ ವಾಹಿನಿಗೆ ಕರ್ನಾಟಕವೂ ಕನ್ನಡ ಭಾಷೆಯೂ ಹೊರತಾಗಿಲ್ಲವೆನ್ನಬಹುದು. ಒಂದು ಕಾವ್ಯ ಯಾವ ಅರ್ಥ, ಭಾವಗಳನ್ನು ಸೂಚಿಸುತ್ತದೆ ಎನ್ನುವುದಕ್ಕಿಂತ ಹೇಗೆ ಸೂಚಿಸುತ್ತದೆ ? ಎಂಬುದು ಮುಖ್ಯ. ಅರ್ಥಗಳ ಸಾಧ್ಯತೆಗಳನ್ನು ವಿಶ್ಲೇಷಿಸುವುದು ನಮ್ಮ ಪರಂಪರೆಯ ಒಂದು ಭಾಗ. ಒಂದೊಂದು ಪದಕ್ಕೂ ಭಿನ್ನ ಭಿನ್ನ ಅರ್ಥಗಳನ್ನು ಸಾಧ್ಯತೆಗಳನ್ನು ಹುಡುಕುವ ಕ್ರಮ ನಮಗೆ ರೂಢಿಗತವಾಗಿದೆ. ಇದರಿಂದಾಗಿ ಈ ನೆಲದ ಮೌಖಿಕ ಪರಂಪರೆಯೊಂದಿಗೆ ಸಂವಾದಿಸಲು ಬೇಕಾದ ಚಲನಶೀಲತೆ ನಮಗೆ ದಕ್ಕಿದೆ. ಕಾವ್ಯಾನುಸಂಧಾನಕ್ಕೆ ಬೇಕಾದ ಸಿದ್ಧತೆಯೆಂದರೆ ಸಾಮರಸ್ಯದ ಚಲನಶೀಲತೆಯನ್ನು ಕಂಡುಕೊಳ್ಳುವುದು. ಬದುಕಿನ ಬಗ್ಗೆ ಕರುಣೆ, ಮೈತ್ರಿ ಅನಿವಾರ್ಯ. ಅಜ್ಞಾನ, ಹಸಿವು, ಅಪಮಾನಗಳು ಕವಿಯ ನೋವಿನ ಆಕರಗಳು. ಕವಿಯ ಮುಂದಿರುವ ವಸ್ತುಪ್ರಪಂಚ ಮತ್ತು ಅದನ್ನು ಗ್ರಹಿಸುತ್ತಿರುವ ಸ್ವರೂಪದ ಅರಿವು ಕರಗತವಾದರೆ ಕವಿಗೆ ಮಾತೆಂಬುದು ಜ್ಯೋತಿರ್ಲಿಂಗವಾಗುತ್ತದೆ. ಲೋಕವನ್ನು ಅರಿತುಕೊಳ್ಳಲು ಬೇಕಾಗಿರುವ ಕರುಣೆ, ಮೈತ್ರಿಯ ಜೊತೆಗೆ ಕಾವ್ಯವನ್ನು ಅರಿಯಲು ಸಹೃದಯತೆ ಇರಬೇಕಾಗುತ್ತದೆ.

ಭಾರತೀಯ ಸಂಸ್ಕೃತಿಯ ಸಂದರ್ಭದ ಇತಿಹಾಸವನ್ನು ಗಮನಿಸಿದಾಗ ನಮ್ಮ ದೇಶದಲ್ಲಿ ಬಹಳ ಹಿಂದಿನ ಕಾಲದಿಂದಲೂ ಸಂತರು, ಜ್ಞಾನಿಗಳು, ಶರಣರು, ಪಂಡಿತರು ಸಮೃದ್ಧವಾಗಿ ಕಂಡುಬರುತ್ತಾರೆ. ಇವರೆಲ್ಲರೂ ತಮ್ಮ ಜೀವನಾನುಭವದ ಜ್ಞಾನವನ್ನು, ಮಾನವೀಯ ಕಳಕಳಿಯನ್ನು, ಬೋಧಿಸುತ್ತಾ ಜನಸಾಮಾನ್ಯರ ಬದುಕನ್ನು ಹಸನು ಮಾಡಲು ಪ್ರಯತ್ನಿಸಿದ್ದಾರೆ. ಅಷ್ಟೇ ಏಕೆ, ಧರ್ಮಕ್ಕೆ ಧಕ್ಕೆ ಬಂದಾಗಲೆಲ್ಲಾ ದೇವರೂ ಸಹ ವಿವಿಧ ಅವತಾರಗಳನ್ನು ಎತ್ತಿ ದುಷ್ಟರನ್ನು ಅಂದರೆ ಕೆಳವರ್ಗದವರನ್ನು ಶಿಕ್ಷಿಸಿ, ಶಿಷ್ಟರನ್ನು ಅಂದರೆ ಮೇಲ್ವರ್ಗದವರನ್ನು ರಕ್ಷಿಸಿ, ಧರ್ಮ, ಧಾರ್ಮಿಕ ಆಚರಣೆಗಳು ನಿರಂತರವಾಗಿ ಮುಂದುವರಿಯಲು ಕಾರಣನಾಗಿದ್ದಾನೆ. ನಮ್ಮ ಧಾರ್ಮಿಕ ಪುರಾಣಗಳೆಲ್ಲವೂ ಇಂತಹ ಪುಣ್ಯ ಪುರುಷರ ಬೋಧನೆಗಳಿಂದಲೇ ತುಂಬಿಹೋಗಿವೆ. ಶ್ರಮಜೀವಿಗಳನ್ನು, ಜನಸಾಮಾನ್ಯ ಅಸಹಾಯಕರನ್ನು ವಿವಿಧ ಅವತಾರಗಳ ಮೂಲಕ ಶಿಕ್ಷಿಸುವುದೇ ನಮ್ಮ ದೇವರುಗಳ ಪ್ರಧಾನ ಉದ್ಯೋಗವಾಗಿದೆ. ಇಷ್ಟಾದರೂ ನಮ್ಮ ಜನ ಸನ್ಮಾರ್ಗದಲ್ಲಿ ಜೀವಿಸುವುದಕ್ಕಿಂತಲೂ, ಬೋಧನೆ ಮಾಡುವುದರಲ್ಲಿ ಹೆಚ್ಚು ಸಮಯ ಕಳೆಯುತ್ತಾರೆ. ಹಾಗೆ ನೋಡಿದರೆ ನಾವು ಭಾರತೀಯರು ಬಹು ಪಾಲು ಪರೋಪದೇಶ ಪಂಡಿತರೇ ಸರಿ. ಆದರೆ ಆಚರಣೆಯಲ್ಲಿ ಮಾತ್ರ ಬಹಳ ಹಿಂದೆ. ನಮ್ಮ ಜನ ತಾವು ಕೇಳಿಸಿಕೊಳ್ಳುವುದಕ್ಕಿಂತಲೂ, ತನ್ನ ಮಾತನ್ನು ಇತರರು ಕೇಳಬೇಕೆಂದು ಬಯಸುತ್ತಾರೆ. ಇತರರ ಮಾತನ್ನು ಕೇಳುವುದೂ ಒಂದು ಕಲೆ. ಕೇಳುವಿಕೆಯಿಂದ ಜೀವನದಲ್ಲಿ ಬಹಳಷ್ಟು ಕಲಿಯಬಹುದೆಂಬ ಪ್ರಾಥಮಿಕ ಜ್ಞಾನವೂ ನಮ್ಮವರಿಗೆ ಕಡಿಮೆಯೇ. ಯಾವುದೇ ವಿಚಾರವನ್ನು ಗಮನವಿಟ್ಟು ಪೂರ್ಣ ಪ್ರಜ್ಞೆಯಿಂದ ಕೇಳಿಸಿಕೊಂಡಾಗ, ಬಹಳಷ್ಟು ಹೊಸ ಜ್ಞಾನ ನಮ್ಮದಾಗುತ್ತದೆ. ಸರಿಯಾಗಿ ಕೇಳಿಸಿಕೊಳ್ಳುವ ಅಭ್ಯಾಸದಿಂದ ನಮ್ಮ ಪ್ರಜ್ಞಾವಂತ ಮನಸ್ಸು ಜಾಗ್ರತವಾಗುತ್ತದೆ. ವಿಚಾರಶಕ್ತಿ ಬೆಳೆಯುತ್ತದೆ. ವೈಚಾರಿಕ ಚಿಂತನೆಗಳು ಮೊಳೆಯುತ್ತವೆ. ಕೇಳಿಸಿಕೊಂಡ ವಿಚಾರಗಳಲ್ಲಿ ಜೊಳ್ಳನ್ನು ತೂರಿ ಗಟ್ಟಿಕಾಳುಗಳನ್ನು ಮಾತ್ರ ಆಯ್ಕೆ ಮಾಡಿಕೊಳ್ಳಬೇಕು. ಕೇಳಿದ್ದೆಲ್ಲವನ್ನೂ ಒಪ್ಪಲೇಬೇಕು, ಪಾಲಿಸಲೇಬೇಕು ಎಂಬ ಬಂಧನಕ್ಕೆ ಒಳಪಡದೆ ತಮ್ಮ ವಿಚಾರ ಶಕ್ತಿಗೆ, ತಮ್ಮ ನಂಬಿಕೆಗೆ ಪೂರಕವಾದ್ದನ್ನು ಮಾತ್ರ ಸ್ವೀಕರಿಸಬೇಕು.

ಇತರರ ವಿಚಾರಗಳನ್ನು ಕೇಳಿಸಿಕೊಳ್ಳುವುದರಿಂದ ನಮ್ಮ ಸುತ್ತಲ ಜಗತ್ತಿನಲ್ಲಿ ಏನು ನಡೆಯುತ್ತಿದೆ ಎಂಬ ಅರಿವು ಉಂಟಾಗುತ್ತದೆ. ಒಳ್ಳೆಯ ಕೇಳುವಿಕೆಯಿಂದ ಇತರರ ಜೀವನಾನುಭವಗಳನ್ನು ಅರಿತು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಲು ಸಾಧ್ಯ. ಕೇಳುವಿಕೆಯೂ ಒಂದು ಸಹಜ ಕ್ರಿಯೆ ಆದಾಗ ಹೇಳುವವರ ಭಾವಾಭಿನಯ, ಆಂಗಿಕ ಚಲನೆಗಳನ್ನು ಗಮನಿಸಬಹುದು. ಕೇಳುವವರ ಪ್ರತಿಕ್ರಿಯೆಯೂ ಇಲ್ಲಿ ಮುಖ್ಯವಾಗುತ್ತದೆ. ಮಾತನಾಡುವವರೂ ಸಹ ತನ್ನ ಶ್ರೋತೃಗಳಾರು ? ಅವರ ಗಮನ ಎಲ್ಲಿದೆ ? ಎಂಬುದನ್ನು ಅರಿತು ಮಾತನಾಡಬೇಕಾಗುತ್ತದೆ. ಹೇಳುವವನ ವಿಚಾರಗಳು ಕೇಳುಗನ ಗಮನವನ್ನು ಆಕರ್ಷಿಸುವಂತಿರಬೇಕು. ಕೇಳುಗನ ಕಣ್ಣುಗಳಲ್ಲಿ ಹೇಳುವವನ ವಿಚಾರಗಳು ಪ್ರತಿಫಲಿಸುವಂತಿರಬೇಕು. ಈ ಸ್ಥಿತಿಗೆ ತಲುಪಲು ಇಬ್ಬರಲ್ಲಿಯೂ ಕೆಲವು ಸಿದ್ಧತೆಗಳು ಬೇಕಾಗುತ್ತವೆ. ಜಾಗೃತ ಸ್ಥಿತಿಯನ್ನು ಮೈಗೂಡಿಸಿಕೊಂಡಾಗ ಒಳ್ಳೆಯ ಕೇಳುವಿಕೆಗಳು, ಹೇಳುವಿಕೆಗಳು ಸಾಧ್ಯ. ಆಲಿಸುವ ಕಲೆ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ಮನಸ್ಸಿನಲ್ಲಿ ಬೇರೆ ವಿಚಾರಗಳು ತುಂಬಿರುವಾಗ ಕೇಳಿಸಿಕೊಳ್ಳುವಿಕೆ ಸಾಧ್ಯವಾಗಲಾರದು, ಕೇಳಿಸಿಕೊಂಡ ವಿಚಾರಗಳು ಮನಸ್ಸಿನಾಳಕ್ಕೆ ಇಳಿಯದೆ ನಿರೀಕ್ಷಿತ ಪರಿಣಾಮ ಬೀರಲಾರವು. ಏಕಾಗ್ರತೆಯಿಂದ ಆಲಿಸುವಿಕೆ ಸಾಧ್ಯವಾಗದಾಗ ಹೇಳುಗನಿಗೂ ನಿರುತ್ಸಾಹ ಉಂಟಾಗುತ್ತದೆ. ಸತತ ಅಧ್ಯಯನದಿಂದ ಮಾತ್ರ ಕೇಳುಗನು ಹೇಳುಗನ ವಿಚಾರಗಳನ್ನು ಸಮರ್ಥವಾಗಿ ಗ್ರಹಿಸಲು ಸಾಧ್ಯ. ಇಲ್ಲವಾದರೆ ಒಂದು ಕಿವಿಯಿಂದ ಕೇಳಿ ಮತ್ತೊಂದು ಕಿವಿಯಿಂದ ಹೊರಹೋಗಿ ವಿಚಾರಗಳು ಮನಸ್ಸಿನಲ್ಲಿ ನಿಲ್ಲುವುದಿಲ್ಲ. ರೈಲಿನಲ್ಲಿ ಪ್ರಯಾಣಿಸುವಾಗ ಹಿಂದಕ್ಕೋಡುವ ಪ್ರಕೃತಿ ದೃಶ್ಯಗಳು ಕಣ್ಣಿಗೆ ಕಂಡಂತಾಗಿ ಮರುಕ್ಷಣ ಮರೆಯಾಗುವಂತೆ ಆಸಕ್ತಿ ಇಲ್ಲದೆ ಆಲಿಸಿದ ವಿಚಾರಗಳೂ ಮನಸ್ಸಿನಿಂದ ಮರೆಯಾಗುತ್ತವೆ.

ಜಯದೇವಪ್ಪ ಜೈನಕೇರಿ
ನಂ. ೮೭, ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ - ೫೭೭ ೨೦೧




# ಗವಾಕ್ಷ

ಗವಾಕ್ಷಿ ಇಲ್ಲವೆ ಗವಾಕ್ಷ ಗವಿಯ ಅಕ್ಷಿ ಎಂಬರ್ಥದಲ್ಲಿ ರೂಪು ಗೊಂಡಿರಬೇಕು. ಗವಿಗಳಿಗೆ ಪ್ರವೇಶದ್ವಾರದ ಮೂಲಕ ಬೆಳಕು ಬರುವುದು ಬಿಟ್ಟರೆ ಅಲ್ಲಿ ಕಿಟಕಿಗಳಿರುವುದಿಲ್ಲ. ಹಿಂದಿನ ಕಾಲದ ಮನೆಗಳ ಸೂರುಗಳಲ್ಲಿನ ಬೆಳಕಿಂಡಿಗಳನ್ನೂ ಗವಾಕ್ಷಿ / ಗವಾಕ್ಷ ಎಂದು ಹೇಳಲಾಗುತ್ತಿತ್ತು. ಈ ಗವಾಕ್ಷವನ್ನು ರೂಪಕವಾಗಿಸಿಕೊಂಡ ಎರಡು ಪದ್ಯಗಳು 'ಮಂಕುತಿಮ್ಮನ ಕಗ್ಗ'ದಲ್ಲಿವೆ. ಅವುಗಳನ್ನು ನೋಡೋಣ.

*ಜಗದ ಬಂದೀಗೃಹದಿ ಬಿಗಿಯುತಿರೆ ವಿಧಿ ನಿನ್ನ ।*
*ನಿಗಮ ಸತ್ಕಲೆ ಕಾವ್ಯಗಳ ಗವಾಕ್ಷಗಳಿಂ ॥*
*ಗಗನದನಂತದರ್ಶನದೆ ಮುಕ್ತಿಯನೊಂದು ।*
*ನಗುನಗಿಸಿದೊಳಲೋಕವನು - ಮಂಕುತಿಮ್ಮ ॥೪೬೦॥*

*ಅಂತರಂಗದ ಗವಾಕ್ಷಗಳ ತೆರೆದಿಡಲಲ್ಲಿ ।*
*ಚಿಂತೆ ಕುಮುಲದು ಹೊಗೆಗಳೊತ್ತವಾತ್ಮವನು ॥*
*ಶಾಂತಿ ಬೇಳ್ಪೊಡೆ ಮನೆಗೆ ಗೋಡೆವೊಲೆ ಕಿಟಿಕಿಯುಂ ।*
*ಸಂತತದಪೇಕ್ಷಿತವೊ - ಮಂಕುತಿಮ್ಮ ॥೫೫೭॥*

ಮನೆಗೆ ಎರಡು ಉದ್ದೇಶಗಳುಂಟು – ಹೊರಗಣ ದಾಳಿಯಿಂದ ರಕ್ಷಣೆ ಹಾಗೂ ಒಳಗಿನ ಆಗುಹೋಗುಗಳನ್ನು ಮರೆಮಾಡುವಿಕೆ. ನಿಸರ್ಗವೇ ರೂಪಿಸಿದ ಗವಿಗುಹೆಗಳಲ್ಲಿ ಬಂಡೆಗಳೇ ಗೋಡೆ. ಬಂಡೆಗಳ ಸಂದುಗಳೇ ಮನೆ. ಬಂಡೆಗಳ ನಡುವಣ ಬಿರುಕೇ ಗವಾಕ್ಷ.

ಈ ಗವಾಕ್ಷದ ಮಾದರಿಯಲ್ಲೇ ಮನೆ ನಿರ್ಮಿಸತೊಡಗಿದ ಮಾನವ ಮನೆ ನಿರ್ಮಿಸುವಾಗ ಈಗಿನ ಹಾಗೆ ವಿಶಾಲವಾದ ಕಿಟಕಿಗಳನ್ನು ನಿರ್ಮಿಸುತ್ತಿರಲಿಲ್ಲ. ಅವನಿಗೆ ಹೊರಗಿನ ದಾಳಿಯ ಭಯ, ಒಳಗಿನ ಗುಟ್ಟು ಬಯಲಾಗುವ ಭೀತಿ ಬಹಳವಾಗಿದ್ದಂತೆ ತೋರುತ್ತದೆ. ತೀರಾ ಕತ್ತಲಾದಾಗ ಬೆಳಕನ್ನು ಪಡೆಯುವ ಸಲುವಾಗಿ ಮನೆಯ ಸೂರಿನಲ್ಲಿ ಗವಾಕ್ಷವನ್ನು ನಿರ್ಮಿಸುತ್ತಿದ್ದ. ಮಳೆ ಬರುವ ಸೂಚನೆ ಕಂಡೊಡನೆ ಆ ಗವಾಕ್ಷವನ್ನು ಮಡಕೆಯ ಚೂರಿನಿಂದ ಮುಚ್ಚುತ್ತಿದ್ದ. ಅಂತಹ ಮನೆಯನ್ನೇ ರೂಪಕವಾಗಿಸಿ ಡಿವಿಜಿಯವರು ಎರಡು ಪದ್ಯಗಳನ್ನು ರಚಿಸಿದ್ದಾರೆ. ಮೇಲೆ ಉದ್ಧರಿಸಿರುವ ಎರಡು ಪದ್ಯಗಳನ್ನೂ ಒಂದೊಂದಾಗಿ ಗಮನಿಸೋಣ.

ಕಲೆ/ಕಾವ್ಯ/ದರ್ಶನಗಳು ಎಲ್ಲರ ಜೀವನಮಾರ್ಗವಾಗುವುದು ಸಾಧ್ಯವೂ ಇಲ್ಲ, ಸಾಧುವೂ ಅಲ್ಲ. ಬೀಚಿಯವರು ಹೇಳುವ ಹಾಗೆ, ಶಿವನೋಡಿ ಬುದ್ಧನಾದ ಗೌತಮನಿಲ್ಲದಿದ್ದರೂ ಸಮಾಜ ನಡೆಯುತ್ತದೆ. ಆದರೆ ಶಿವವಾಹಕನಾದ ಕೇಶವಾಚಾರಿ ಇಲ್ಲದೆ ಹೋದರೆ ಬದುಕು ಸಾಗುವುದಿಲ್ಲ. ಅಂದಮೇಲೆ ನಿತ್ಯಬದುಕಿನಲ್ಲಿ ಸಾಗುವ ನಾವು ಹೃದಯ ಸಂಸ್ಕಾರಕ್ಕೆ ಹೃದಯಶ್ರೀಮಂತಿಕೆಗೆ ಅನಿವಾರ್ಯ ಅಗತ್ಯವಾದ ಕಾವ್ಯಗಳನ್ನು ಉಪೇಕ್ಷಿಸಬೇಕೆ ? ಜಾಗತೀಕರಣ, ಖಾಸಗೀಕರಣ, ಉದಾರೀಕರಣದ ಒತ್ತಡದ ಈ ದಿನಗಳಲ್ಲಿ ಕಾವ್ಯಾಸಕ್ತಿ ಸಹಜವಾಗಿಯೇ ಹಿಂದೆ ಸರಿಯುತ್ತಿರುವ ಸಂದರ್ಭದಲ್ಲಿ ಈ ಮಾತು/ ಈ ಪದ್ಯ ಪ್ರಸಕ್ತವಾಗುತ್ತದೆ.

ದೈನಂದಿನ ಕೆಲಸ, ಕೌಟುಂಬಿಕ ಜವಾಬ್ದಾರಿ ಹಾಗೂ ವೃತ್ತಿಪರ ಕರ್ತವ್ಯಗಳ ನಡುವೆ ನಾವು ಸೆರೆಯಾಗಿದ್ದೇವೆ. ಇವೆಲ್ಲವೂ ಮಾಡಲೇಬೇಕಾದ ಕರ್ತವ್ಯಗಳಾಗಿರುವುದರಿಂದ ನಾವೇ ವಿಧಿಸಿಕೊಂಡ ಹೊಣೆ ಆಗಿರುವುದರಿಂದ ಇವೆಲ್ಲವೂ ವಿಧಿ. ಈ ದೈನಂದಿನ ಜಂಜಾಟಗಳ ಸೆರೆಯಲ್ಲಿ ಬಂದಿಯಾಗಿರುವ ನಾವು ಜಗದ ಬಂದೀಗೃಹದಿ ಬಂಧಿತ ರಾದವರು.

ಆದರೂ ಈ ಬಂದೀಗೃಹಕ್ಕೊಂದು ಗವಾಕ್ಷವಿದ್ದರೆ ? ಆಗ ಗವಾಕ್ಷದ ಮೂಲಕ ದೂರದ ಆಕಾಶಕಾಯಗಳನ್ನು ವೀಕ್ಷಿಸುತ್ತ ಕನಸು ಕಾಣಬಹುದು. ಅನಂತ ವಿಶ್ವದ ಭಾಗವೆಂದು ನಮ್ಮನ್ನೂ ನಮ್ಮ ಬಂದೀಗೃಹವನ್ನೂ ಪರಿಭಾವಿಸಿಕೊಳ್ಳಬಹುದು. ಆಗ ವ್ಯಷ್ಟಿ (ಪ್ರತ್ಯೇಕತೆ) ಪ್ರಜ್ಞೆಯ ವ್ಯಥೆ ಹತಾಶೆಗಳು ಮರೆಯಾಗಿ ಸಮಷ್ಟಿ ಪ್ರಜ್ಞೆಯ ವಿಶ್ವಾತ್ಮಕತೆಯ ಉದಾತ್ತೀಕರಣ ಉಂಟಾಗುತ್ತದೆ.

ಹೀಗಲ್ಲದೆ ದೈನಂದಿನ ಕೆಲಸಗಳನ್ನು ಬಿಟ್ಟು ಕಲೆ/ಕಾವ್ಯದ ಹಿಂದೆ ಎಲ್ಲರೂ ಸಾಗಿದರೆ ಹೊಟ್ಟೆ ಹೊರೆದುಕೊಳ್ಳುವುದೂ ಸಾಗದು. ಮಾಡುವ ಕೆಲಸ ಬಿಟ್ಟು ಹಾಡುವ ದಾಸಯ್ಯನ ಹಿಂದೆ ಹೋಗಲಾದೀತೆ ? ಎಲ್ಲರೂ ಹಾಗೆ ಹೋಗದೆ ಕನಿಷ್ಠ ಇರುವಲ್ಲಿಯೇ ರಸಾಸ್ವಾದ ಮಾಡಲು ಸಾಧ್ಯ. ಪ್ರಕೃತಿಯ ಬಗ್ಗೆ ಗಮನ ಸೆಳೆಯುವ ಗವಾಕ್ಷವೆಂದರೆ – ಕಲೆ, ಶಾಸ್ತ್ರ, ಕಾವ್ಯಗಳು.

ಈಗ ಈ ಗವಾಕ್ಷದಿಂದ ನೋಡಿದಾಗ ಎರಡು ಅನುಕೂಲಗಳುಂಟು. ಮೊದಲನೆಯ ಅನುಕೂಲವೆಂದರೆ, ವೈಯಕ್ತಿಕ ಚಿಂತೆಯಿಂದ ಬಿಡುಗಡೆ (ಮುಕ್ತಿ); ಎರಡನೆಯ ಅನುಕೂಲವೆಂದರೆ, ತಾನೂ ಆನಂದಿಸಿ ಇತರರನ್ನೂ ಸಂತಸಪಡಿಸುವ ಸಾಮರ್ಥ್ಯ ಲಭ್ಯವಾಗುವುದು.

ಗವಾಕ್ಷವನ್ನು ತೆರೆದು ಗಗನವನ್ನು ನೋಡಿದಾಗ ನಮ್ಮ ದೃಷ್ಟಿ ವಿಶ್ವದತ್ತ ಸಾಗುತ್ತದೆ. ಆದರೆ ನಮ್ಮ ನೆರೆಹೊರೆಯವರ ನೋವು ನಲಿವುಗಳನ್ನು ಅರಿಯಬೇಕಾದರೆ ಆಕಾಶಕ್ಕೆ ಮುಖಮಾಡಿದ ಗವಾಕ್ಷದ ಜೊತೆಗೆ ನೆರೆಹೊರೆಯವರಿಗೆ ಮುಖ ಮಾಡಲು ಅನುಕೂಲವಾಗುವ ಕಿಟಕಿಯೂ ಅಗತ್ಯವಿರುತ್ತದೆ. ಈ ಬಗ್ಗೆ ಮೊದಲ ಪದ್ಯದಲ್ಲಿ ಪ್ರಸ್ತಾಪವಿಲ್ಲ. ಆದರೆ ಎರಡನೆಯ ಪದ್ಯದಲ್ಲಿ ಗವಾಕ್ಷಿ ಕಿಟಕಿಗಳ ಪ್ರಸ್ತಾಪವಿದೆ. ಆ ಬಗ್ಗೆ ನೋಡೋಣ.

ಮೊದಲ ಹಾಗೂ ಎರಡನೆಯ ಪದ್ಯದಲ್ಲಿ ಒಂದೇ ಗವಾಕ್ಷದ ಪ್ರಸ್ತಾಪವಿದ್ದರೂ ಆಶಯ ಬೇರೆ. ಮೊದಲ ಪದ್ಯದಲ್ಲಿ ಗವಾಕ್ಷದ ಮೂಲಕ ಇಣುಕಿ ಹೊರಪ್ರಪಂಚವನ್ನು ಒಳಸೆಳೆದುಕೊಳ್ಳುವ ಅಗತ್ಯದ ಪ್ರಸ್ತಾವವಿದೆ. ಎರಡನೆಯ ಪದ್ಯದಲ್ಲಿ ಒಳಗಣ ಉಸಿರುಕಟ್ಟುವಿಕೆಯನ್ನು ಆಂತರಿಕ ಚಿಂತೆ ಸಂತಾಪಗಳನ್ನು ಹೊರಹಾಕುವ ಸಾಧನ – ಗವಾಕ್ಷ. ಈ ಗವಾಕ್ಷವೇನಾದರೂ ಮುಚ್ಚಿದರೆ ಅಂತರಂಗದ ಅಲ್ಲೋಲಕಲ್ಲೋಲಗಳು ಉಸಿರುಗಟ್ಟಿಸುತ್ತವೆ. ಒಳಜಗದ ಕೊಳೆಯನ್ನು ಹೊರಹಾಕುವ ಸಲುವಾಗಿ ಗವಾಕ್ಷ ಅಗತ್ಯ.

ಎರಡನೆಯ ಪದ್ಯ ನೇರವಾಗಿ ಪ್ರತಿಪಾದಿಸುವ ಸಂಗತಿ ಇದು : ಬಯಲಿನಲ್ಲಿ ಎಲ್ಲ ದಿಕ್ಕಿನ ದಾಳಿ ಎದುರಿಸಿ ನಿರಾಳವಾಗಿರದಂತೆ ಆಗುವ ಕಾರಣ ಗೋಡೆ ಹೇಗೆ ಅಗತ್ಯವೋ ಹಾಗೆಯೇ ಸೀಮಿತ ಮಟ್ಟದಲ್ಲಿ ಒಳಸೆಳೆದುಕೊಳ್ಳುವ ಹೊರಹಾಕುವ ಕ್ರಿಯೆಗಳಿಗೆ ಕಿಟಕಿ ಗವಾಕ್ಷಗಳು ಅನುವುಮಾಡಿಕೊಂಡು ಸಕಾರಣ ಅವೂ ಸಂತತದ ಅಗತ್ಯಗಳೇ !

ಮೇಲಿನ ಅಭಿಪ್ರಾಯಕ್ಕೆ ನಮ್ಮ ದೇಹವೂ ಉದಾಹರಣೆ. ನಮ್ಮ ದೇಹದ ಪ್ರತ್ಯೇಕತೆಯನ್ನು ಕಾಯ್ದುಕೊಳ್ಳಲು ಅನುವಾಗುವ ಹಾಗೆ ತೊಗಲಿನ ಕೋಟೆ ಇದೆ. ಅಂತೆಯೇ ಈ ತೊಗಲಿನ ಕೋಟೆಗೆ ವಿನಿಮಯಪೂರಕವಾಗಿ ಅನೇಕ ದ್ವಾರಗಳಿವೆ. ಈ ದ್ವಾರಗಳ ಮೂಲಕ ಸೇವನೆ ವಿಸರ್ಜನೆಗಳಾಗದಿದ್ದರೆ ಜೀವಕ್ಕೆ ಉಳಿಗಾಲವಿಲ್ಲ. ಬದುಕೆಂದರೆ ಉತ್ಪತ್ತಿಯಾದ ತ್ಯಾಜ್ಯವನ್ನು ಹೊರಹಾಕುವ, ಅಗತ್ಯ ಆಹಾರವನ್ನು ಸೇವಿಸುವ ವಿನಿಮಯ ಕ್ರಿಯೆ. ಈ ವಿನಿಮಯಕ್ರಿಯೆ ಜೀವಂತಿಕೆಗೆ ಸಾಕ್ಷಿ.

ಪ್ರಾಸಂಗಿಕವಾಗಿ ಹೇಳುವುದಾದರೆ, ಈ ವಿನಿಮಯ ನವರಂಧ್ರಗಳಿಂದ ಆಗುತ್ತಿದೆ ಎಂದು ಹಿಂದಿನಿಂದಲೂ ಬಣ್ಣಿಸುತ್ತಲೇ ಬಂದಿರುವುದು ಸುಳ್ಳು. ಮಾನವನು ಲಕ್ಷರಂಧ್ರಿ. ಚರ್ಮದಲ್ಲಿರುವ ಸ್ವೇದವಿಸರ್ಜಕ ರಂಧ್ರಗಳು ಅಗೋಚರವಾದರೂ ಅವು ನಿರಂತರ ಕ್ರಿಯಾಶೀಲವಾಗಿಲ್ಲವೆ ?

ಅಂತೂ ವಿನಿಮಯ ಅತಿಯೂ ಆಗದೆ, ಅಸಾಧ್ಯವೂ ಆಗದೆ ಇದ್ದಾಗ ಮಾತ್ರ ಬದುಕು. ಭೌತಿಕ ದೇಹವು ರುಜುವಾತುಪಡಿಸುವ ಈ ರೀತಿ-ನೀತಿ ಬೌದ್ಧಿಕ ವಿನಿಮಯದ ಮೂಲಕ ಮನಶ್ಶಾಂತಿ, ಸಮಷ್ಟಿ ಪ್ರಜ್ಞೆಗಳನ್ನೂ ಒದಗಿಸಿ ಆರೋಗ್ಯವಂತ ಸದಭಿರುಚಿಯ ಸತ್ಪ್ರಜೆಯನ್ನು ರೂಪಿಸಬಲ್ಲದು.

ಈಗ ನಾವು ವಾಸಿಸುವ ಮನೆಯ ರೂಪಕಕ್ಕೆ ಹಿಂತಿರುಗೋಣ. ಹಿಂದಿನ ಕಾಲದ ಹಾಗೆ ಈಗ ಗವಾಕ್ಷಗಳಿಲ್ಲ. ಹೀಗಾಗಿ ಆಕಾಶದ ಅನಂತದ ವೀಕ್ಷಣೆಯ ಮೂರನೆಯ ಕಣ್ಣು ಮುಚ್ಚಿಹೋಗಿ ಪ್ರಕೃತಿಯಿಂದ ದೂರ ಸರಿದಿದ್ದೇವೆ.

ಗಾಳಿ ಬೆಳಕುಗಳ ಅವಶ್ಯಕತೆಯ ಬಗೆಗೆ ಮನಗಂಡು ವಿಸ್ತಾರವಾದ ಕಿಟಕಿಗಳನ್ನು ಇರಿಸಿಕೊಂಡುಬಂದಿದ್ದೇವೆ. ಆದರೆ ಧೂಳಿಗೆ, ಕಳ್ಳಕಾಕರಿಗೆ, ಸೊಳ್ಳೆಗೆ ಹೆದರಿ ಇರುವ ಕಿಟಕಿ ಬಾಗಿಲುಗಳನ್ನು ಮುಚ್ಚಿ ಸದಾ ಉಸಿರುಗಟ್ಟುವ ವಾತಾವರಣದಲ್ಲಿದ್ದೇವೆ. ಕಿಟಕಿ ಇದ್ದೂ ವಿನಿಮಯವಿಲ್ಲ!

ಅದಕ್ಕೇ ಇರಬೇಕು, ಕನ್ನಡ ಕವನವೊಂದು ಹೀಗೆ ಸಾರುತ್ತದೆ.

ಬೆಳಕುಬಂದಿದೆ ಮನೆಯ ಹೊಸ್ತಿಲಾವರೆಗೆ
ಕಿಟಕಿ ಬಾಗಿಲ ತೆರೆದು ಬರಮಾಡು ಒಳಗೆ
ಹೇಳುವವರಿದ್ದಾರೇನೋ ಸರಿ; ಕೇಳುವವರು ? ಆಚರಿಸುವವರು ?

**ಪ್ರೊ॥ ಎಮ್. ಆರ್. ನಾಗರಾಜು**
ಎಫ್-೩, ಎಸ್‌ಎಫ್‌ಎಸ್ ನಿವಾಸಗಳು, ೭ನೇ 'ಬಿ' ಅಡ್ಡರಸ್ತೆ, ಯಲಹಂಕ ಉಪನಗರ, ಬೆಂಗಳೂರು - ೬೪

**HOSATHU** Kannada Monthly / July 2006 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.